# ಬರ್ಲಿನ್ ಬಂದಿತು ಗಂಗೆಯ ತಡೆಗೆ



ಮೂಲ ಲೇಖಕರು : ಭಾ. ದ. ಖೇರ,
ಸಹಸಂಪಾದಕರು : "ಕೇಸರಿ" ಪುಣೆ-೩೦

ಅನುವಾದಕರು : ಗೌರೀಶ ಕೈಕಿಣಿ
(ಗೋಕರ್ಣ)



ಸುಬೋಧ ಸಾಹಿತ್ಯ, ಧಾರವಾಡ

ಪ್ರಕಾಶಕರು :

ಶಂ. ವಾ. ಜಠಾರ

ಸುಬೋಧ ಸಾಹಿತ್ಯ

ಮಂಗಳವಾರ ಪೇಟೆ, ಧಾರವಾಡ.

ಪ್ರಥಮ ಆವೃತ್ತಿ–1974

ಬೆಲೆ : ಎಂಟು ರೂಪಾಯಿ

ಮಾರಾಟಗಾರರು :

ಭಾರತ ಬುಕ್ ಡಿಪೋ ಮತ್ತು ಪ್ರಕಾಶನ

ಸುಭಾಸರೋಡ, ಧಾರವಾಡ ೫೮೦೦೦೧

ಮುದ್ರಕರು :

ಸಿ. ಟಿ. ತಡಕೋಡ

ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್,

ಧಾರವಾಡ.

# ಪ್ರಕಾಶಕರ ನುಡಿ

ಸುಮಾರು ಮೂರು ವರ್ಷಗಳ ಹಿಂದೆ ನಮ್ಮ ಸುಬೋಧ ಸಾಹಿತ್ಯದ ಪ್ರಥಮ ಪ್ರಕಟನೆಯೆಂದು ಮ. ಗಾಂಧೀಯವರ ಹತ್ಯೆಯ ಒಳಸಂಚಿನ ಮೊಕದ್ದಮೆಯಲ್ಲಿಯ ಓರ್ವ ಆರೋಪಿಯೆಂದು ಜೀವಾವಧಿ ಶಿಕ್ಷೆಯನ್ನನುಭವಿಸಿದ ಶ್ರೀ ಗೋಪಾಲ ಗೊಡಸೆ ಅವರ ಮೂಲ ಮರಾಠಿ ಪುಸ್ತಕದ ಕನ್ನಡ ಅನುವಾದವು 'ಗಾಂಧೀ ಹತ್ಯೆ ಮತ್ತು ನಾನು' ಎಂಬ ಹೆಸರಿನಿಂದ ಪ್ರಕಟವಾಯಿತು. ಶ್ರೀ ಗೋಡಸೆ ಅವರ ಅತ್ಯಂತ ರೋಮಾಂಚಕಾರಕವಾದ ಈ ಪುಸ್ತಕದ ಕನ್ನಡ ಅನುವಾದವನ್ನು ನಾವು ಪ್ರಕಟಿಸಿ ಗಾಂಧೀ ಹತ್ಯೆಯ ಪೂರ್ವ ಪೀಠಿಕೆ, ಒಳಸಂಚಿನ ಬಗ್ಗೆ ನ್ಯಾಯಾಲಯದಲ್ಲಿ ನಡೆದ ವಿಚಾರಣೆ ಹಾಗೂ ಈ ಒಳಸಂಚಿನಲ್ಲಿಯ ಆರೋಪಿಗಳ ಕಾರವಾಸದಲ್ಲಿಯ ಅನೇಕ ರಹಸ್ಯಮಯ ಘಟನೆಗಳ ಮೇಲೆ ಬೆಳಕನ್ನು ಬೀರುವ ಅದ್ಭುತ ಹಾಗು ಕುತೂಹಲಕಾರಕ ವೃತ್ತಾಂತವನ್ನು ಓದುವ ಸುಸಂಧಿಯನ್ನು ಕನ್ನಡ ವಾಚಕರಿಗೆ ನಾವು ಒದಗಿಸಿಕೊಟ್ಟೆವೆಂದು ಅನೇಕಾನೇಕ ವಾಚಕರು ನಮಗೆ ಅಭಿನಂದನೆಗಳನ್ನು ಸಲ್ಲಿಸಿದರು.

ವಾಚಕರಿಂದ ದೊರೆತ ಈ ಪ್ರೋತ್ಸಾಹನೆಯಿಂದ ನಾವು ಪ್ರೋತ್ಸಾಹಿತರಾಗಿ ಈಗ ಮರಾಠಿಯಲ್ಲಿಯ ಓರ್ವ ಸುಪ್ರಸಿದ್ಧ ಲೇಖಕರೂ ಲೋ. ಟಿಳಕರ 'ಕೇಸರಿ' ಪತ್ರಿಕೆಯ ಸಹಸಂಪಾದಕರೂ ಆಗಿರುವ ಶ್ರೀ ಭಾ. ದ. ಖೇರ ಇವರು ಬರೆದ ಎಲ್ಲರ ಅಂತಃಕರಣವನ್ನು ಕೆದಕುವ ಕರುಣರಮ್ಯ ಕಾದಂಬರಿಯ ಕನ್ನಡ ಅನುವಾದವನ್ನು ಪ್ರಕಟಿಸುತ್ತಿದ್ದೇವೆ. ಜರ್ಮನಿಯಲ್ಲಿಯ ಹೈಡೆಲಬರ್ಗವೆಂಬ ಪ್ರಸಿದ್ಧ ಪುರಾತನ ಪಟ್ಟಣದಲ್ಲಿಯ 'ಇಂಡಿಯ ಬೀದಿ' ಎಂಬ ಹೆದ್ದಾರಿಯಲ್ಲಿ ವಾಸಿಸುತ್ತಿರುವ ಪ್ರಾ. ಮ್ಯುಲರರೆಂಬವರ ಕುಟುಂಬದ ಮೂರು ತಲೆಮಾರುಗಳು ಭಾರತೀಯ ಸಂಸ್ಕೃತಿಗೆ ಮೊರೆಹೊಕ್ಕದ್ದಲ್ಲದೆ ಅವರೆಲ್ಲರ ಅಸ್ಥಿವಿಸರ್ಜನೆಯೂ ನಮ್ಮ ಪವಿತ್ರ ಗಂಗಾ ನದಿಯಲ್ಲಾದ

ಅದ್ಭುತ ರಮ್ಯವಾದ ಘಟನೆಯ ಬಗ್ಗೆ ಈ ಕಾದಂಬರಿಯು ಬರೆಯಲಾಗಿದೆ. ಅಷ್ಟೇ ಅಲ್ಲ, ಲೇಖಕರಾದ ಶ್ರೀ ಭಾ. ದ. ಖೇರ ಅವರು ಸ್ವತಃ ಜರ್ಮನಿಗೆ ಹೋಗಿ ಮ್ಯೂಲರ ಕುಟುಂಬದವರ ಕರುಣ ರಮ್ಯವಾದ ಕಥೆಯಲ್ಲಿಯ ಘಟನೆಗಳನ್ನು ಸಂಭವಿಸಿದ ಪ್ರತಿಯೊಂದು ಸ್ಥಳವನ್ನೂ ಪ್ರತ್ಯಕ್ಷವಾಗಿ ಕಣ್ಣಾರೆ ಕಂಡು ಜರ್ಮನ–ಭಾರತ ಸಂಸ್ಕೃತಿ ಸಂಗಮದ ವಿಷಯವಾಗಿರುವ ಈ ಕಾದಂಬರಿಯನ್ನು ರೂಪಿಸಿದ್ದಾರೆ.

ಶ್ರೀ. ಭಾ. ದ. ಖೇರ ಅವರ ಈ ಪುಸ್ತಕದ ಹಾಗು ಮರಾಠಿಯಲ್ಲಿ ಪ್ರಕಟವಾಗಿರುವ ಅವರ ಇನ್ನಿತರ ಪುಸ್ತಕಗಳ ಕನ್ನಡ ಅನುವಾದಗಳನ್ನು ಪ್ರಕಟಿಸುವ ಹಕ್ಕುಗಳನ್ನು ನಮಗೆ ಒಳ್ಳೆ ಔದಾರ್ಯದಿಂದ ನೀಡಿದ್ದಕ್ಕಾಗಿ ಅವರಿಗೆ ನಮ್ಮ ಹೃತ್ಪೂರ್ವಕವಾದ ಧನ್ಯವಾದಗಳು.

ಹೊಸ ಕನ್ನಡದ ವಿಖ್ಯಾತ ಲೇಖಕರೂ, ಕವಿಗಳೂ ಹಾಗು ಕಾರವಾರ ಜಿಲ್ಹಾ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರೂ ಆಗಿದ್ದ ಶ್ರೀ ಗೌರೀಶ ಕೈಕಿಣಿ ಅವರು ತನ್ನದೇ ಆದ ವೈಶಿಷ್ಟ್ಯಪೂರ್ಣವಾದ ಭಾಷಾ ಶೈಲಿಯಲ್ಲಿ ಈ ಪುಸ್ತಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡದಲ್ಲಿ ಅನೇಕ ಪುಸ್ತಕಗಳನ್ನು ಬರೆದಿರುವ ಶ್ರೇಷ್ಠ ಸಾಹಿತಿ ಶ್ರೀ ಗೌರೀಶ ಕೈಕಿಣಿ ಅವರಂಥ ಬರಹಗಾರರ ನವ್ಯ ಭಾಷಾ ಶೈಲಿಯಲ್ಲಿ ಪ್ರಕಟವಾಗುತ್ತಿರುವ ಅನುವಾದವನ್ನು ಕನ್ನಡ ವಾಚಕರು ತುಂಬು ಮನಸ್ಸಿನಿಂದ ಸ್ವಾಗತಿಸುವರಾಗಿ ನಂಬಿದ್ದೇವೆ. ಶ್ರೀ ಗೌರೀಶ ಕೈಕಿಣಿಯವರಿಗೆ ನಮ್ಮ ಹೃತ್ಪೂರ್ವಕವಾದ ಧನ್ಯವಾದಗಳು.

ಸುಬೋಧ ಸಾಹಿತ್ಯದ ಮೊದಲನೆಯ ಪ್ರಕಟನೆ ಹೊರಬಿದ್ದ ಮೇಲೆ ಅನೇಕ ವಿಷಯಗಳಿಂದಾಗಿ ಇಷ್ಟು ದೀರ್ಘಾವಧಿಯ ಬಳಿಕ ಈ ನಮ್ಮ ಎರಡನೆಯ ಪ್ರಕಟನೆಯು ಬೆಳಕು ಕಾಣುತ್ತಿದೆ. ನಮ್ಮ ಮೊದಲನೆಯ ಪ್ರಕಟನೆಯಂತೆಯೇ ಈ ಪ್ರಕಟನೆಗಾದರೂ ವಾಚಕರಿಂದ ಹಾರ್ದಿಕ ಸ್ವಾಗತವು ಲಭಿಸುವದೆಂದು ಆಶಿಸುತ್ತೇವೆ.

'ಸುಬೋಧ ಸಾಹಿತ್ಯ'ವು ಇತರ ಭಾಷೆಗಳಲ್ಲಿಯ ಉತ್ತಮೋತ್ತಮ ಸಾಹಿತ್ಯದ ರುಚಿಯನ್ನು ಕನ್ನಡ ವಾಚಕರಿಗೆ ಉಣಿಸುವದಕ್ಕಾಗಿ ಅಯಾ ಭಾಷೆ

ಯಲ್ಲಿಯ ಉತ್ಕೃಷ್ಟ ಪುಸ್ತಕಗಳ ಅನುವಾದಗಳನ್ನು ಕನ್ನಡದಲ್ಲಿ ಪ್ರಕಟಿಸುವ ಕಾರ್ಯವನ್ನು ಕೈಕೊಂಡಂತೆ ಕನ್ನಡದಲ್ಲಿಯ ಉತ್ತಮೋತ್ತಮ ಸಾಹಿತ್ಯದ ಅನುವಾದವನ್ನು ಇತರ ಭಾಷೆಗಳಲ್ಲಿ ಪ್ರಕಟಿಸಿ ಆಯಾ ಭಾಷಿಕರಿಗೆ ಕನ್ನಡ ಸಾಹಿತ್ಯದ ರಸದೂಟವನ್ನುಣಿಸಬೇಕೆಂಬ ಯೋಜನೆಯನ್ನು ರೂಪಿಸಿಕೊಂಡಿದೆ. ಆದರೆ ಈಗಿನ ಕಾಗದದ ಕೊರತೆ ಹಾಗು ಮಿತಿಮೀರಿದ ಮುದ್ರಣ ವೆಚ್ಚದ ಮೂಲಕ ಇದಕ್ಕೆ ಸ್ವಲ್ಪ ಕಾಲಾವಧಿ ಬೇಕಾಗಬಹುದು.

ಈ ಪುಸ್ತಕವನ್ನು ಶ್ರೀ ಶಾರದಾ ಪ್ರಿಂಟಿಂಗ ಪ್ರೆಸ್ಸಿನ ಒಡೆಯರಾದ ಚ. ತಿ. ತಡಕೋಡ ಅವರು ಅತ್ಯಂತ ಸುಂದರವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಮತ್ತು ನನ್ನ ಆತ್ಮೀಯ ಸ್ನೇಹಿತರಾದ ಶ್ರೀ ಹುದ್ದಾರ ಮಧ್ವರಾವ ಅವರು ಈ ಕೆಲಸದಲ್ಲಿ ನಮಗೆ ಮಾಡಿದ ಸಹಾಯವು ಅಷ್ಟಿಷ್ಟಲ್ಲ. ನಮ್ಮಿಬ್ಬರ ಸ್ನೇಹ ಸಂಬಂಧಗಳಲ್ಲಿ ಯಾವುದೇ ಪ್ರಕಾರದ ಔಪಚಾರಿಕತೆ ಉಳಿದಿರದಿದ್ದರೂ ನಾನು ಅವರ ಬಗ್ಗೆ ಹಾರ್ದಿಕವಾದ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇನೆ.

ಈ ಪುಸ್ತಕದ ಪ್ರಕಾಶನ ಕಾರ್ಯದಲ್ಲಿ ಇನ್ನಿತರ ಎಷ್ಟೋ ಸ್ನೇಹಿತರು ಅನೇಕ ರೀತಿಯಿಂದ ಸಹಾಯ ಸಹಕಾರಗಳನ್ನಿತ್ತು ನಮ್ಮ ಈ ಪ್ರಕಾಶನ ಸಂಸ್ಥೆಗೆ ಪ್ರೋತ್ಸಾಹನೆಯನ್ನಿತ್ತಿದ್ದಾರೆ. ಅವರೆಲ್ಲರ ನಾಮನಿರ್ದೇಶ ಇಲ್ಲಿ ಮಾಡುವದು ಸಾಧ್ಯವಿಲ್ಲ. ನಾವು ಅವರೆಲ್ಲರಿಗೂ ನಮ್ಮ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಸುಬೋಧ ಸಾಹಿತ್ಯ
ಧಾರವಾಡ,
೧೫-೧೧-೧೯೭೪

ಶಂ. ನಾ. ಜಠಾರ

# ಲೇಖಕರ ನುಡಿ

**ಇಷ್ಟೊಂದು ಹೇಳಲೇ ಬೇಕು:**

ಹೈಡೆಲ್‌ಬರ್ಗ ಇದು ಜರ್ಮನಿಯಲ್ಲಿ ಒಂದು ಪ್ರಸಿದ್ಧ ನಗರ! ಆ ಸ್ಥಳದಲ್ಲಿ ಈ ಕರುಣರಮ್ಯ ಕಥೆ ನಡೆಯಿತು. ಜರ್ಮನಿಯೊಳಗಿನ ಆ ನಗರಗಳನ್ನೂ ನಾನು ಕಣ್ಣಾರೆ ಕಂಡೆನು. ಯಾವ ಯಾವ ಸ್ಥಳಗಳಲ್ಲಿ ಈ ಕಾದಂಬರಿಯು ಘಟಿಸಿತೋ ಆಯಾ ಸ್ಥಳಗಳ ಛಾಯಾ ಚಿತ್ರವನ್ನು ನನ್ನ ಅಂತಃಕರಣದಲ್ಲಿ ಕೊರೆದಿಟ್ಟುಕೊಂಡೆ. ಭಾರತಕ್ಕೆ ಹಿಂದಿರುಗಿದ ಮೇಲೆ ಈ ಕಾದಂಬರಿ ಹೊಸತಾಗಿ ಆಕಾರ ತಾಳಿತು.

ಸುಮಾರು ೧೨ ವರ್ಷಗಳ ಹಿಂದೆ ಶ್ರೀ. ಕೌಶಿಕರು 'ಕೇಸರಿ' ಯಲ್ಲಿ ಬರೆದ ಉತ್ಕೃಷ್ಟ ಕಥೆಯನ್ನು ಓದಿದ್ದೆ. ಅಂದಿನಿಂದಲೂ ಈ ಕಾದಂಬರಿಯ ಕಲ್ಪನೆ ನನ್ನ ಮನಸ್ಸಿನಲ್ಲಿ ರೂಪಗೊಳ್ಳುತ್ತಿತ್ತು. ಈಗೇನು ? ಆ ಕಾದಂಬರಿಯೊಳಗಿನ ಘಟನಾಸ್ಥಸಗಳನ್ನೂ ನಾನು ಪ್ರತ್ಯಕ್ಷ ಕಂಡೆನು. ಮತ್ತು ಈ "ಚಕ್ಷುರ್ವೈ ಸತ್ಯಂ" ಕಾದಂಬರಿ ಪ್ರತ್ಯಕ್ಷದಲ್ಲಿ ಅವತರಿಸಿತು. ಈ ಕಥೆ ನಿಜವಾಗಿಯೂ ಸತ್ಯ ಸೃಷ್ಟಿಯಲ್ಲಿ ನಡೆದಿರ ಬಹುದೇ? ಕಪೋಲ ಕಲ್ಪಿತ ಕಥೆಗಳಿಗಿಂತ ಸತ್ಯವು ಅನೇಕ ವೇಳೆ ಹೆಚ್ಚು ಅದ್ಭುತವಿರುತ್ತದೆ. ಪ್ರಸ್ತುತ ಕಾದಂಬರಿಯ ಕುರಿತು ಇಷ್ಟೊಂದು ನೆನಪಿನಲ್ಲಿ ಇಟ್ಟುಕೊಂಡರೂ ಸಾಕು.

ಜರ್ಮನ್ ಶಬ್ದೋಚ್ಚಾರಗಳ ಬಗೆಗೆ ಅವಿನಾಶ ಬಿನೀವಾಲೆ ಇವರ ಬಹುಮೂಲ್ಯ ಸಹಾಯವಾಗಿದೆ. ಇಂಡಿಯಾ ಪಬ್ಲಿಶಿಂಗ್ ಹೌಸದ ಚಾಲಕರಾದ ಮಿತ್ರವರ್ಯ ಶ್ರೀ ನರೇಂದ್ರ ಮಲ್ಲಿಕ್ ಇವರು ಈ ಕಾದಂಬರಿಯ ಪ್ರಕಾಶನದ ಕೆಲಸ ಕೈಗೆತ್ತಿಕೊಂಡರು– ಅದೂ ಕೇವಲ ಮರಾಠಿಯಲ್ಲಿ ಮಾತ್ರವಲ್ಲ, ಇಂಗ್ಲಿಷ ಮತ್ತು ಹಿಂದೀ ಭಾಷೆಗಳಲ್ಲಿಯೂ !

ಈ ಕಾದಂಬರಿಯ ಕೆಲಸದಲ್ಲಿ ಶ್ರೀ ಕ. ವಿ. ಪಿತ್ರೆ, ಶ್ರೀ ಭಾಸ್ಕರರಾವ ಕುಲಕರ್ಣಿ ಮತ್ತು ಸುಮನ ತುಡೇಕರ ಇವರು ಬೆಲೆಯುಳ್ಳ ನೆರವು ನೀಡಿದ್ದಾರೆ. ಇವರೆಲ್ಲರಿಗೂ ನಾನು ಆಭಾರಿ.

ನಾರಾಯಣ ಪೇಠ, ಪುಣೆ ೩೦ — ಭಾ. ದ. ಖೇರ
ಗಣೇಶ ಜಯಂತಿ ದಿ. ೯–೨–೧೯೭೦ (ಮೂಲ ಲೇಖಕರು)

# ಅಂತ್ಯದ ಆರಂಭ

ಹೈಡೆಲ ಬರ್ಗದ ರಾಜಮಾರ್ಗದಲ್ಲಿ ಕೈಯಲ್ಲಿ ಕೈಯಿಟ್ಟು ನಡೆಯುತಿದ್ದ ಆ ನವ ದಂಪತಿಗಳು ಆ ಓಣಿಯ ಬಾಯಿಗೆ ಬಂದಾಗ ಒಮ್ಮೆಲೆ ತಡೆದರು. ಅವರ ಕೈಗಳು ದೂರವಾದವು. ಅವರ ಪಿಸುಮಾತುಗಳು ಒಮ್ಮೆಲೆ ನಿಂತವು. ಆ ಮಾತುಗಳನ್ನು ಕೇಳುತ್ತಿರುವಾಗ ಅವರ ಮೋರೆಯ ಮೇಲೆ ಏರಿದ ಶೃಂಗಾರದ ಆಳವಾದ ಗುಲಾಬೀ ಬಣ್ಣವು ಒಮ್ಮೆಲೆ ಇಳಿಯಿತು. ಆ ಯುವಕನು ಆ ಯುವತಿಯ ಬೆನ್ನನ್ನು ತನ್ನ ಎಡಗೈಯಿಂದ ತಡವಿದಂತೆ ಮಾಡಿದನು ಮತ್ತು ಬಲಗೈಯಿಂದ ಆ ಓಣಿಯಲ್ಲಿ ಒಂದು ಮನೆಯತ್ತ ಬೆರಳೆತ್ತಿ ತೋರಿಸುತ್ತ ಅಂದನು:

"ಡೋರಾ, ನೋಡಿದೆಯಾ ಆ ಮನೆ? ಹೌದು ಅದೇ. ಆ ಮನೆಯಲ್ಲಿಯೇ ನಡೆಯಿತು ಆ ದುರ್ದೈವಿಯಾದ ಘಟನೆ. ಏನು ವಿಚಿತ್ರ! ಎಷ್ಟು ಅಕಲ್ಪಿತ! ಹೌದು. ಅದೇ ಈ ಮನೆ. ಸಂಶಯವೇ ಇಲ್ಲ. ಚೆನ್ನಾಗಿ ನೋಡಿಟ್ಟುಕೋ ಆ ಮನೆಯನ್ನು."

ಆ ಯುವತಿಯ ಲಕ್ಷ್ಯವು ಆ ಮನೆಯ ಮೇಲೆ ಸ್ಥಿರವಾಯಿತು.

ಹಾಉಫ್ಟ ಶ್ಟ್ರಾಸ್ ಇದು ಹೈಡೆಲ ಬರ್ಗದ ರಾಜರಸ್ತೆ. ರಾಜರಸ್ತೆ ಎಂದು ಅಂದರೂ ಅಲ್ಲಿಯ ರಹದಾರಿಗೆ ಅದು ಎಂದೂ ಪೂರ್ತಿ ಸಾಲು

ತ್ತಿದ್ದಿಲ್ಲ. ನೆಕರದಿಂದ ಶ್ಪೆಯರದವರೆಗೂ ನೇರ ಉದ್ದುದ್ದವಾಗಿ ಚಾಚಿದ ಈ ರಸ್ತೆಯು ಆ ಶಹರದ ವೈಭವವೆಂದೇ ಭಾವಿಸಲಾಗುತಿತ್ತು. ಕಿರಿಯಗಲಾದ ಹೊಳೆಗೆ ಅಲ್ಲಲ್ಲಿ ಕಾಲುವೆಗಳು ತೆರೆಯುವಂತೆ ಆ ಮುಖ್ಯ ಮಾರ್ಗಕ್ಕೆ ಎಡಬಲಗಳಿಂದ ಹಾದಿಗಳು ಒಡೆದಿದ್ದವು. ಅದರಿಂದ ಅಡ್ಡ-ಉದ್ದ ರಸ್ತೆಗಳ ಒಂದು ಜಾಲವೆ ಉಂಟಾಗಿತ್ತು. ಹಳೇಕಾಲದ ಆ ಜೇಡರ ಬಲೆಯನ್ನು ಝಾಡಿಸಿ ಒಗೆಯಲೋ ಎಂಬಂತೆ ಹದಿನೇಳನೆಯ ಶತಮಾನ ದಲ್ಲಿ ಆ ನಗರದ ಮೇಲೆ ಫ್ರೆಂಚರ ದಾಳಿ ಆಯಿತು. ಮತ್ತು ಇವೆಲ್ಲ ರಸ್ತೆಗಳು ಉಧ್ವಸ್ತವಾದವು. ಆದರೆ ಅವೆಲ್ಲ ಮತ್ತೆ ಎದ್ದವು, ಹಿಂದೆ ಇದ್ದಂತೆಯೇ!--ಬಿಂದುಮಾತ್ರೆಗಳ ಬದಲಾವಣೆ ಮಾಡದೆ ಅಪ್ಪನ ಮಾತನ್ನು ಪರಿಪಾಲಿಸುವದಿಲ್ಲವೆ? ಆ ರೀತಿ ಆ ರಸ್ತೆ ಹಳೆಯ ರಾಜಮಾರ್ಗ ಸರಳರೇಖೆಯಲ್ಲಿ ಇದ್ದಿಲ್ಲ. ಆದರೆ ಅದರದೇ ಹಳೆಯ ಜನಕ್ಕೆ ಒಂದು ದಿಮಾಕು! ಆ ಹಳೆಯ ದಿಮಾಕನ್ನು ಹೊಸ ರಸ್ತೆಯಲ್ಲಿಯೂ ಬೇಕಾಗಿ ನಿಲ್ಲಿಸಲಾಯಿತು. ಹೊಸ ರಸ್ತೆಯನ್ನು ಕಟ್ಟಿದ್ದು ಥೇಟು ಹಳೆ ಪದ್ಧತಿಯಂತೆಯೇ! ಕಲ್ಲು ಗಾರೆಗಳಲ್ಲಿಯೂ ಏನೊಂದು ವ್ಯತ್ಯಾಸ ಮಾಡದೇ ಒಬ್ಬ ಅಷ್ಟಾವಕ್ರ ಮನುಷ್ಯನಂತೆ ಕಾಣುವ ಆ ಹೊಸ ರಾಜರಸ್ತೆ ತಿರುಗಿ ವ್ಯೈವೆತ್ತಿತು. ಫ್ರೆಂಚರ ದಾಳಿಯೇ ಆಗಿದ್ದಿಲ್ಲವೋ ಎನ್ನುವಂತೆ, ಮಾನವನ ಜೀವನ ಮೂಲತಃ ಅಚ್ಚು ಕಟ್ಟಾಗಿ ಇಲ್ಲ- ಎಂಬುದನ್ನು ತೋರಿಸಲಿಕ್ಕೇನೋ ಎಂಬಂತೆ, ಆ ಹೆದ್ದಾರಿಯನ್ನು ಒಂದು ಅಂಚುಗಲ್ಲುಗಳಿಂದ ಕಟ್ಟಲಾಯಿತು. ಆ ರಸ್ತೆಯಲ್ಲಿ ನಡೆಯುವಾಗ ಬದುಕಿನ ತಗ್ಗು ದಿನ್ನೆ ಏರು ಪೇರುಗಳು ಮನುಷ್ಯನಿಗೆ ಗೊತ್ತಾಗಬೇಕು ಎಂಬುದೆ ಇದರ ಉದ್ದೇಶವಾಗಿತ್ತೋ ಏನೋ ಯಾರಿಗೆ ಗೊತ್ತು!

ಆ ಯುವತಿಯ ಕಣ್ಣು ನಟ್ಟ ಆ ಮನೆಯು ಆ ರಾಜರಸ್ತೆಯ ಒಂದು ಅಡ್ಡ ಕೇರಿಯಲ್ಲಿ ಇತ್ತು. ಈ ಕಿರಿಯಗಲಿನ ಕೇರಿಯಲ್ಲಿಯ ಹಾದಿಯೂ ಗುಂಡುಗಲ್ಲುಗಳದೇ ಆಗಿತ್ತು. ನಡೆದು ನಡೆದು ಕಲ್ಲು ಬೋಳಾಗಿದ್ದವು. ಕಲ್ಲುಗಳ ಮೇಲೆ ಕಪ್ಪು ಬಣ್ಣ ರಾಚಿತ್ತು. ಸಂಜೆಯ ಹೊತ್ತಿಗೆ ಆ ಕೇರಿಯೊಳಗಿನ ಇದಿರು ಬದಿರಿನ ಮನೆಗಳು ಹಣೆಗೆ ಹಣೆ ಹಚ್ಚಿ ನಿಂತಿರುವಂತೆ ಭಾಸವಾಗುತ್ತಿತ್ತು.

ಆ ಕೇರಿಯೊಳಗಿನ ಕಡೆಯ ಮನೆಯಿಂದ ಒಂದೊಂದೇ ಸಾಮಾನು ಹೊರಗೆ ಬೀಳುತ್ತಿದ್ದವು. ಪಾತ್ರೆ ಪೊಗಡೆ, ಪೀಠೋಪಕರಣ, ರೇಡಿಯೊ, ರೆಫ್ರಿಜರೇಟರ, ಫೋನೊ, ಫೋಟೋ ಫ್ರೇಮುಗಳು–ಇವೆಲ್ಲ ಸಾಮಾನು ಹೊರತರಲಾಗುತ್ತಿತ್ತು. ಕೇರಿಯೊಳಗಿನ ಕೆಲವು ಜನ ಆ ಕೆಲಸಕ್ಕೆ ನೆರವು ನೀಡುವದರಲ್ಲಿ ತೊಡಗಿದ್ದು ಕಂಡು ಬರುತ್ತಿತ್ತು. ಮತ್ತು ನೆರವು ನೀಡದ ಜನ ಜೋಲು ಮೋರೆ ಹಾಕಿ ಅದೆಲ್ಲ ಚಟುವಟಿಕೆಯನ್ನು ನೋಡುವದರಲ್ಲಿ ವ್ಯಗ್ರವಾಗಿದ್ದರು.

ಅಷ್ಟರಲ್ಲಿ ಎಂಟು ಹತ್ತುಮಂದಿ ಒಂದು ದೊಡ್ಡ ಚಪ್ಪರ–ಪಲ್ಲಂಗ ವನ್ನು ಹೊರಗೆ ತಂದರು. ಸೊರಬಾಗಿಲಿನೊಳಗಿಂದ ಆ ಪಲ್ಲಂಗ (ಮಂಚ) ವನ್ನು ಅಡ್ಡತಿಡ್ಡಮಾಡಿ ಹೊರಗೆ ತರಬೇಕಿತ್ತು. ಆ ಮನೆಯಲ್ಲಿ ನಡೆದ ಅಂಕು–ಡೊಂಕು ಘಟನೆಗಳಿಗೆ ಅದು ನಿದರ್ಶಕವಾಗಿತ್ತೋ ಎಂಬಂತೆ ಇತ್ತು. ಆ ಚಪ್ಪರಮಂಚ ಪೂರ್ತಿ ಹೊರಬಿದ್ದ ದೃಶ್ಯವನ್ನು ಕಂಡು ಆ ಕೇರಿಯ ಬದಿಗೆ ನಿಂತಿದ್ದ ತರುಣನೊಬ್ಬನು ತಮ್ಮ ಪಕ್ಕದಲ್ಲಿದ್ದ ತರುಣಿಗೆ ಮತ್ತೆ ಅಂದನು. ಇದೇ ಪರ್ಯಂಕವು ಕಳೆದ ಮೂರು ತಲೆಮಾರುಗಳ ಇತಿಹಾಸ ವನ್ನು ನೋಡಿದೆ. ಸುಖದುಃಖದ ಇತಿಹಾಸ! ಮತ್ತೆ ಈಗ ಇದೇ ಪರ್ಯಂಕವು ಇದೇ ಮನೆಯಲ್ಲಿ ಸಧ್ಯವೇ ನಡೆದ ಆ ದುರ್ಘಟನೆಯನ್ನು ನೋಡಿತು. ಇಡಿಯ ಮನೆಯನ್ನೇ ಬೀದಿಗೆ ತಂದೊಗೆದ ಮೇಲೆ ಈಗ ತಾನೇ ಬೀದಿಗೆ ಬಂದಿದೆ–ಮನೆಯ ಮೂಲಪುರುಷನಂತೆ!

ತುಸುಹೊತ್ತು ಸ್ತಬ್ಧತೆ ನೆಲೆಸಿತು. ಒಮ್ಮೆಲೆ ಆ ಮನೆಯ ತಲೆ ಬಾಗಿಲ ಬಳಿಗೆ ನಡುಪ್ರಾಯದ ಒಬ್ಬ ಹೆಣ್ಣು ಕಾಣಿಸಿಕೊಂಡಳು. ಅವಳ ಕಡೆಗೆ ನೋಡುತ್ತ ಸುತ್ತಲೂ ನಿಂತ ಎಷ್ಟೋ ಜನ ಎರಡೂ ಕೈಗಳಿಂದ ತಮ್ಮ ಮೋರೆ ಮುಚ್ಚಿಕೊಂಡರು. ಎಷ್ಟೋ ಜನ ಬಿಕ್ಕಿ ಅತ್ತರು ಅವರ ಬಿಕ್ಕು ದೂರದವರೆಗೂ ಕೇಳಿಸಿದವು.

ಆ ಯುವಕ ಪಕ್ಕದ ಯುವತಿಗೆ ಗಾಬರಿ ಗಾಬರಿಯಾಗಿ ಅಂದನು: "ಅದು ನೋಡು ಎಂಥ ದುರ್ದೈವಿ! ಈ ಹೆಂಗಸನ್ನು ನೀನು ಹಿಂದೆ ಎಂದಾದರೂ ನೋಡಿದ್ದುಂಟೇ ?"

ಆ ಯುವತಿ ನಕಾರಭಾವದಿಂದ ತಲೆ ಅಲ್ಲಾಡಿಸಿದಳು. ಆಗ ಆ ತರುಣ ಮುಂದರಿದನು. "ಅಂದ್ಹಾಂಗ ನೀನಾದರೂ ಹೇಗೆ ನೋಡುವಿ? ನಮ್ಮ ಮದುವೆಯಾಗಿ ಹೈಲಬರ್ನದಿಂದ ಸದ್ಯವೇ ನೀನು ಇಲ್ಲಿಗೆ ಬಂದಿದ್ದು ಇಲ್ಲವಾದರೆ ಆ ಏರ್ನಾಳ ಪರಿಚಯವಿಲ್ಲದ ಜನ ಈ ಊರಿನಲ್ಲಿಯೆ ಸಿಗಲಿಕ್ಕಿಲ್ಲ, ನಿನಗೇನು ಗೊತ್ತು"... ....

ಆದರೆ ಯುವಕನ ಮಾತು ಅರ್ಧಕ್ಕೆ ನಿಂತಿತು. ಅವನ ಲಕ್ಷ್ಯ ಮನೆಯ ಬಾಗಿಲಿಗೆ ಬಂದು ನಿಂತ ಇನ್ನೊಬ್ಬ ಯುವತಿಯ ಕಡೆಗೆ ಹಾಯಿತು. ಆ ಯುವತಿಯ ಬಗೆಗೆ ಡೋರಾ ಏನೊ ಕೇಳುವವಳು. ಅಷ್ಟರಲ್ಲಿ ಆ ಯುವಕನೆ ಹೇಳಲು ಆರಂಭಿಸಿದನು. "ಡೋರಾ ಏರ್ನಾಳ ಆಚೆಗೆ ನಿಂತ ಆ ಯುವತಿ ಇದ್ದಾಳಲ್ಲ? ಆಕೆ ಭಾರತೀಯ ಹುಡುಗಿ ಬಲ್ಲೆಯಾ? ಏರ್ನಾ ಜರ್ಮನ ಹೆಂಗಸು ಮತ್ತು ಅವಳ ಪಕ್ಕದಲ್ಲಿ ಇವಳು ಭಾರತೀಯ ಹುಡುಗಿ, ಎಂಥ ವಿಚಿತ್ರ ಯೋಗಾಯೋಗವಿದು ನೋಡು! ಅಂದರೆ ಆ ಮನೆಯಲ್ಲಿ ಎರಡು ಸಂಸ್ಕೃತಿಗಳ ಸಂಗಮ ಆಗಿದೆಯೆಂದು ಹೇಳಲ್ಲ! ಆದರೆ ಈ ಸಂಗಮದ ಮೂಲಕವೇ ಆ ಮನೆಯಲ್ಲಿ ಸೌಖ್ಯವೆಲ್ಲ ಪೂರಾ ತೊಳೆದು ಹೋಯಿತು. ಮತ್ತು ಅವರಿಬ್ಬರನ್ನು ರಸ್ತೆಗೆ ತಂದು ಬಿಟ್ಟಂತೆ ಆಯಿತು. ಹೌದು, ಅಕ್ಷರಶಃ ರಸ್ತೆಯ ಮೇಲೆ!"

ಆಮೇಲೆ ಆ ಯುವಕನು ತನ್ನೊಳಗೆ ಮಾತಾಡ ಹತ್ತಿದನು. "ಎಲ್ಲಿ ಜರ್ಮನಿ, ಎಲ್ಲಿ ಭಾರತ? ಇಲ್ಲಿಯ ಈ ನೇಕರ ನದಿ ಮತ್ತು ಅಲ್ಲಿಯ ಆ ಗಂಗಾ! ಇವೆರಡೂ ನದಿಗಳ ಪ್ರವಾಹಗಳು ಒಂದನ್ನೊಂದು ಕೂಡಿ ಬೆರೆತು ಹೋದವು. ಅವರಿಬ್ಬರ ರೂಪದಲ್ಲಿ ಕೆಲಕಾಲ ಇವೆರಡು ದೇಶಗಳ ಭಿನ್ನ ಸಂಸ್ಕೃತಿಗಳು ಒಂದಾದವು. ಅವುಗಳ ಪ್ರವಾಹಗಳು ಒಂದನ್ನೊಂದು ಸೇರಿದವು ಮತ್ತು ಕೊನೆಗೆ ದುಃಖದ ಮಹಾಸಾಗರದಲ್ಲಿ ವಿಲೀನವಾದವು".

ಡೋರಾ ಅವನ ವಿಚಾರದಲ್ಲಿ ಮಗ್ನವಾದ ಮುಖದತ್ತ ನೋಡುತ್ತ ಇದ್ದಳು. ಆ ಯುವಕ ತನ್ನದೇ ತಂದ್ರೆಯಲ್ಲಿ ಅನ್ನುತಿದ್ದನು. "ಆಗ ಈ ಮನೆಯಲ್ಲಿ ಉಳಿದು ಏನು ಮಾಡುವದಿದೆ? ಈ ಮನೆಯೆ ಅವಳನ್ನು ಈ ಅವಸ್ಥೆಗೆ ತಂದಿತು. ಕೆಲವು ವಾಸ್ತುಗಳೆ ಹೀಗೆ ಇದ್ದಿರಬೇಕು. ಅವಳಿಗೆ

ಇನ್ನು ಈ ಮನೆಯಲ್ಲಿ ಉಳಿಯುವದು ಅಶಕ್ಯವಾಗಿದೆ. ಈ ಮನೆಯಲ್ಲಿ ಅವಳ ಕಣ್ಣೆದುರಿಗೆ ನಡೆದ ದುರ್ದೈವದ ಇತಿಹಾಸವು ಅವಳಿಗೆ ಸಹನವಾಗುವದು ಅಶಕ್ಯ, ಇನ್ನು ಮನೆಬಿಟ್ಟರೂ ಆ ದುರ್ದೈವಿ ನೆನಹುಗಳ ಭೂತಗಳು ಅವಳನ್ನು ಬಿಟ್ಟು ಹೋಗುವದು ಅಷ್ಟರಲ್ಲಿಯೆ ಇದೆ! ಆದರೂ ಬದಲಾವಣೆ ಆದರೆ ಮನುಷ್ಯನಿಗೆ ಕೆಲಮಟ್ಟಿಗೆ ಸಮಾಧಾನ ಅನಿಸುತ್ತದೆ ಅಲ್ಲವೆ?"

ಆ ಯುವಕನ ತಂದ್ರೆಯು ನಡುವೆ ಭಂಗವಾಯಿತು. ಡೋರಾ ಅವನಿಗೆ ಕೇಳುತಿದ್ದಳು. "ಆ ಇಬ್ಬರು ಹೆಂಗಸರಲ್ಲಿ ಏನಾದರೂ ಸಂಬಂಧ ಉಂಟೇ ?"

ಆ ಯುವಕ ಉತ್ತರವಿತ್ತ. "ಇಲ್ಲದೆ ಮತ್ತೆ! ಆ ಕಡೆಯ ಆ ಪ್ರೌಢ ಮಹಿಳೆ ಇದ್ದಾಳಲ್ಲ ಅವಳಿಗೆ ಆ ಕಡೆಯ ಆ ತರುಣಿ ಸೊಸೆ:—ಹೌದು ಸೊಸೆಯೇ! ಆದರೆ ಅದರಲ್ಲಿಯೂ ಒಂದು ದೌರ್ಭಾಗ್ಯ ಅಡಕವಾಗಿದೆ. ಅವಳು ಸೊಸೆಯೇನೋ ನಿಜ. ಆದರೆ ಆ ಮಹಿಳೆಯ ಮಗ ತೀರಿಕೊಂಡ, ಆಮೇಲೆ ಇವಳು ಸೊಸೆಯಾದಳು. ಮಗನ-ಮರಣದ ನಂತರ ಸೊಸೆಯ ಸಂಬಂಧ ಉಂಟಾಯಿತು. ಹೌದಲ್ಲವೇ? ಇದೊಂದು ದೈವದ ದುರ್ವಿಲಾಸ? ಈ ಸಂಬಂಧಕ್ಕಾಗಿ ಆಕೆ ಎಂಥ ದೊಡ್ಡ ಬೆಲೆ ತೆರಬೇಕಾಯಿತು! ಓ ಭಾರಿ ದೊಡ್ಡ ಬೆಲೆ!"

ಏನಾದರೂ ಅನ್ನಬೇಕೆಂದು ಡೋರಾ ಅಂದಳು: "ನಿಜವೇ ?"

"ಡೋರಾ, ನಿನಗೆ ಕಲ್ಪನೆ ಇಲ್ಲ. ಒಂದು ಕಾಲದಲ್ಲಿ ಆ ಮಹಿಳೆಯ ರುಬಾಬು ಏನು! ದಿಮಾಕು ಏನು! ಮಹಾ ಶಿಸ್ತಿನ ನಿಷ್ಠುರ ಹೆಂಗಸು! ಅವಳ ಆ ಶಿಸ್ತಿನ ಉಗ್ರ ಮುದ್ರೆ, ಇಡಿಯ ಮನೆಯ ಮೇಲೆ ಒತ್ತಿದಂತೆ ಇತ್ತು. ಆದರೆ ಹೋರಾಟದ ಹೊರತು ಆ ಒಡಪಾಯಿಯ ಪಾಲಿಗೆ ಬೇರೆ ಏನೂ ಬರಲಿಲ್ಲ. ಅವಳ ಮನೆಯಲ್ಲಿ ಭಾರತೀಯ ಸಂಸ್ಕೃತಿಯು ಪ್ರವೇಶ ಮಾಡಿತು. ಅವಳ ಇಡೀ ಮನೆಯನ್ನು ಆ ಸಂಸ್ಕೃತಿ ವ್ಯಾಪಿಸಿತು. ಅದು ಅವಳಿಗೆ ಎಂದೂ ಏನೇನೂ ಸೇರಿಬರಲಿಲ್ಲ, ರುಚಿಸಲಿಲ್ಲ, ಸಹನವೂ ಆಗಲಿಲ್ಲ. ಅವಳ ಮಾವ, ಅವಳ ಗಂಡ ಮತ್ತು ಕೆಲಮಟ್ಟಿಗೆ ಅವಳ ಮಗನೂ ಆ ಭಾರತೀಯ

ಸಂಸ್ಕೃತಿಯ ಭೂತ ಬಾಧೆಗೆ ಬಲಿಯಾದರು. ಆದರೆ ಈ ಒಡವೆಯು ಮಾತ್ರ ಅವರೊಂದಿಗೆ ಹೋರಾಡಿಯೇ ಹೋರಾಡಿದಳು; ಮತ್ತು ಕೊನೆಗೂ ಬೀದಿಗೆ ಬಿದ್ದಳು. ಭಾರತೀಯ ಸಂಸ್ಕೃತಿಗೆ ವಶವಾಗಿ ಆ ಮೂವರಿಗೆ ಸ್ವರ್ಗ ಲಭಿಸಿತೋ ಇಲ್ಲವೋ ಯಾರಿಗೆ ಗೊತ್ತು? ಆದರೆ ಇವಳು ಮಾತ್ರ ನರಕದಲ್ಲಿ ಬಿದ್ದಳು. ತನ್ನ ಭಾರತೀಯ ಸೊಸೆಯನ್ನು ಸಂಗಡ ತೆಗೆದುಕೊಂಡು! ಈ ಮನೆಯ ಕಥೆ ಎಷ್ಟು ದುರ್ಭಾಗ್ಯದ್ದೋ ಅಷ್ಟೇ ವಿಚಿತ್ರವಾದದ್ದು, ಅದ್ಭುತ ವಾದದ್ದು! ಸತ್ಯವೆಂದೇ ಅನಿಸಲಿಕ್ಕಿಲ್ಲ! ಆದರೆ ಸುಳ್ಳೆಂದಾದರೂ ಹೇಗೆ ಹೇಳ ಬೇಕು? ಎಲ್ಲವೂ ಕಣ್ಣೆದುರಿಗೆ ಘಟಿಸಿದ್ದು! ಛೇ! ವಿಪರೀತ ಭಯಂಕರ!

ಹೀಗೆಂದು ಆ ಯುವಕ ಮೈಗೆ ಮುಟ್ಟಿದಂತೆ ಜುಮ್ಮನೆ ಮೈಯೆಲ್ಲ ನಡುಗಿದನು.

ಇಡಿಯ ವಾತಾವರಣವೇ ಜುಮ್ಮುಗುಡುತ್ತಿತ್ತು. ಸಂಜೆಯು ಚಳಿಯ ಚಾದರನ್ನು ಹೊದ್ದುಕೊಂಡಿತ್ತು. ಚಳಿಯ ದಿನಗಳಲ್ಲಿ ಎಲ್ಲವೂ ತಣ್ಣಗೆ. ಸೂರ್ಯನು ತನ್ನ ಕಾವಿನ ತೋಳತೆಕ್ಕೆಯನ್ನು ಸಡಿಲಿಸಿ ಹಿಂತೆಗೆದುಕೊಂಡೊ ಡನೆ, ಸೃಷ್ಟಿಯ ಕೊರಳಿಗೆ ಚಳಿ ಕುಳಿರಿನ ಕರಪಾಶಗಳು ಬೀಳುವವು. ಇಡಿಯ ವಾತಾವರಣವೆ ಸೆಟೆದು ಮರಗಟ್ಟಿತ್ತು.

ರಾಜರಸ್ತೆಯಲ್ಲಿ ಒಂದು ಟ್ರಾಮುಗಾಡಿಯು ಖಡಖಡ ಸದ್ದು ಮಾಡುತ್ತ ಬಂದಿತು. ಮತ್ತು ಹಾಗೆಯೇ ಹೊರಟು ಹೋಯಿತು–ಅದೇ ಆಲಸಿಕೆಯ ಅವಸ್ಥೆಯಲ್ಲಿ ಆ ಗಾಡಿಯ ಗಾತ್ರಗಳೂ, ಚಳಿಗೆ ಸೆಟೆದು ಹೋಗಿದ್ದವೋ ಏನೋ!

ಆ ಟ್ರಾಮುಗಾಡಿ ಕಾಣದಂತೆ ಆದಮೇಲೆ, ಆ ನವದಂಪತಿಗಳು ತಮ್ಮ ಹಾದಿ ಹಿಡಿದು ತೆರಳಿದರು. ತುಸು ಅಂತರ ನಡೆದ ಮೇಲೆ ಅವರಿಬ್ಬರ ಕೈ ಗಳು ಮತ್ತೆ ಒಂದನ್ನೊಂದು ಸೇರಿ ಬಳಸಿಕೊಂಡವು. ಅವರಿಬ್ಬರ ನಡುವಿನ ಅಂತರವು ಕಡಿಮೆ ಆಯಿತು. ಮತ್ತೆ ಅವರ ಇನಿದನಿಯ ಪಿಸುಮಾತುಗಳು ಸುರುವಾದವು. ಆದರೆ ಅವರ ಮೋರೆಯ ಮೇಲೆ ಮಾತ್ರ ಮತ್ತೆ ಶೃಂಗಾರದ "ರಾಗರತಿಯ ರಂಗು" ಏರಲಿಲ್ಲ.

ನದಿಯ ತೀರದ ಒಂದು ಓಕ ಮರದಡಿಗೆ ಆ ಜೋಡಿ ಕೂತುಕೊಂಡಿತು. ಆದರೂ ಅವರ ಸರಸಸಲ್ಲಾಪಕ್ಕೆ ರಸವೇರಲೊಲ್ಲದು. ಅವರಲ್ಲಿ ಶೃಂಗಾರದ "ಕೆಂದಲಂಪು" ಅರಳಲೊಲ್ಲದು. ಸಂಜೆಯ ವಿಚಿತ್ರ ಗೂಢತೆ ಎಲ್ಲೆಡೆಗೆ ಹಬ್ಬಿತ್ತು. ದಿಕ್ಕುಗಳು ಮಸುಕಾಗಿದ್ದವು–ಮುಸುಕಿದ ಮಬ್ಬಿನಲ್ಲಿ. ಇದು ರಿಗೆ ನದಿಯು ಹರಿಯುತ್ತಿತ್ತು. ನದಿಯ ಆಚೆಯ ರಸ್ತೆಯಲ್ಲಿ ನಿದಾನವಾಗಿ ವೇಳೆಗಳೆಯುತ್ತ ಹೋಗುವ ಮಂದಿ, ವೇಗದಿಂದ ಹೋಗುವ ವಾಹನಗಳು ಸೂತ್ರದ ಗೊಂಬೆಗಳಂತೆ ಚಲಿಸುವದು ಕಾಣುತ್ತಿತ್ತು. ಅನೇಕ ಯುವ–ಯುವತಿ ಯುಗ್ಮಗಳು ಕೈಯಲ್ಲಿ ಕೈಯಿಟ್ಟು, ಹೆಗಲಿಗೆ ಹೆಗಲಿಟ್ಟು, ಒಬ್ಬರಿಗೊಬ್ಬರು ಕಿವಿಯಲ್ಲಿ ಕಣಜನ ಮಾಡುತ್ತ ನಡೆದಿದ್ದವು. ಇದೆಲ್ಲ ದೃಶ್ಯವು ಒಂದು ಮೂಕ ಚಿತ್ರಪಟದಂತೆ ಭಾಸವಾಗುತ್ತಿತ್ತು. ಆ ದೃಶ್ಯದಲ್ಲಿ ಚಲನ ವಲನವಿತ್ತು, ಆದರೆ ಪ್ರಾಣವಿದ್ದಿಲ್ಲ, ನದಿಯ ಸೇತುವೆಯ ಮೇಲೆ ಮುದಿ ದಂಪತಿಗಳು ಖಿನ್ನ ದೃಷ್ಟಿಯಿಂದ ನದಿಯ ಪ್ರವಾಹದತ್ತ ನೋಡುತ್ತಿದ್ದರು–ಇಬ್ಬರು ವೃದ್ಧರ ಪ್ರತಿಮೆಗಳನ್ನು ಅಲ್ಲಿ ಅಕ್ಕಪಕ್ಕದಲ್ಲಿ ನಿಲ್ಲಿಸಿದ್ದು, ಅವುಗಳ ಕಣ್ಣು ನದಿಯ ಆಚೆಯ ದಂಡೆಯ ಮೇಲೆ ನಟ್ಟಿದ್ದವೋ ಎಂದು ಅನಿಸುವಂತಿತ್ತು. ನದಿಯೂ ಹರಿಯುತ್ತಲೇ ಇತ್ತು. ಅದು ಹಾಗೆ ಹರಿಯುತ್ತಲೆ ಇರುವದು.

ಹರಟೆಗೆ ಕಳೆ ಏರಲೊಲ್ಲದು ಎಂದು ಕಂಡು ಡೋರಾ ಗಂಡನಿಗೆ ಅಂದಳು. "ಆ ಹೆಂಗಸು ಇನ್ನೂ ನಿನ್ನ ಕಣ್ಣೆದುರಿಂದ ಅಲ್ಲಾಡುವದಿಲ್ಲವೆಂದು ತೋರುತ್ತದೆ!"

ಯಾವದೋ ಕನಸಿನಿಂದ ಎಚ್ಚತ್ತಂತೆ ಆ ಯುವಕನು ಅಂದನು. "ಹೌದು, ನೀನಂದದ್ದು ನಿಜ. ಆ ಹೆಂಗಸು ಮಾತ್ರವಲ್ಲ, ಅವಳ ಆ ಅದ್ಭುತ ಕಥೆಯೂ ಕೂಡ!"

ಆ ಯುವಕನು ಉತ್ತರವಿತ್ತನು, ಮತ್ತು ಅವನ ದೃಷ್ಟಿ ಆ ನದಿಯ ಪ್ರವಾಹದ ಮೇಲೆ ಸ್ಥಿರವಾಯಿತು. ಆ ಪ್ರವಾಹದ ಮೇಲೆ ಚೆಲ್ಲಿದ ಸಂಜೆಯ ನೆರಳುಗಳು ಈಗ ಮಸು ಮಸುಕಾಗ ತೊಡಗಿದ್ದವು. ಆದರೆ ಆ ಪ್ರವಾಹದ ಬದಲು ಅಲ್ಲಿ ಆ ಯುವಕನಿಗೆ ಕಾಣಹತ್ತಿದ್ದು ಆ ಹೆಂಗಸಿನ ಇಡಿಯ ಕರುಣ

ಕಥೆ. ಆ ಯುವಕನು ಆ ಪ್ರವಾಹದತ್ತ ನೋಡುತ್ತಲೆ ಇದ್ದ. ಅವನ ವೃತ್ತಿಯೂ ತಲ್ಲೀನವಾಗಿತ್ತು. ಆ ಹೆಂಗಸಿನ ಕಥೆ ಎಂದು ಆರಂಭವಾಯಿತು ಎಂದು ಮುಗಿಯಿತು – ಇದೂ ಅವನಿಗೆ ತಿಳಿಯದಂತೆ ಆಯಿತು. ಅದೆಷ್ಟೋ ನೀರು ಆ ಸೇತುವೆಯ ಕೆಳಗಿಂದ ಹರಿದು ಹೋಗಿತ್ತು ನೋಡ ನೋಡುತ್ತ ತೀರ ಕಣ್ಣ ಮುಂದೆಯೇ ಆ ಹೃದಯದ್ರಾವಕ ಕಥೆಯೊಂದಿಗೆ ನೇಕರ ನದಿಯೂ ಹರಿಯುತ್ತಲೇ ಇತ್ತು.

## ಭಾಗ : ೧

ಹೈಡೆಲಬರ್ಗ ಇದು ಜರ್ಮನಿಯೊಳಗಿನ ಒಂದು ಪ್ರಸಿದ್ಧ ನಗರ. ಮ್ಯುಲರ ಕುಟುಂಬ ಆ ನಗರದಲ್ಲಿಯ ಪ್ರಸಿದ್ಧ ಮನೆತನ ಮತ್ತು ಏರ್ನಾ ಆ ಕುಟುಂಬದೊಳಗಿನ ಪ್ರಸಿದ್ಧ ಹೆಂಗಸು. ಈ ಮೂವರೂ ಪ್ರಸಿದ್ಧವಿದ್ದರು. ಆವರವರ ಪ್ರಸಿದ್ಧಿಯ ಕಾರಣಗಳು ಮಾತ್ರ ತೀರ ಬೇರೆ ಬೇರೆ. ಹೈಡೆಲಬರ್ಗ ಜರ್ಮನಿಯೊಳಗಿನ ಎಲ್ಲಕ್ಕೂ ಪುರಾತನ ಪಟ್ಟಣವೆಂದು ಪ್ರಸಿದ್ಧ. ಮ್ಯುಲರ ಕುಟುಂಬವು ಭಾರತೀಯ ಸಂಸ್ಕೃತಿಯ ಅಪಾರ ಅಭಿಮಾನಿಯೆಂದು ಪ್ರಸಿದ್ಧ. ಹಾಗೆಯೆ ಏರ್ನಾ ಈಕೆ ಆ ಕುಟುಂಬದ ಯಜಮಾನಿ. ಭಾರತೀಯ ಸಂಸ್ಕೃತಿಯ ನಿಷ್ಠುರ ದ್ವೇಷ ಮಾಡುವಾಕೆಯೆಂದು ಪ್ರಸಿದ್ಧ !

ಹೈಡೆಲಬರ್ಗ ನಗರಕ್ಕೆ ಸಮಾಂತರವಾಗಿ ಹನ್ನೆರಡು ತಿಂಗಳು ಹರಿಯುವ ಹೊಳೆಯ ಹೆಸರು ನೇಕರ ಈ ಹೊಳೆಯು ಆ ನಗರದೊಳಗಿಂದ ಪೂರ್ವದಿಂದ ಪಶ್ಚಿಮಕ್ಕೆ ಹರಿಯುತ್ತದೆ. ಈ ನದಿಯು ನಗರವನ್ನು ಇಬ್ಭಾಗಿಸಿದೆ. ಹಳೆಯ ಪ್ರಮುಖ ನಗರವು ದಕ್ಷಿಣ ದಿಕ್ಕಿನಲ್ಲಿ ನೆಲೆಸಿದೆಯಾದರೆ ಹೊಸ ನಗರವು ಉತ್ತರ ದಿಕ್ಕಿನಲ್ಲಿ ಕೈಕಾಲು ಚಾಚ ಹತ್ತಿದೆ. ನಗರಕ್ಕೆ ಸಮಾಂತರವಾಗಿ ಹಾಯುವ ಹೌಪ್ಟಶ್ಟ್ರಾಸ ಇದು ಹೈಡೆಲಬರ್ಗದ ರಾಜರಸ್ತೆ. ಆದರೆ ಹೊಳೆಯ ದಂಡೆಗುಂಟ ಸಮಾಂತರವಾಗಿ ಹೋಗುವದರಿಂದ ಆ ರಸ್ತೆಗೆ 'ಉಫರ ಶ್ಟ್ರಾಸ'— ಅಂದರೆ ದಂಡೆಯ ರಸ್ತೆ ಎಂಬ ಹೆಸರು ಬಿದ್ದಿದೆ.

ಈ ಮಾರ್ಗದಿಂದ ಪೂರ್ವ ದಿಕ್ಕಿಗೆ ಹೊರಟರೆ "ಕಾರ್ನ ಮಾರ್ಕೇಟ" ಕಡೆಗೆ ರಸ್ತೆಯು ಹೋಗುತ್ತದೆ. ಈ ಮಾರ್ಕೇಟಿಗೆ ಹೋಗುವ ಮೊದಲೆ ಊರ ಮಂದಿ ಊರಿಗೆ ಬಂದ ಅಭ್ಯಾಗತನಿಗೆ ಒಳ್ಳೆ ಅಭಿಮಾನದಿಂದ ಮಾಹಿತಿ ಪೂರೈಸ ಬಹುದು. "ನೀವು ಆ ಭಾಗಕ್ಕೆ ಹೊರಟೇ ಇರುವಿರಿ. ಆ ಭಾಗದಲ್ಲಿ 'ಪ್ರಿನ್ಸ ಕಾರ್ಲ' ಹಾಟೆಲಿಗೆ ಭೆಟ್ಟಿ ನೀಡಲು ಮಾತ್ರ ಮರೆಯಬೇಡಿ, ಬಲ್ಲಿರಾ?"

ಈ ಹಾಟೆಲಿಗೆ ಹೋಗುವ ಮನೊಗತವನ್ನು ನೀವು ಆಡಿ ತೋರಿಸಿ ದರೆ ಸರಿಯೆ. ಇಲ್ಲವಾದರೆ ಅಲ್ಲಿಗೆ ಹೋಗಲಿಕ್ಕೆ ನಿಮ್ಮ ಮನಸ್ಸನ್ನು ಇನ್ನೂ ಒಲಿಸಲಿಕ್ಕೆ ಆ ಮಂದಿ ಹೇಳಬಹುದು. "ಸ್ವಾಮೀ, 'ಪ್ರಿನ್ಸ ಕಾರ್ಲ' ಇದು ಪ್ರಥಮ ದರ್ಜೆಯ ಹಾಟೆಲು, ತಿಳಿಯಿತೇ? ಆ ಹಾಟೆಲಿನಲ್ಲಿ ಬಿಸ್ಮಾರ್ಕ್ ಮತ್ತು ಯೋಸೆಫ ಆಯಿಶೆನ್ ಡೊರ್ಫರಂಥ ಜನ ಮುಕ್ಕಾಮು ಮಾಡುತ್ತಿ ದ್ದರು. ಅಷ್ಟೇ ಏಕೆ, ಟೆನಿಸನ್, ಲಾಂಗಫೆಲೊ ಮತ್ತು ಸರ ವಾಲ್ಟರ ಸ್ಕಾಟ ಈ ಇಂಗ್ಲಿಷ ಮತ್ತು ಅಮೇರಿಕನ್ ಖ್ಯಾತಿವಂತರೂ ಆ ಹಾಟೆಲಿನಲ್ಲಿ ಉಳಿದು ಹೋದರು, ಇದನ್ನು ನೆನಪಿನಲ್ಲಿಡಿ".

ಈ ಹಾಟೆಲಿನ ಆವಾರದಲ್ಲಿ ವರ್ಜಿನ್ ಮೇರಿಯ ಪ್ರತಿಮೆಯು ಮಾತ್ರ ನಿಜವಾಗಿಯೂ ನೋಡತಕ್ಕಂತಹದು. ಕೂತ ಸ್ಥಳದಿಂದಲೆ ಆ ಭವ್ಯ ಪ್ರತಿ ಮೆಯ ಕಡೆಗೆ ನೋಡುತ್ತಿದ್ದಂತೆ, ನಿಮ್ಮ ಮನಸ್ಸಿಗೆ ದಿವ್ಯತೆಯು ಸ್ಪರ್ಶವಾಗು ತ್ತದೋ ಇಲ್ಲವೋ ಅಷ್ಟರಲ್ಲಿ ಗುಡ್ಡದ ಮೇಲಿನ ಹಳೆಯ ಕೋಟೆಯ ಭಗ್ನಾವಶೇಷಗಳು ನಮಗೆ ಕಾಣಹತ್ತುತ್ತವೆ. ಆ ಕೋಟೆಯ ಕಡೆಗೆ ನೋಡು ತ್ತಿರುವಾಗ, ಯಾರಾದರೂ ಅದರ ಸಾದ್ಯಂತ ಇತಿಹಾಸವನ್ನು ತಿಳಿಸಿ ಹೇಳು ತ್ತಾರೆ. ಆಗ ನಿಮ್ಮ ಮನಸ್ಸು ಖಿನ್ನವಾಗುತ್ತದೆ. ರಾಜರು ಹೋಗುತ್ತಾರೆ ಹಾಗೆಯೇ ರಾಜಮಂದಿರಗಳೂ ಹೋಗುವವು. ಇದೇ ಕೋಟೆಯ ಮೇಲಿಂದ ಹೊಡೆದಾಟ ನಡೆಯಿಸಿ ಹಗೆಗಳನ್ನು ಕಾಲನ ಹಾದಿಗೆ ಹಚ್ಚಿರಬಹುದು. ಆದರೆ ಇಂದು ಅದೇ ಕೋಟೆಯ ಒಂದೊಂದು ಅವಶೇಷವೂ ಕಾಲವಶವಾಗುತ್ತಿರು ವದು ನಿಮಗೆ ಕಂಡು ಬರಬಹುದು. ಈ ಪ್ರಪಂಚದಲ್ಲಿ ಏನೂ ಸ್ಥಿರವಲ್ಲ, ಚಿರವಲ್ಲ. ಕಾಲನ ಪಾದದಡಿಗೆ ಸಮಸ್ತ ದೃಶ್ಯ ಸೃಷ್ಟಿಯು ಅದೃಶ್ಯವಾಗು ತ್ತಿರುತ್ತದೆ. ಈ ವಿಚಾರವು ನಿಮ್ಮ ಮನಸ್ಸಿನಲ್ಲಿ ಸುಳಿದೊಡನೆ ನಿಮ್ಮ ಇದುರಿನ ಅನ್ನವು ನಿಮಗೆ ರುಚಿ ಅನಿಸುವದಿಲ್ಲ.

ತತ್ವಜ್ಞಾನದ ವಿಚಾರಗಳು ಯಾವಾಗಲೂ ಹೀಗೆ ಭಿನ್ನವಿರುತ್ತವೊ ? ಕನಿಷ್ಠ ಆ ಒಂದು ಮನೆಯಲ್ಲಿಯಾದರೂ ಇದೇ ಬಗೆಯ ವಿಚಾರಗಳು ಸತತವಾಗಿ ನೆಲೆಸಿದ್ದವು. ಮತ್ತು ಆ ಮನೆಯೊಳಗಿನ ಒಬ್ಬ ಹೆಂಗಸಿಗೆ ಅನ್ನದ ತುತ್ತು ಎಂದೂ ಸವಿ ಅನಿಸಲಿಲ್ಲ.

ಈ ದಂಡೆಯ ರಸ್ತೆಯಿಂದ ಪೂರ್ವದಿಕ್ಕಿಗೆ ಹೋಗುತ್ತಿರುವಾಗ ಮಧ್ಯದಲ್ಲಿಯ ಎಡಬದಿಗೆ ಒಂದು ಚಿಕ್ಕ ಓಣಿಯಿದೆ. ಆ ರಾಜರಸ್ತೆಗೆ ಹೇಗೆ "ಊಫರ ಶ್ಟ್ರಾಸ" ಎಂಬ ಹೆಸರೊ ಹಾಗೆಯೇ ಈ ಓಣಿಗೆ ಬಿದ್ದ ಹೆಸರು. 'ಇಂಡಿಶ ಶ್ಟ್ರಾಸ'– ಅಂದರೆ ಇಂಡಿಯಾ (ಭಾರತ) ದ ರಸ್ತೆ. ಈ ಚಿಕ್ಕ ಓಣಿಯಲ್ಲಿ ಭಾರತೀಯರ ವಸತಿ ಇದೆಯೆಂದು ಇದಕ್ಕೆ 'ಇಂಡಿಶ ಶ್ಟ್ರಾಸ' ಎಂಬ ಹೆಸರು ಬಿದ್ದಿದೆ ಎಂಬುದು ಎಂದೂ ಹೇಳಲು ಬರುವಂತಿಲ್ಲ. ಆ ಓಣಿಗೆ ಆ ಹೆಸರು ಬೀಳುವ ಕಾರಣವೇ ಬೇರೆ ಮತ್ತು ಆ ಕಾರಣ ಬಹಳ ಮೋಜಿನದಿದೆ. ಭಾರತೀಯ ಸಂಸ್ಕೃತಿಯ ಅಭಿಮಾನಿಗಳಾದ ಬಹಳಷ್ಟು ಜರ್ಮನ ಜನರು ಈ ಓಣಿಯಲ್ಲಿ ವಾಸಿಸುತ್ತಾರೆ ಎಂತಲೆ ಇದಕ್ಕೆ ಆ ಹೆಸರು ಬಿದ್ದದೆ! ಈ ಓಣಿಯಲ್ಲಿ ವಸತಿ ಮಾಡಿಕೊಂಡಿರುವ ಈ ಎಲ್ಲ ಜರ್ಮನ ಜನ ಅದ್ಭುತರೇ ಎನ್ನಬೇಕು. ಇವರ ವಸತಿ ಜರ್ಮನ ರಾಷ್ಟ್ರದಲ್ಲಿ ಇದೆಯೆಂದೇ ಇವರು ಜರ್ಮನರು–ಜರ್ಮನಿಯ ನಾಗರಿಕರು. ಧರ್ಮದಿಂದ ಇವರು ಕ್ಯಾಥೊಲಿಕ ಕ್ರಿಶ್ಚನ್, ಆದರೆ ಇವರೆಲ್ಲರಿಗೂ ವಿಪರೀತ ಅಭಿಮಾನವಿರುವದು ಭಾರತೀಯ ಸಂಸ್ಕೃತಿಯದೇ. ಗೀತೆ ಇವರ ನಿತ್ಯ ಪಾಠದಲ್ಲಿದೆ. ವೇದಗಳ ಅಭ್ಯಾಸ ಇವರು ಮಾಡಿದ್ದಾರೆ. ಉಪನಿಷತ್ತುಗಳ ಪರಿಚಯ ಇವರಿಗಿದೆ. ತಮ್ಮ ಧರ್ಮದ ಕ್ರಿಸ್‌ಮಸ್ ಹಬ್ಬ ಆಚರಿಸುವ ಮಾತು ಬಿಟ್ಟು ಈ ಮಂದಿ ಕೃಷ್ಣ ಜನ್ಮಾಷ್ಟಮಿಯನ್ನು ಮಹಾ ಡೌಲಿನಿಂದ ಆಚರಿಸುತ್ತಾರೆ. ಭವಭೂತಿ ಮತ್ತು ಕಾಲಿದಾಸರನ್ನಂತೂ ಇವರು ತಲೆಯ ಮೇಲೆ ಇಟ್ಟುಕೊಂಡು ಕುಣಿಯುತ್ತಾರೆ. ಏಕೆಂದರೆ ಇವರ ಜರ್ಮನ ಕವಿ ಗಟೆ ಆ ಕಾಲಿದಾಸನ 'ಶಾಕುಂತಲ' ವನ್ನು ಓದಿ ಮರುಳಾಗಿದ್ದನು. ಮನುಷ್ಯನನ್ನು ಮೋಹಗೊಳಿಸುವ ವಸಂತ ಮಾಸದ ಹೂವುಗಳು ಅವನಿಗೆ ಬೇಕಿದ್ದರೆ, ಅವನ ಅಂತರಾತ್ಮನನ್ನು ತಂಪುಗೊಳಿಸಲಿಕ್ಕೆ ಅವನಿಗೆ ಸುಗ್ಗಿಯ ಹಂಗಾಮಿನ ರಸಾಲ

ಹಣ್ಣು ಹಂಪಲಗಳು ಬೇಕಿದ್ದರೆ, ಅಥವಾ ಪೃಥ್ವಿ-ಸ್ವರ್ಗಗಳ ಸುಖಸರ್ವ ಸ್ವವೂ ಅವನಿಗೆ ಒಮ್ಮೆಲೆ ಬೇಕಾಗಿದ್ದರೆ, ಅವನು ಬರೆ 'ಶಕುಂತಲಾ!' ಎಂಬ ಹೆಸರನ್ನು ಉಚ್ಚರಿಸಬೇಕು. ಅದೇ ಕ್ಷಣಕ್ಕೆ ಅವೆಲ್ಲವೂ ಅವನ ಅಡಿಯಲ್ಲಿ ಬೀಳುತ್ತವೆ-ಎಂದು ಗಟೆ ಹೇಳುತ್ತಿದ್ದನು. 'ಶಾಕುಂತಲ' ನಾಟಕವನ್ನು ತಲೆಗೆತ್ತಿಕೊಂಡು ಅವನು ಅಕ್ಷರಶಃ ಕುಣಿದಾಡಿದ್ದನು. ಇವರೆಲ್ಲ ಅವನದೇ ಉತ್ತರಾಧಿಕಾರಿಗಳು!

ಇದೆ ಓಣಿಯಲ್ಲಿ ಮ್ಯುಲರ ಕುಟುಂಬ ಆ ವಿಷಯದಲ್ಲಿ ಅಗ್ರಸ್ಥಾನ ದಲ್ಲಿತ್ತು. ಈ ಕುಟುಂಬದ ರೋಮರೋಮದಲ್ಲಿ ಭಾರತೀಯ ಸಂಸ್ಕೃತಿಯು ಅಡಗಿತ್ತು. ಯಾವದೇ ದಿನ ದೀಪಹಚ್ಚುವ ವೇಳೆಗೆ ಆ ಮನೆಯ ಮೇಲಿಂದ ಹಾದುಹೋದರೆ ಗೀತೆಯ ಎರಡನೆಯ ಅಧ್ಯಾಯದ ಪಠಣ ಕಿವಿಗೆ ಬೀಳು ತ್ತಿತ್ತು. ಧೀರ ಗಂಭೀರ ದನಿಯಲ್ಲಿ ಶುದ್ಧ ಉಚ್ಚಾರಗಳಲ್ಲಿ ಹೇಳಿದ "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ" ಈ ಶಬ್ದಗಳನ್ನು ಕೇಳಿದೊಡನೆ ಅನಿಸುತಿತ್ತು, ಈ ಮ್ಯುಲರ ಕುಟುಂಬವು ಚಿರಂಜೀವಿ ಆತ್ಮದ ತತ್ವವನ್ನು ಪೂರ್ತಿ ಆತ್ಮಸಾತ್ ಮಾಡಿರಬೇಕು! ಅನಂತರ ಕೆಲವು ಹೊತ್ತಿನ ಮೇಲೆ ಆ ದಾರಿಯಿಂದ ಹಿಂದಿರುಗಿ ಬರುವಾಗ ಮನೆಯೊಳಗಿಂದ ಬರುವ ಶಬ್ದಗಳು ಕಿವಿಯ ಮೇಲೆ ಬೀಳುತ್ತಿದ್ದವು 'ಸುಖ ದುಃಖೆ ಸಮೆ ಕೃತ್ವಾ ಲಾಭಾ ಲಾಭೌ ಜಯಾ ಜಯೌ' ಆ ಶಬ್ದಗಳನ್ನು ಕೇಳಿದಾಗ ಅನಿಸುತಿತ್ತು, ಅದೇ, ಅವರು ಮನಸ್ಸಿನ ಸಾಮ್ಯಾವಸ್ಥೆಯನ್ನು ಜಯಿಸಿದ್ದಾರೆ!

ಈ ನಗರದಲ್ಲಿ ಅನೇಕ ಜನ ಈ ಮನೆಯ ಕಡೆಗೆ ಬೆರಳೆತ್ತಿ ತಮಾಷೆ ಯಾಗಿ ಹೇಳುವದುಂಟು, 'ಇಕೊ ನೋಡಿ, ಗೇಟವೇ ಆಫ್ ಇಂಡಿಯಾ ! ಭಾರತದ ಪ್ರವೇಶದ್ವಾರವೆಂದು ಈ ಓಣಿಯ ಬರೆ ಉಲ್ಲೇಖ ಮಾಡಿ ಈ ನಗೇಚಾಟಿಕೆಯ ಮಂದಿ ತಡೆಯುತಿದ್ದಿಲ್ಲ. ಅವರಿಗೆ ಯಾರಾದರೂ ಮ್ಯುಲರ ಮನೆಯ ದಾರಿ ಕೇಳಿದರೆ ಅವರು ಅನ್ನುತ್ತಿದ್ದರು. ವೇದೋಪನಿ ಷತ್ತುಗಳ ಅಖಂಡ ಗಿಳಿಪಾಠ ಎಲ್ಲಿ ನಡೆಯುವದೋ ಅದೆ ಮ್ಯುಲರರ ಮನೆ ಯೆಂದು ನಿರ್ಧಾರವಾಗಿ ತಿಳಿಯಬೇಕು!" ಇದನ್ನು ಕೇಳಿದಾಗ, ಭಾರತೀಯ

ಸಂಸ್ಕೃತಿಯ ಪರಿಚಯವಿದ್ದವರಿಗೆ ಸ್ವಾಭಾವಿಕವಾಗಿಯೆ ಪಂಡಿತ ಮಂಡನ ಮಿಶ್ರರ ಮನೆಯ ನೆನಪು ಆಗುತಿತ್ತು.

ಮ್ಯುಲರರ ಮನೆಗೆ ಇನ್ನೂ ಕೆಲವು ಗುರುತಿನ ಕುರುಹುಗಳಿದ್ದವು. ಅವನ ಮನೆ ಸಾದಾ ಇಟ್ಟಿಗೆಗಳದು. ಆ ಇಟ್ಟಿಗೆಗಳ ಬಣ್ಣವು ಕಾವಿಯದು. ಭಾರತೀಯ ಸಂಸ್ಕೃತಿಯ ಹುಚ್ಚು ಇಲ್ಲಿಗೇ ತಡೆದಿದ್ದಿಲ್ಲ. ಅವರ ಮನೆಯ ಕೆಳಗಡೆ ಒಂದು ಅಂಗಡಿ ಇತ್ತು. ಆ ಅಂಗಡಿಯಲ್ಲಿ ಭಾರತೀಯ ಸಂಸ್ಕೃತಿಗೆ ಒಪ್ಪುವಂಥ ಪುರಾತನ ವಸ್ತುಗಳು ದೊರಕುತಿದ್ದವು. ವಿವಿಧ ಬಗೆಯ ದೇವತಾ ಮೂರ್ತಿಗಳು, ನಾನಾ ತರದ ಪ್ರೇಕ್ಷಣೀಯ ದೀಪಗಳು– ಇಂಥ ಭಾರತೀಯ ಸಂಸ್ಕೃತಿಗೆ ಸಲ್ಲುವ ಶುಭಂಕರ ವಸ್ತುಗಳು ಅಲ್ಲಿ ಸಿಕ್ಕೂ ಸಿಗುತ್ತಿದ್ದವು ಮಾತ್ರವಲ್ಲ, ಭಾರತೀಯ ಪಾತ್ರೆ ಪೊಗಡೆ, ಪೀಠೋಪಕರಣಗಳೂ ಸಿಗುತ್ತಿದ್ದವು. ಮ್ಯುಲರಸಾಹೇಬರ ಸಲಹೆಯಿಂದಲೆ ಡಿಟಮಾರ ಓಟೊಮಾನ ಎಂಬ ಒಬ್ಬ ಭಾವಿಕ ಜರ್ಮನನು ಈ ಅಂಗಡಿಯನ್ನು ಇಟ್ಟಿದ್ದನು. ಈ ಅಂಗಡಿಯಿಂದ ಅವನಿಗೆ ಚೆನ್ನಾಗಿಯೇ ಪ್ರಾಪ್ತಿ ಸಿಗುತ್ತಿತ್ತು. ಅದರ ಎಲ್ಲ ಶ್ರೇಯಸ್ಸು ಮ್ಯುಲರ ಕುಟುಂಬ ಮತ್ತು ಭಾರತೀಯ ಸಂಸ್ಕೃತಿ ಇವೆರಡರ ಅಡಿಯಲ್ಲಿಯೆ ಹಾಕಲಾಗಿತ್ತು. ಡಿಟಮಾರ ಓಟೋಮಾನ್ ಕೂಡ ಮ್ಯುಲರ ಕುಟುಂಬದಂತೆಯೆ ಕಾವಿ ಬಣ್ಣದಲ್ಲಿ ಕೂಡಿ ಹೋಗಿದ್ದನು.

ಭಾರತೀಯ ಸಂಸ್ಕೃತಿಯ ದೊಡ್ಡಸ್ತಿಕೆಯ ಅಖಂಡ ಉಚ್ಚಾರವು ಮ್ಯುಲರರ ಮನೆಯಲ್ಲಿ ನಡೆಯುತ್ತಿತ್ತು. ಈ ಮಾತು ಅಕ್ಷರಶಃ ನಿಜವಿತ್ತು ಆದರೆ ಈ ಮನೆಯಲ್ಲಿ ಈ ಮಾತಿಗೂ ಒಂದು ಅಪವಾದವಿತ್ತು. ಆ ಅಪವಾದವೆಂದರೆ ಏರ್ನಾ ಮ್ಯೂಲರ ಈ ಹೆಂಗಸು! ಈ ಮಹಿಳೆಯ ಮಾವ ಮಾನಫ್ರೆಡ ಮ್ಯುಲರ ಹೈಡೆಲಬರ್ಗ ವಿದ್ಯಾ ಪೀಠದಲ್ಲಿ ಭಾರತೀಯ ಸಂಸ್ಕೃತಿಯ ಪ್ರಾಧ್ಯಾಪಕರಾಗಿದ್ದರು. ಇವಳ ಪತಿರಾಜರು ಫ್ರಾಂಜ ಮ್ಯುಲರ ಇವರೂ ತಂದೆಯ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟು ಅದೇ ವಿದ್ಯಾಪೀಠದಲ್ಲಿ ಭಾರತೀಯ ಸಂಸ್ಕೃತಿಯದೇ ಅಧ್ಯಾಪನವನ್ನು ಅಂಗೀಕರಿಸಿದ್ದರು. ಏರ್ನಾಳು ಅದೇ ವಿದ್ಯಾಪೀಠದಲ್ಲಿ ಕಲಿಯುತಿದ್ದಳು. ಕಲಿಯುತ್ತಿರುವಾಗಲೆ ಏರ್ನಾ ಮತ್ತು ಫ್ರಾಂಜ ಮ್ಯುಲರ ಒಬ್ಬರಿಗೊಬ್ಬರು ಗಂಟು

ಬಿದ್ದರು. ಅನ್ಯೋನ್ಯ ಪ್ರೇಮದಲ್ಲಿ ಆಸಕ್ತರಾದರು. ಮತ್ತು ಇಬ್ಬರೂ ಲಗ್ನ ಬಂಧನವನ್ನು ಸ್ವೀಕರಿಸಿದರು. ಅವರ ಪ್ರೇಮದ ಇತಿಹಾಸವು ಬಹಳ ಮನೋರಂಜಕವಾಗಿಯೆ ನಡೆಯಿತು.

ಆ ಸಮಯ ಮಾನಫ್ರೆಡ ಮ್ಯುಲರ ಇವರು ಹೈಡೇಲಬರ್ಗ ವಿದ್ಯಾಪೀಠದಿಂದ ಆಗತಾನೆ ನಿವೃತ್ತರಾಗಿದ್ದರು. ಮತ್ತು ಅವರ ಸ್ಥಳದಲ್ಲಿ ಫ್ರಾಂಜ ಮ್ಯುಲರನನ್ನು ನೇಮಿಸಿಕೊಳ್ಳಲಾಗಿತ್ತು. ಹೈಡೆಲ ಬರ್ಗ ವಿದ್ಯಾಪೀಠವು ಆ ಕಾಲದಲ್ಲಿ ಜಗತ್ತಿನಲ್ಲಿಯೇ ಪ್ರಸಿದ್ಧವಿತ್ತು.[1] ಮೊದಲನೆ ಇಲೆಕ್ಟರ ರೂಪ್ರೆಶ್ಟ ಅವನು ೧೩೮೬ ರಲ್ಲಿ ಈ ವಿದ್ಯಾಪೀಠವನ್ನು ಸ್ಥಾಪಿಸಿದಂದಿನಿಂದ ಹೈಡೆಲಬರ್ಗ ಪಟ್ಟಣದ ಹೆಸರು ಪ್ರಪಂಚದಲ್ಲಿ ಸರ್ವತೋಮುಖವಾಯಿತು. 'ಮೂವತ್ತು ವರ್ಷಗಳ ಯುದ್ಧ' ಆರಂಭವಾಗುವ ಮೊದಲು ಪ್ರಪಂಚದ ಸಾಧಾರಣಾವಾದಿ ವಿದ್ಯಾರ್ಥಿಗಳಿಗೆ ಈ ವಿದ್ಯಾಪೀಠ ತವರುಮನೆಯೆಂದು ಎಣಿಸಲಾಗುತಿತ್ತು. ಆದರೆ 'ಮುಂದೆ ವಿದ್ಯಾಪೀಠಕ್ಕೆ ಅಳಿಗಾಲ ಬಂದಿತು. ಅದರ ಖ್ಯಾತಿಯು ಕಡಿಮೆ ಆಗಹತ್ತಿತು. ಆದರೆ ಕಾರ್ಲ ಫ್ರೀಡರಿಶ್ ಇವರು ಈ ವಿದ್ಯಾಪೀಠಕ್ಕೆ ನವಚೈತನ್ಯ ತುಂಬಿದರು. ೧೯ನೆಯ ಮತ್ತು ೨೦ನೆಯ ಶತಕದಲ್ಲಿ ಬುಂಸೆನ್, ಕಿರ್ಖಹೋಫ್ ಮತ್ತು ಹೆಲ್ಮಹೊಲ್ಟ್ಸ್ ಈ ಪಂಡಿತರು ಈ ವಿದ್ಯಾಪೀಠದಲ್ಲಿ ಬಂದು ಹೇಳಹತ್ತಿದರು. ದೇಶ ವಿದೇಶಗಳ ವಿದ್ಯಾರ್ಥಿಗಳು ಜ್ಞಾನಾರ್ಜನೆಯ ಬಗ್ಗೆ ಆಗ್ರಹದಿಂದ ಇಲ್ಲಿಗೆ ಬರುತ್ತಿದ್ದರು ಮತ್ತು ಅಡಿಯಲ್ಲಿ ಪಾಂಡಿತ್ಯ ತುಂಬಿಸಿಕೊಂಡು ತಿರುಗಿ ಹೋಗುತ್ತಿದ್ದರು. ಜಗತ್ತಿನ ಎಲ್ಲ ಧರ್ಮ ಸಂಸ್ಕೃತಿಗಳ ಶಿಕ್ಷಣವು ಈ ವಿದ್ಯಾಪೀಠದ ಪರಿಸರದಲ್ಲಿ ಕೊಡಲಾಗುತಿತ್ತು. ಇದೇ ವಿದ್ಯಾಪೀಠದಲ್ಲಿ ಮಾನಫ್ರೆಡ ಮ್ಯುಲರ ಭಾರತೀಯ ಸಂಸ್ಕೃತಿಯ ಪ್ರಾಧ್ಯಾಪಕರಾಗಿದ್ದರು.

ನೇಕರ ಹೊಳೆ ಮತ್ತು ಹೊಳೆಯ ಬೆನ್ನಿಗೆ ನಿಂತ ಅಚ್ಚುಕಟ್ಟಾದ ಗುಡ್ಡಗಳ ಹಿನ್ನೆಲೆಯಲ್ಲಿ ವಿದ್ಯಾಪೀಠದ ಭವ್ಯಕಟ್ಟಡವು ಭಾರೀ ಎದ್ದು ಕಾಣುತ್ತಿತ್ತು,

1) ಈಚೆಗೆ ಈ ವಿದ್ಯಾಪೀಠದಲ್ಲಿ ಕನ್ನಡವನ್ನು ಕಲಿಸುವ ಏರ್ಪಾಟವು ಆಗದೆಯಂತೆ.

ವಿದ್ಯಾಪೀಠದ ಆ ಪುರಾತನ ವ್ಯಕ್ತಿತ್ವದ ಇದಿರು ತಲೆಬಾಗಬೇಕೆಂದು ಯಾರಿಗೂ ಅನಿಸಬೇಕು. ಆ ಭವ್ಯ ಕಟ್ಟಡದ ಸುಣ್ಣಬಣ್ಣವೆಲ್ಲ ಕೆಟ್ಟು ಹೋಗಿತ್ತು. ಅದರ ಕಲಶಗಳು ಕಪ್ಪಿಟ್ಟಿದ್ದವು. ಆದರೆ ಗುಣವಂತ ವ್ಯಕ್ತಿಗಳ ರೂಪ ರಂಗಿನತ್ತ ಯಾರೂ ನೋಡುವದಿಲ್ಲ. ಅದೇ ರೀತಿ ಆ ಗುಣವಂತ ವಾಸ್ತುವಿನ ಬಾಹ್ಯ ರೂಪದತ್ತ ಯಾರ ಗಮನವೂ ಹೋಗುತ್ತಿದ್ದಿಲ್ಲ.

ಇಂಥ ಸಂಗತಿಗಳಲ್ಲಿ ಮನುಷ್ಯ ಎಷ್ಟು ಪುರಾಣ ಪ್ರಿಯನಿರುತ್ತಾನೆ. ನೋಡಿ ! ವಿದ್ಯಾಪೀಠದ ಆ ಪುರಾತನ ಸ್ವರೂಪವನ್ನು ಶಾಶ್ವತವಾಗಿ ಇಡಲಿಕ್ಕೆಂದು ನಗರದ ಆ ಭಾಗದಲ್ಲಿ ಸುಧಾರಣೆಗೆ ವಿಶೇಷ ಒಳಹೊಕ್ಕಲಿಕ್ಕೆ ಬಿಟ್ಟಿದ್ದಿಲ್ಲ. ವಿದ್ಯಾಪೀಠಕ್ಕೆ ಹೊಂದಿಕೊಂಡು ಹೊಸ ಹೊಸ ಕಟ್ಟಡಗಳು ಬಹಳ ಎದ್ದು ನಿಂತವು. ಆದರೆ ಅವೆಲ್ಲ ಇದೆ ಪರಿಸರದಲ್ಲಿ ಮತ್ತು ಇದೇ ವಿದ್ಯಾದಾನದ ಕಾರ್ಯಕ್ಕಾಗಿ. ಬೇರೆ ಯಾವ ಕಟ್ಟಡಕ್ಕೂ ಆ ಪಂಕ್ತಿಯಲ್ಲಿ ಕೂಡ್ರಲು ಅವಕಾಶವೇ ಸಿಗಲಿಲ್ಲ. ಆಸ್ಪತ್ರೆಗಳ ಹೊಸ ಕಟ್ಟಡಗಳನ್ನು ಕಟ್ಟಲಾಯಿತು. ಅಥವಾ ಅನೇಕ ಸಂಘ–ಸಂಸ್ಥೆಗಳಿಗಾಗಿ ಹೊಸ ಇಮಾರತುಗಳನ್ನು ನಿಲ್ಲಿಸಲಾಯಿತು. ಆದರೆ ಅವೆಲ್ಲ ಕಟ್ಟಡಗಳಿಗೆ ನಗರದ ಈ ಹಳೆಯ ಭಾಗದಲ್ಲಿ ಸ್ಥಾನ ದೊರೆಯಲಿಲ್ಲ. ನಗರದ ಮಧ್ಯಬಿಂದುವು ವಿದ್ಯಾಪೀಠದ ಕಟ್ಟಡಗಳಿಂದಲೆ ವ್ಯಾಪಿಸಲ್ಪಟ್ಟು ಉಳಿಯಿತು.

ಈ ವಿದ್ಯಾಪೀಠದ ಸುತ್ತಲು ನೂರು ವರ್ಷಗಳ ಹಿಂದೆ ಬಹಳಷ್ಟು ಬಯಲು ಜಾಗವಿತ್ತು. ಆದರೆ ಬೆಳೆಯುವ ಜನವಸತಿಯೊಂದಿಗೆ ಮನೆಗಳೂ ಅಂಗಡಿಗಳೂ ಹೆಚ್ಚಾದವು. ಆದಾಗ್ಯೂ ವಿದ್ಯಾಪೀಠದ ಕಾರಂಜಿಗಳ ಮೇಲೆ ಕಾವಲಾಗಿ ನಿಂತ ಸಿಂಹಗಳು ಇಂದಿಗೂ ಬಯಲು ಸ್ಥಳದಲ್ಲಿಯೇ ನಿಂತಂತೆ ಅನಿಸುತ್ತದೆ. ಸುತ್ತಲೂ ಓಣಿ ಕೇರಿಗಳಲ್ಲಿ ನಿಂತ ಮನೆಗಳೂ ಬಹಳಷ್ಟು ಸುಧಾರಣೆಯ ಗಾಳಿ ಸೋಂಕದಂಥವೇ, ಮತ್ತು ಹೊಸ ರೀತಿಯ ಸುಧಾರಿಸಿದ ಮನೆಗಳು ಏನಾದರೂ ಇದ್ದರೆ, ಅವು ಹಳೆಯ ಜಾಯಮಾನಕ್ಕೆ ಹೊಂದಿಕೊಂಡಂಥವೇ. ಹಳೆಯ ಕಾಲಮಾನದ ಒಂದು ನೋಟವು ಈಗಲೂ ಇಲ್ಲಿ ಕಾಣ ಸಿಗುತ್ತದೆ. ಕೈಯಲ್ಲಿ ಉದ್ದ ಕೋಲುಗಳನ್ನು ಹಿಡಿದುಕೊಂಡು ಕುರುಬರು ಇಂದಿಗೂ ಕುರಿಗಳನ್ನು ಅಟ್ಟಿಕೊಂಡು ಗದ್ದೆಗಳಿಗೆ ಒಯ್ಯುತ್ತಾರೆ.

ಮತ್ತು ಸಂಜೆಗೆ ದೀಪ ಹಚ್ಚುವ ವೇಳೆಗೆ ಆ ಕುರಿಹಿಂಡುಗಳನ್ನು ಮರಳಿ ದಡ್ಡಿಗೆ ತರುತ್ತಾರೆ ಈ ನೋಟವು ಇಂದೂ ಕಂಡು ಬರುತ್ತದೆ.

ಹಳೆಯ ಕಾಲವಾನ ಇನ್ನೂ ಸಂದಿಲ್ಲ– ಎಂದು ಕಾಣಿಸುವ ಎರಡು ವಾಸ್ತುಗಳು ಇಂದಿಗೂ ವಿದ್ಯಾಪೀಠದ ಪರಿಸರದಲ್ಲಿ ನಿಂತಿರುತ್ತವೆ. ವಿದ್ಯಾಪೀಠದ ಕಡೆಗೆ ಹೋಗುವಾಗ ಒಂದು ಮನೆಯ ಹಲಗೆಯ ಮೇಲೆ ೧೯೬ ಈ ಅಂಕಿ ಕಾಣುತ್ತದೆ. ಕವಿ ಗಟೆ ತಾಯಿಯಂತೆ ಪೂಜ್ಯಳಾಗಿ ಕಂಡ ಫೋರೊ ಥಾಡೆಲ್ಲ ಆ ಮಹಿಳೆಯ ಮನೆಯಿದು. ಇದೇ ಸ್ಥಳದಲ್ಲಿ ಗಟೆಯ ವಾಸ್ತವ್ಯವಿತ್ತು. ಮತ್ತು ೧೭೭೫ ರ ನವ್ಹೆಂಬರ ತಿಂಗಳಲ್ಲಿ ಅವನಿಗೆ ಡ್ಯೂಕ ಚಾರ್ಲಸ ಔಗುಸ್ಟನ ಆಮಂತ್ರಣ ಬಂದಾಗ ಗಟೆ ವಾಯಿಮಾರವಂಬಲ್ಲಿಗೆ ಹೋದದ್ದು ಇದೆ ಮನೆಯಿಂದ ! ರಸ್ತೆಯ ಇನ್ನೊಂದು ತುದಿಗೆ ವಸ್ತುಸಂಗ್ರಹಾಲಯದ ಒಂದು ಹಳೆಯ ಇಮಾರತು ನಿಂತಿದೆ. ಆ ಇಮಾರತಿನ ಪಾಟಿಯ ಮೇಲೆ ಬರೆದ ಕ್ರಮಾಂಕ ೯೬ ಈ ಅಂಕಿಯು ಈಗ ಮುರುಕಲಿಗೆ ಬಂದಿದೆ. ಆ ಸ್ಥಳದಲ್ಲಿ ೧೮ ನೆ ಮತ್ತು ೧೯ನೆಯ ಶತಮಾನದಲ್ಲಿ ಓಲಿಸ ಮತ್ತು ಟರ್ನರ ಆ ಇಬ್ಬರು ವಿಖ್ಯಾತ ಆಂಗ್ಲ ಚಿತ್ರಕಾರರು ಬರೆದ ಚಿತ್ರಗಳನ್ನು ಇಡಲಾಗಿದೆ. ಗಟೆ ವಾಸಿಸುತ್ತಿರುವ ದೊಡ್ಡ ದೊಡ್ಡ ಆಂಗ್ಲ ಚಿತ್ರಕಾರರು ಉಳಿದ ಕಟ್ಟಡಗಳನ್ನು ಮುರುಕಲು ಖಾತೆಗೆ ಹೇಗೆ ಯಾರು ಸೇರಿಸಬಲ್ಲರು ? ಹೆಚ್ಚೇನು, ಹಳೆಯದಕ್ಕೆ ಅಂಟಿಕೊಂಡು ಉಳಿಯುವರು, ಅಥವಾ ಹಳೆಯದೆಲ್ಲ ಹೊನ್ನೆಂದು ಭಾವಿಸುವದು ಮನ್ನಿಸುವದು ಈ ನಗರದ ಜನ್ಮಸಿದ್ಧ ವೃತ್ತಿಯೇ ಸರಿ. ಹೈಡೆಲ ಬರ್ಗ ನಗರಕ್ಕೆ ಹೊಸತೇನೂ ಒಗ್ಗಲಿಲ್ಲ. ಅದು ಹಳೆಯದೇನೂ ಬಿಡಲಿಲ್ಲ.

ಭಾರತೀಯ ಸಂಸ್ಕೃತಿಯು ಜಗತ್ತಿನಲ್ಲಿಯೇ ಎಲ್ಲಕ್ಕಿಂತ ಹಳೆಯ ಸಂಸ್ಕೃತಿ ಮತ್ತು ಹಳೆಯದಾಗಿರುವದರಿಂದಲೇ ಏನೊ ಹೈಡಲ ಬರ್ಗದ ಮ್ಯೂಲರ ಕುಟುಂಬದ ರಕ್ತದಲ್ಲಿ ಅದು ಪೂರ್ತಿ ಅರಗಿ ಹೋಗಿತ್ತು.

ಮಾನಫ್ರೆಡ್ ಮ್ಯುಲರ ಸೇವಾ ನಿವೃತ್ತರಾದ ನಂತರ ಭಾರತೀಯ ಸಂಸ್ಕೃತಿಯನ್ನು ಕಲಿಸುವ ಕಾರ್ಯ ಅವರ ಮಗ ಫ್ರಾಂಜ ಮ್ಯುಲರ ಇವರ ಮೇಲೆ ಬಿತ್ತು. ಫ್ರಾಂಜ ಮ್ಯುಲರರಿಗೆ ಬೇಕಾದದ್ದೇ ಒದಗಿಬಂತು.

ಬರೆ ತಂದೆಯ ಉತ್ತರಾಧಿಕಾರ ತನ್ನೆಡೆಗೆ ನಡೆದು ಬಂತು ಎಂದು ಅಲ್ಲ. ತನ್ನ ಅಚ್ಚು ಮೆಚ್ಚಿನ ಕೆಲಸ ತನ್ನ ಕಡೆಗೆ ಬಂದಿತೆಂದು ಫ್ರಾಂಜ ಮ್ಯುಲರರಿಗೆ ಆನಂದವಾಯಿತು. ಭಾರತೀಯ ಸಂಸ್ಕೃತಿಯ ನಂದಾದೀಪವು ಮುಂದಿನ ತಲೆಮಾರಿನ ತನಕ ಉರಿಯುತ್ತ ಉಳಿಯುವಂತಾಯಿತು. ಮ್ಯುಲರ ಕುಟುಂಬದ ಅಂತಃಕರಣದಲ್ಲಿ ಪ್ರಜ್ವಲಿತವಾದ ಜ್ಯೋತಿಯು ಉರಿಯುತ್ತ ಉಳಿಯಿತು. ಉತ್ತರಾಧಿಕಾರ–ವಾರಸಾ ಹಕ್ಕು–ಏನೋ ನಡೆದು ಬಂತು. ಆದರೆ ಮುಂಬರುವ ಕಾಲದಲ್ಲಿಯ ಪರಿಣಾಮಗಳ ಕಲ್ಪನೆ ಯಾರಿಗೂ ಬಂದಿದ್ದಿಲ್ಲ. ಈ ನಂದಾದೀಪವೇ ಒಂದಲ್ಲ ಒಂದು ದಿನ ಜ್ವಾಲಾಮುಖಿಯಾಗಬಹುದು– ಎಂಬ ಭೀತಿಯು ಯಾರಿಗೂ ಅನಿಸಲಿಲ್ಲ. ಭಾರತೀಯ ಸಂಸ್ಕೃತಿಯ ಅಧ್ಯಯನ ಅಧ್ಯಾಪನಗಳ ಕಾರ್ಯ ಮ್ಯುಲರ ಕುಟುಂಬದ ಕೈಯಿಂದ ಸುರುವಾಯಿತು. ಒಂದು ಪೀಳಿಗೆ ಅಸ್ತಂಗತವಾಯಿತು. ಇನ್ನೊಂದು ಪೀಳಿಗೆ ಉದಯವಾಯಿತು. ಅದೂ ಹಳೆಯದರ ಎಳೆಯನ್ನು ಹಿಡಿದೇ !

ಒಂದು ದಿನ ಭಾರತೀಯ ಸಂಸ್ಕೃತಿಯ 'ತಾಸ' ತೆಗೆದುಕೊಳ್ಳಲಿಕ್ಕೆ ಫ್ರಾಂಜ ಮ್ಯುಲರ ತಮ್ಮ ವರ್ಗದಲ್ಲಿ ಹೋದರು. ಇದು ಅವರ ಪ್ರಥಮ ತಾಸು. ಈ ತಾಸಿನಲ್ಲಿ ಅವರು ಭಾರತೀಯ ಸಂಸ್ಕೃತಿಯ ಸರ್ವಸಾಮಾನ್ಯ ಪರಿಚಯ ಮಾಡಿಕೊಡುವವರಿದ್ದರು. ವರ್ಗದಲ್ಲಿ ಬೇರೆ ವಿಷಯದ ವಿದ್ಯಾರ್ಥಿಗಳೂ ಬಂದು ಕುಳಿತಿದ್ದರು. ಮಾನಫ್ರೆಡ ಮ್ಯುಲರ ಇವರ ಅಧ್ಯಾಪನದ ಖ್ಯಾತಿಯು ಭಾರಿ ಮಿಗಿಲಾಗಿತ್ತು. ಈಗ ಅವರ ಚಿರಂಜೀವರು ತಮ್ಮ ತಂದೆಯ ಖ್ಯಾತಿಯನ್ನು ಹೇಗೆ ಕಾಪಾಡಿಕೊಳ್ಳುವರೋ ಎಂಬುದನ್ನು ನೋಡಲಿಕ್ಕೆ ತಾಸಿಗೆ ವಿದ್ಯಾರ್ಥಿಗಳ ಸಂದಣಿ ಕಿಕ್ಕಿರಿದಿತ್ತು.

ವರ್ಗದಲ್ಲಿ ಬಂದು ಫ್ರಾಂಜ ಮ್ಯುಲರ ತಮ್ಮ ವ್ಯಾಖ್ಯಾನವನ್ನು ಆರಂಭ ಮಾಡುವದರಲ್ಲಿ ಇದ್ದರು. ಅಷ್ಟರಲ್ಲಿ ಅವರಿಗೆ ಅವಸರದ ಫೋನ್ ಬಂದಿತು. ಅವರು ಹೆಚ್ಚು ಕಡಿಮೆ ಓಡುತ್ತಲೆ ವರ್ಗದ ಹೊರಗೆ ಬಿದ್ದರು. ಮತ್ತು ಅದೇ ವೇಳೆಗೆ ಏರ್ನಾ ಅವರ ವರ್ಗದಲ್ಲಿ ಪ್ರವೇಶ ಮಾಡುತ್ತಿದ್ದಳು. ಫೋನ್ ಸ್ವೀಕರಿಸುವದಕ್ಕಾಗಿ ಗಡಿಬಿಡಿಯ ಭರದಲ್ಲಿ ಕೋಣೆಯ ಹೊರಗೆ ಬೀಳುತ್ತಿರುವ ಫ್ರಾಂಜ ಮ್ಯುಲರರ ಮತ್ತು ಅವಳ ಡಿಕ್ಕಿ ಆಯಿತು. ದಾರಿಯಲ್ಲಿ

ಈ ಘಟನೆಯಿಂದ ಇಬ್ಬರೂ ಗೊಂದಲಗೆಟ್ಟಂತೆ ಆದರೂ ಇಬ್ಬರೂ ಖೇದ ವ್ಯಕ್ತ ಮಾಡುವ ಶಬ್ದಗಳನ್ನು ಉಚ್ಚರಿಸುವ ಪ್ರಯತ್ನ ಮಾಡಿದರು. ಅದರೆ ಆ ಶಬ್ದಗಳು ಇಬ್ಬರ ಬಾಯಿಯಿಂದಲೂ ಪೂರ್ತಿ ಹೊರಬೀಳಲೆ ಇಲ್ಲ. ಅದೇ ವೇಳೆಗೆ ವರ್ಗದ ಕೆಲವು ವಿದ್ಯಾರ್ಥಿಗಳು ಅಂದರು. "ಇಕೋ ನೋಡಿ ಸರ್ವ ಧರ್ಮಗಳ ಸಂಘರ್ಷ !" ಬೇರೆ ಕೆಲವು ವಿದ್ಯಾರ್ಥಿಗಳು ಅಂದರು. 'ಎಲೊ ಸಂಘರ್ಷವೆಲ್ಲಿ ಬಂತು ? ಇದು ಸರ್ವಧರ್ಮಗಳ ಸಮ್ಮಿಲನ !'

ವಿನೋದದ ಈ ಮಾತುಗಳು ಅವರಿಬ್ಬರ ಕಿವಿಗೂ ಬಿದ್ದವು. ಫ್ರಾಂಜ ಮ್ಯುಲರ ಭಾರತೀಯ ಸಂಸ್ಕೃತಿಯ ಪ್ರಾಧ್ಯಾಪಕರಾಗಿದ್ದರು ಮತ್ತು ಏನ್ನಾ ನಾರ್ಡ ಆ ಸಮಯ "ಥಿಯೊಲೊಜೀ" ಅಂದರೆ ಧರ್ಮಶಾಸ್ತ್ರದ ವಿದ್ಯಾರ್ಥಿನಿಯಾಗಿದ್ದಳು. ಫ್ರಾಂಜ ಮ್ಯುಲರ ಇವರ ಕಕ್ಷೆಯಲ್ಲಿ ಕೇವಲ ಹಿಂದೂ ಧರ್ಮವು ಬರುತ್ತಿತ್ತು. ಆದರೆ ಏನ್ನಾ ನಾರ್ಡಳಿಗೆ ಎಲ್ಲ ಧರ್ಮ ಗಳ ತುಲನಾತ್ಮಕ ವ್ಯಾಸಂಗ ಮಾಡುವದಿತ್ತು. ಫ್ರಾಂಜ ಮ್ಯುಲರ ಪ್ರಾಧ್ಯಾಪಕರು. ಏನ್ನಾ ನಾರ್ಡ ವಿದ್ಯಾರ್ಥಿನಿ. ಅವರಿಬ್ಬರ ಈ ಅನಪೇಕ್ಷಿತ ಡಿಕ್ಕಿ ಯಾದೊಡನೆ 'ಸರ್ವಧರ್ಮ ಸಮ್ಮಿಲನ' ವೆಂದು ಆ ವಿದ್ಯಾರ್ಥಿಗಳು ಉದ್ಗರಿಸಿದಾಗ ಅವರಿಬ್ಬರೂ ನಾಚಿ ನೀರಾದರು.

ಫೋನಿನ ಕರೆಯ ಮಾತುಕತೆ ಮುಗಿಸಿ ಫ್ರಾಂಜ ಮ್ಯುಲರ ತಿರುಗಿ ವರ್ಗ ದಲ್ಲಿ ಬಂದರು. ಆದರೂ ಅವರ ಮುದ್ರೆಯ ಮೇಲಿನ ನಾಚಿಕೆಯ ಭಾವ ಕಳೆದಿದ್ದೇ ಇಲ್ಲ. ಮತ್ತು ಅವರನ್ನು ಕಂಡೊಡನೆಯೆ ಏನ್ನಾ ನಾರ್ಡಳು ಮುಂದಿದ್ದ ಪುಸ್ತಕದಲ್ಲಿ ಮೊಗವನ್ನು ಹುದುಗಿಸಿದಳು—ಅದಾಗ್ಯೂ ಅವಳ ಮೋರೆಯ ಮೇಲಿನ ಲಜ್ಜೆಯ ಕೆಂಪು ಕಿಂಚಿತ್ತೂ ಕಡಿಮೆ ಆಗಿದ್ದಿಲ್ಲ.

ತಮ್ಮ ವ್ಯಾಖ್ಯಾ ಸುರು ಮಾಡುವ ಮುಂಚೆ ಫ್ರಾಂಜ ಮ್ಯುಲರ ನಗುತ್ತ ಅಂದರು. "ಆಗ ನಡೆದ ಘಟನೆ ನೀವೆಲ್ಲರೂ ನೋಡಿದಿರಿ ಮತ್ತು ಈ ಬಗ್ಗೆ ನೀವು ಮಾಡಿದ ಪ್ರಲಾಪ ನಾವಿಬ್ಬರೂ ಕೇಳಿದೆವು !"

ಹೀಗೆಂದು ಅವರು ಅದೇ ವೇಳೆಗೆ ಏನ್ನಾ ನಾರ್ಡಳ ಕಡೆಗೆ ಒಂದು ಕಡೆಗಣ್ಣ ನೋಟ ಬೀರಿದರು. ನೀಲಕಣ್ಣು ನೀಲಕಣ್ಣಿಗೆ ಕೂಡಿತು. ನೆಕರ ಹೊಳೆಯಲ್ಲಿ ನೀಲ ಆಕಾಶದ ಪ್ರತಿಬಿಂಬವೇ ಬಿದ್ದಂತೆ. ಆಕಾಶದಲ್ಲಿ ಮುಗಿಲು

ಬಂದವು ಅಥವಾ ನೀರಿನಲ್ಲಿ ತೆರೆಗಳೆದ್ದವು—ಎಂಬಂತೆ ಕಣ್ಣಲ್ಲಿ ಸಿಲುಕಿದ ಕಣ್ಣು ಬೇರೆ ಆಯಿತು. ಏರ್ನಾ ತಿರುಗಿ ಕೆಳಗೆ ನೋಡಹತ್ತಿದಳು. ಫ್ರಾಂಜ ಮ್ಯುಲರ ಆಡಿದ 'ಪ್ರಲಾಪ' ಶಬ್ದವನ್ನು ಕೇಳಿ ವಿದ್ಯಾರ್ಥಿಗಳಿಗೆ ಅನಿಸಿತು. ಪ್ರಾಧ್ಯಾಪಕರ ಸವಾರಿ 'ಗರಂ' ಆದಂತಿದೆ.

ಫ್ರಾಂಜ ಮ್ಯುಲರ ಮುಂದರಿದು ಅಂದರು "ಭಿನ್ನ ಧರ್ಮಗಳ ಸಮ್ಮಿಲನವಾದರೂ ವ್ಯಕ್ತಿಗಳ ಮಿಲನ ಸಿಗುವದೆಂಬ ನೇಮವಿಲ್ಲ. ಏಕೆಂದರೆ ಧರ್ಮಗಳ ಮಿಲನದ ನಿಯಮಗಳೇ ಬೇರೆ, ವ್ಯಕ್ತಿಗಳ ಮಿಲನದ ನಿಯಮಗಳೇ ಬೇರೆ !"

ತತ್ವಜ್ಞಾನಿಯ ಅವಿರ್ಭಾವ ತಂದು ಅವರು ಮಾತಾಡುತ್ತಿದ್ದರೂ ವಿದ್ಯಾರ್ಥಿಗಳಿಗೆ ಅವರ ಈ ವಿನೋದದ ಮಾತು ಅರ್ಥವಾಯಿತು. ಆಗ ತನ್ನ ಗಾಂಭೀರ್ಯದ ಆವಿರ್ಭಾವವನ್ನು ಹಾಗೆಯೇ ಇದ್ದು ಫ್ರಾಂಜ ಮ್ಯುಲರ ಮುಂದೆ ಅಂದರು. "ಎರಡು ಭಿನ್ನ ಪ್ರಕೃತಿಯ ಧರ್ಮಗಳ ಮಿಲನವಾದರೂ ಒಂದು ವೇಳೆ ಆಗಬಹುದು. ಆದರೆ ಎರಡು ಭಿನ್ನ ಪ್ರಕೃತಿಯ ವ್ಯಕ್ತಿಗಳ ಮಿಲನ ಎಂದಿಗೂ ಆಗಲಾರದು."

ಹೀಗೆಂದು ಅವರು ಮತ್ತೆ ಏರ್ನಾಳ ಕಡೆಗೆ ಮೆಲ್ಲಗೆ ಕಟಾಕ್ಷ ಹಾಯಿಸಿದರು. ಮತ್ತೆ ಕಣ್ಣಿಗೆ ಕಣ್ಣು ಕೂಡಿತು. ಅವಳಿಗೆ ಎಲ್ಲವೂ ಅರ್ಥವಾಯಿತು.

ಫ್ರಾಂಜ ಮ್ಯುಲರರ ಈ ಮಾತು ವಿದ್ಯಾರ್ಥಿಗಳಿಗೆ ವಿಶೇಷ ತಿಳಿಯದಿದ್ದರೂ ಏರ್ನಾಳಿಗೆ ಪರಿಪೂರ್ಣ ಅರ್ಥವಾಯಿತು. ಏಕೆಂದರೆ ಅವಳು ಈ ಮೊದಲು ಫ್ರಾಂಜ ಮ್ಯುಲರರೊಂದಿಗೆ ಬಹಳಷ್ಟು ವಾದ ವಿವಾದ ಮಾಡಿದ್ದಳು. ಅವರ ಮನೆಗೆ ಅವಳು ಬರ-ಹೋಗು ನಡೆದಿತ್ತು. ಮಾನಫ್ರೆಡ ಮ್ಯುಲರರ ಅಪಾರ ವಿದ್ವತ್ತೆಯ ಬಗೆಗೆ ಅವಳಿಗೆ ಅಪರಂಪಾರ ಆದರವಿತ್ತು. ತನ್ನ ಅಭ್ಯಾಸದೊಳಗಿನ ತೊಡಕುಗಳನ್ನು ಅವಳು ಅವರ ಮನೆಗೆ ಒಯ್ಯುತ್ತಿದ್ದಳು. ಮತ್ತು ತನ್ನ ಸಂಶಯಗಳನ್ನು ಬಗೆಹರಿಸಿಕೊಂಡು ಮಹಾ ಸಮಾಧಾನದಿಂದ ಆಕೆ ಮರುಳುತ್ತಿದ್ದಳು ! ಮಾನಫ್ರೆಡ್ ಮತ್ತು ಫ್ರಾಂಜ ಮ್ಯುಲರ ಈ ತಂದೆ-ಮಕ್ಕಳ ಭಾರತೀಯ ಸಂಸ್ಕೃತಿಯ ಬಗೆಗಿನ ಹುಚ್ಚು ಅವಳಿಗೆ ಪೂರ್ತಿ ಗೊತ್ತಿತ್ತು. ಇದಕ್ಕೆ ಬದಲಾಗಿ ಎಲ್ಲ ಧರ್ಮ ಸಂಸ್ಕೃತಿಗಳ ತುಲ

ನಾತ್ಮಕ ವ್ಯಾಸಂಗ ಮಾಡಿರುವದರಿಂದ ಯಾವದೇ ಒಂದು ಧರ್ಮದ ಬಗೆಗೆ ಏನ್ನಾ ನಾರ್ಡಳಿಗೆ ಆತ್ಮೀಯತೆ ಉಳಿದಿಲ್ಲ. ಈ ಸಂಗತಿಯನ್ನೂ, ಫ್ರಾಂಜ ಮ್ಯುಲರ ಅರಿತಿದ್ದರು. ಅವರು ಹಿಂದು ಧರ್ಮದ ಪಕ್ಷ ವಹಿಸಿದೊಡನೆ. ಅದನ್ನು ಎತ್ತಿ ಹಿಡಿದೊಡನೆ ಅವಳು ಅವರ ಆ ಅಭಿಮಾನವನ್ನು ಅಗಿದು ತೆಗೆಯಲು ತೊಡಗುತ್ತಿದ್ದಳು. ಬೇರೊಂದು ಧರ್ಮದ ಮಹತ್ವವನ್ನೂ ಅವರಿಗೆ ಮನಗಣಿಸಲಿಕ್ಕೆ ಪ್ರಯತ್ನಿಸುತ್ತಿದ್ದಳು. ಈ ಚರ್ಚೆ ಸರಸಸಲ್ಲಾಪ ದಲ್ಲಿ ಸುರುವಾಗುತ್ತಿತ್ತು. ಆದರೆ ಮುಂದೆ ಮೆಲ್ಲ ಮೆಲ್ಲಗೆ ವಾದವು ಅರಳಿ ದಂತೆ ಸರಸದ ವಾತಾವರಣ ಕರಗಿ ಹೋಗಿ ಪ್ರಕರಣ ನಿಕರಕ್ಕೆ ಬರುತ್ತಿತ್ತು.

ಒಮ್ಮೆ ಫ್ರಾಂಜ ಮ್ಯುಲರ ಏನ್ನಾಳಿಗೆ ಹಿಂದೂ ಧರ್ಮದ ವಿವರ ಗಳನ್ನೂ ಮನಗಾಣಿಸಿ ಕೊಡುತ್ತಿದ್ದರು. ಅವರು ಅನ್ನುತ್ತಿದ್ದರು. "ಹಿಂದೂ ಧರ್ಮವು ಒಂದು ದೀಪಸ್ತಂಭದಂತೆ ಅಥವಾ ನಂದಾದೀಪದಂತೆ— ಅನ್ನಬೇಕಾದರೆ ಹೇಗೆ—."

ನಡುವೆಯೆ ಏನ್ನಾ ಅಂದಳು, "ಆದರೆ ಈ ದೀಪಸ್ತಂಭದ ಬುನಾದಿಯೆ ಇಂದು ಕುಸಿದಿದೆ. ಅಥವಾ ಸುಧಾರಣೆಯ ಗಾಳಿಯಿಂದ ಈ ಹಿಂದೂ ಧರ್ಮದ ನಂದಾದೀಪ ನಂದಿ ಹೋಗುವ ಅವಸ್ಥೆಗೆ ಬಂದಿದೆಯೆಂದು ತೋರು ತ್ತದೆ."

ಏನ್ನಾ ನಕ್ಕಳು. ಅವಳ ದನಿ ಹೀಯಾಳಿಸುವಂತೆ ಅನಿಸಿತು.

ಅವಳ ಈ ಮಾತಿಗೆ ಫ್ರಾಂಜ ಮ್ಯುಲರ ಅಂದರು. "ಅಲ್ಲೇ. ಕುಸಿದರೆ ಅದೆಂಥ ದೀಪಸ್ತಂಭ, ನಂದಿದರೆ ಅದೆಂಥ ನಂದಾದೀಪ ? ಹಿಂದೂ ಧರ್ಮವು ಶಾಶ್ವತ ಚಿರಂತನ ತತ್ವಗಳ ಮೇಲೆ ನೆಲೆಗೊಂಡಿದೆ. ಶಾಶ್ವತ ತತ್ವ ಗಳು ಎಂದಿಗೂ ಕುಸಿಯುವದಿಲ್ಲ. ನೆನಪಿನಲ್ಲಿಡು ಏನ್ನಾ !"

ಏನ್ನಾ ನಗುತ್ತ ಅದೇ ಹೀಯಾಳಿಕೆಯ ದನಿಯಲ್ಲಿ ಅಂದಳು. "ಶಾಶ್ವತ ತತ್ವಗಳೆಂಬುವು ಏನು ? ಭಟ್ಟರ ಭಿಕ್ಷುಕರ ಲಹರಿಯ ಮೇಲೆ ನಡೆ ಯುವ ಧರ್ಮ ! ಹಳಸಿ ಬುರುಸುಗಟ್ಟಿದ ಮತಗಳ ಧರ್ಮ ! ಲೋಕ ಭ್ರಮೆ ಗಳ, ಮೂಢ ನಂಬಿಕೆಗಳ ಮೇಲೆ ನಿಂತದ್ದು. ಕೀಳು ಕಗ್ಗ ಕಲ್ಲು. ಕೊರಡು ಗಳ ದೇವದೇವತೆಗಳನ್ನು ಪೂಜಿಸುವ ಧರ್ಮ !—ಹರಕೆಗೆ ಸಲ್ಲುವ. ಹುಚ್ಚು

ಹುಚ್ಚು ಕಲ್ಪನೆಗಳ ಮೇಲೆ ನೆಲೆಗೊಂಡ ಧರ್ಮ! ಇಂಥ ವಿಚಿತ್ರ ಧರ್ಮ ಈ ಭೂಮಿಯ ಮೇಲೆ ಬೇರೊಂದು ಇದೆಯೊ ಇಲ್ಲವೋ ಯಾರಿಗೆ ಗೊತ್ತು ?"

ಹೀಗೆಂದು ಆಕೆ ಗಹಿಗಹಿಸಿ ನಕ್ಕಳು. ಫ್ರಾಂಜ ಕೆರಳಿದರು, ಅಂದರು "ಯಾವದೇ ಧರ್ಮವಿರಲಿ, ಅದರಲ್ಲಿ ರೂಢಿಗಳು ಇದ್ದೇ ಇರುತ್ತವೆ. ಆದರೆ ಆ ರೂಢಿಗಳೆಂದರೆ ಧರ್ಮವಲ್ಲ. ನೀವು ಆ "ಪ್ರಾವಿಡನ್ಸ ಚರ್ಚಿ"ನಲ್ಲಿ ನೇಮದಿಂದ ಹೋಗುತ್ತೀರಿ ಇಂದು ಆ ಚರ್ಚಿನ ಮಹತ್ವ ನಿಮಗೆ ಅನಿಸುತ್ತಿರಲಾರದು. ಆದರೆ ಮೂವತ್ತು ವರ್ಷದ ಯುದ್ಧವಾಯಿತು. ಯುದ್ಧದ ಮೂಲಕ ಜನ ಮನಸ್ಸಿನಲ್ಲಿಯೇ ಕುಗ್ಗಿ ಕುಸಿದು ಹೋದರು. ಆ ಸಮಯ ೧೬೬೧ ರಲ್ಲಿ ಕಾರ್ಲ ಲುಡವಿಗ ಈ ಚರ್ಚನ್ನು ಕಟ್ಟಿಸಿದನು ಮತ್ತು ಆ ಚರ್ಚಿನಲ್ಲಿ ಸಾವಿರಗಟ್ಟಲೆ ಜರ್ಮನ್ನರಿಗೆ ಮನಃಶಾಂತಿಯು ಲಭಿಸಿತು. ಅದೇಕೆ? ಈ ಚರ್ಚಿನಲ್ಲಿ ಅವರಿಗೆ ಯೇಸೂ ಸಿಕ್ಕನೆಂದೋ? ಇದು ನೋಡು, ದೇವರು ಕಲ್ಲಿನಲ್ಲಿ ಇರುವದಿಲ್ಲ. ಆತ ಭಾವದಲ್ಲಿ ಇರುತ್ತಾನೆ. ಭಾವವಿದ್ದಲ್ಲಿ ದೇವ-ಇದೇ ಸಿದ್ಧಾಂತವನ್ನು ಹಿಂದೂ ಧರ್ಮ ಹೇಳುತ್ತದೆ. ಒಬ್ಬರು ಕಲ್ಲಿನಲ್ಲಿ ದೇವರನ್ನು ಕಾಣಬಹುದು, ಇನ್ನೊಬ್ಬರು ಮರದಲ್ಲಿ ಕಾಣಬಹುದು. ಮತ್ತೊಬ್ಬನಿಗೆ ಬಿಂಕಿಯಲ್ಲಿ ದೇವರು ಕಾಣಬಹುದು, ಮಗುದೊಬ್ಬನಿಗೆ ಆಕಾಶದಲ್ಲಿ ದೇವನು ಸಿಗಬಹುದು.–ನಿನ್ನಂಥವರಿಗೆ! ಯಾರೂ ಯಾರಿಗೂ ದೂಷಿಸಬಾರದು. ಕೆಟ್ಟ ಹೆಸರಿಡಬಾರದು, ಇದೇ ಆ ಲೇಸು!"

ಈ ರೀತಿ ಅವರು ಬಹಳ ಹೊತ್ತು ಮಾತಾಡುತ್ತ ಉಳಿದಿದ್ದರು.

ಹೀಗೆ ಮಾತಾಡುವ ಹೊತ್ತಿಗೆ ಫ್ರಾಂಜ ಮ್ಯುಲರರ ಒಂದು ಪಲ್ಲವಿ ಕಟ್ಟಿಟ್ಟದ್ದೇ–"ಹಿಂದೂ ಧರ್ಮವು ನಿಜವಾಗಿಯೂ ದೀಪಸ್ತಂಭದಂತೆ ಇದೆ."

ಏನ್ನಾಳದೂ ಇಂಥ ಸಮಯ ಒಂದು ಅನುಪಲ್ಲ- ನಮ್ಮಿಬ್ಬರ ಪ್ರಕೃತಿಗಳು ಭಿನ್ನ. ನಮ್ಮಿಬ್ಬರ ಮತ ಒಪ್ಪಿಗೆ ಆಗಲೇ ಆಗವು".

ಅವಳು ಅವರ ವಿದ್ಯಾರ್ಥಿನಿ ಆಗಲಿದ್ದಳು. ಅವರು ಅವಳ ಪ್ರಾಧ್ಯಾಪಕರಾಗಲಿದ್ದರು.– ಈ ಮಾತು ಇಂಥ ವೇಳೆಗೆ ಅವರಿಗೆ ಕಣ್ಮರೆ ಆಗುತ್ತಿತ್ತು. ಅವಳು ಹೀಗೆ ಅನ್ನಬಾರದು- ಎಂದು ಅವರಿಗೆ ಮನವಾರೆ ಅನಿಸುತ್ತಿತ್ತು; ಮತ್ತು ತಾನು ಹಾಗೆ ಅನ್ನಬೇಕಾಗಿದ್ದಿಲ್ಲ. ಎಂದು ಅವಳಿಗೂ ಮನವಾರೆ ಅನಿ

ಸುತ್ತಿತ್ತು. ಇವಳು ತನ್ನಂತೆಯೇ ಮಾತಾಡಬೇಕು. ಈಕೆಯ ಮತಗಳು ತನ್ನಂಥವೆ ಇರಬೇಕು—ಎಂದು ಉತ್ಕಟ ಇಚ್ಛೆ ಅವರ ಮನಸ್ಸಿನಲ್ಲಿ ಹುಟ್ಟು ತ್ತಿತ್ತು ಅವರಂತೆಯೇ ನಾನು ಮಾತನಾಡಲು ಏನು ಅಡ್ಡಿ? ತನ್ನ ಮತ ಗಳಿಗೆ ತುಸು ತಿರುವು-ಮುರುವು ಹಾಕಿ ಅವರ ಮತಗಳೊಂದಿಗೆ ಅವನ್ನು ಹೊಂದಿಸಿ ಜೋಡಿಸಿಕೊಳ್ಳಲಿಕ್ಕೆ ಏನಾದರೂ ಅಡ್ಡಿ ಇದೆಯೇ?— ಎಂದು ಅವ ಳಿಗೂ ಅನಿಸುತ್ತಲೇ ಇರುತ್ತಿತ್ತು.

ಆದರೆ ವಾದವು ಒಳ್ಳೆ ಭರಕ್ಕೆ ಬಂದಿತೆಂದರೆ, ಅವಳು ಹೀಗೆ ಅನ್ನದೆ ಎಂದೂ ಉಳಿಯುತ್ತಿದ್ದಿಲ್ಲ. "ನಮ್ಮಿಬ್ಬರ ಪ್ರಕೃತಿಯೇ ಭಿನ್ನ. ನಮ್ಮದು ಎಂದೂ ಒಮ್ಮತವಾಗಲಾರದು!"

ಇಂಥ ವೇಳೆಗೆ ಫ್ರಾಂಜ ಮ್ಯುಲರ ಮನಸ್ಸಿನಲ್ಲಿಯೇ ಮುದುಡಿ ಹೋಗಿ ಬಿಡುತ್ತಿದ್ದರು.

"ಇಬ್ಬರು ಭಿನ್ನ ಪ್ರಕೃತಿಯ ವ್ಯಕ್ತಿಗಳ ಮಿಲನವು ಸ್ವಾತ್ರ ಎಂದಿಗೂ ಆಗುವದು ಶಕ್ಯವಿಲ್ಲ"—ಎಂದು ಈಗ ಫ್ರಾಂಜ ಮ್ಯುಲರ ವರ್ಗದಲ್ಲಿ ಅಂದರು ಅದು ಏನ್ನಾಳ ಆ ಉದ್ಗಾರವನ್ನೇ ಉದ್ದೇಶಿಸಿ ಆದ್ದರಿಂದ ಅವಳಿಗೆ ಅವರ ಆ ಮಾತು ಪೂರ್ತಿ ಪೂರ್ತಿ ಅರ್ಥವಾಯಿತು.

*　　*　　*

ಮುಂದೆ ಕೆಲವು ದಿವಸಗಳ ನಂತರ ಏನ್ನಾ ನಾರ್ಡ ಕಾಯಿಲೆ ಬಿದ್ದಳು; ಮತ್ತು ಒಂದು ದಿನ ಫ್ರಾಂಜ ಮ್ಯುಲರ ಅವಳನ್ನು ಭೆಟ್ಟಿಯಾಗಲು ಅವಳ ಮನೆಗೆ ಹೋದರು.

ಅದು ಸಂಜೆಯ ವೇಳೆಯಾಗಿತ್ತು. ಧೂಸರವಾದ ಸಂಜೆ ಬೆಳಕು ಬಿದ್ದಿತ್ತು. ಏನ್ನಾ ನಾರ್ಡ ಮಲಗಿದಲ್ಲಿ ಹತ್ತಿರದ ಕಿಟಕಿಯಿಂದ ಮಸು ಮಸುಕಾದ ಸಂಜೆ ಬೆಳಕು ತೂರಿ ಬಂದು ಅವಳ ಮೋರೆಯ ಮೇಲೆ ಬಿದ್ದಿತ್ತು. ಆ ಮಂದ ಬೆಳಕಿನಲ್ಲಿ ನಿದ್ದೆ ಹೋದ ಒಬ್ಬ ಸುಂದರ ದೇವಕನ್ನಿಕೆಯೋ ವನ ದೇವಿಯೋ ಎಂಬಂತೆ ಅವಳು ತೋರುತ್ತಿದ್ದಳು. ಆಗಿನ ಅವಳ ಆ ನಿರಾಗಸ ಮುಖಮುದ್ರೆಯನ್ನು ಕಂಡು ಫ್ರಾಂಜ ಮ್ಯುಲರರು ಅಕ್ಷರಶಃ ಕಳವಳ

ಗೊಂಡು ಅವರ ಎದೆ ತುಂಬಿ ಬಂದಿತು. ನಿದ್ದೆಹೋದ ಬೇನಿಗ ವ್ಯಕ್ತಿ ಅದೆಷ್ಟು ಕನಿಕರದ ವಸ್ತುವಾಗಿ ತೋರುವದು !

ಎಲ್ಲ ಶಿಷ್ಟಾಚಾರ ಬದಿಗೊತ್ತಿ ಅವರೂ ಅವಳ ಕಡೆಗೆ ನಟ್ಟ ದೃಷ್ಟಿಯಿಂದ ನೋಡುತ್ತಲೆ ಉಳಿದರು. ಅವಳು ಶಾಂತವಾಗಿ ಮಲಗಿದ್ದಳು. ಮತ್ತು ಫ್ರಾಂಜ ಮ್ಯುಲರ ಶಾಂತವಾಗಿ ಅವಳತ್ತ ನೋಡುತ್ತಿದ್ದರು.

ಅವರು ಮನೆಯೊಳಗೆ ಬಂದರು. ಅವರು ಬಂದದ್ದು ಕಂಡು ಮನೆಗೆಲಸದವಳು ಹೊರಬಿದ್ದು ಹೋದಳು. ಮನೆಯಲ್ಲಿ ಯಾರದೇ ಸುಳುವು ಇದ್ದಿಲ್ಲ. ಫ್ರಾಂಜ ಮ್ಯುಲರ ಅವಳ ಹಾಸಿಗೆಯತ್ತ ಸರಿದಾಗ ಅವಳಿಗೆ ಒಮ್ಮೆಲೇ ಉಸಿರು ಕಟ್ಟಿದಂತೆ ಆಯಿತು. ಅವಳು ಅರೆ ಎಚ್ಚೆತ್ತು ನೀರನ್ನು ಬೇಡಿದಳು-ಅರ್ಧ ಎದ್ದು, ಪಕ್ಕದ ಮೇಜಿನ ಮೇಲೆ "ಮಿನರಲ ವಾಟರ" (ಖನಿಜ ನೀರಿನ) ಸೀಸೆಯನ್ನು ಅವರು ನೋಡಿದರು. ಅವರು ಗ್ಲಾಸಿನಲ್ಲಿ ನೀರನ್ನು ತೆಗೆದುಕೊಂಡು ಆ ಗ್ಲಾಸನ್ನು ಅವಳ ಮುಂದೆ ಹಿಡಿದರು. ಆಗ ಅವಳು ಪೂರ್ತಿ ಕಣ್ಣು ತೆರೆದಳು ಮತ್ತು ತುಸು ಆಶ್ಚರ್ಯದಿಂದಲೆ ಫ್ರಾಂಜ ಮ್ಯುಲರರ ಕಡೆಗೆ ನೋಡ ಹತ್ತಿದಳು.

ಅವರು ನಕ್ಕರು. ಆದರೆ ತೀರ ಮಿತವಾಗಿ !

ಫ್ರಾಂಜ ಮ್ಯುಲರ ನಗುವಾಗ ಥೇಟು ಮಾನಫ್ರೆಡ್ ಮ್ಯುಲರರಂತೆಯೇ ಕಾಣುತ್ತಿದ್ದರು.— ಎಂದು ಯಾವಾಗಲೂ ಅನಿಸುತ್ತಿತ್ತು. ಹಾಗೆ ಅವಳಿಗೂ ಆಗ ಅನಿಸಿತು. ಆ ತಂದೆ ಮಕ್ಕಳ ನೀಲ ಅಲಿಗಳಲ್ಲಿ ಸಮುದ್ರದ ಆಳವಿದೆ—ಎಂದು ಅವಳಿಗೆ ಬಹಳ ಹೊತ್ತು ಅನಿಸುತ್ತಲಿತ್ತು ; ಆಮೇಲೆ ಕೆಲಹೊತ್ತು ಅವಳ ಮನಸ್ಸು ಆ ಪಿತಾ ಪುತ್ರರನ್ನು ತುಲನೆಮಾಡುತ್ತ ಉಳಿಯಿತು. ಮತ್ತು ಫ್ರಾಂಜ ಮ್ಯುಲರ ಅವಳ ಕಡೆಗೆ ನೋಡುತ್ತಲೇ ಉಳಿದರು.

ಯಾವದೋ ಕನಸಿನೊಳಗಿಂದ ಎಚ್ಚತ್ತಂತೆ ಆಕೆ ಅವರತ್ತ ನೋಡಿ ಅಂದಳು, "ಆಯ್ ? ಅಮ್ಮ ಎಲ್ಲಿ ?"

ಫ್ರಾಂಜ ಮ್ಯುಲರ. "ಅದು ಅಮ್ಮನಿಗೇ ಗೊತ್ತು ! ನಾನು ಬಂದಾಗ ಇಲ್ಲಿ ಯಾರೂ ಇದ್ದಿಲ್ಲ. ಇಷ್ಟು ಮಾತ್ರ ನನಗೆ ಗೊತ್ತು, ನಾನು ಬಂದೊಡನೆ,

ನಿಮ್ಮ ಕೆಲಸದಾಕೆ ಹೊರಟು ಹೋದಳು. ಉಳಿದವರು ನಾವಿಬ್ಬರೇ ; ನೀನು ಮತ್ತು ನಾನು....ಬರೆ ಇಬ್ಬರೇ !"

ಏರ್ನಾ ಬೆಚ್ಚಿದಳು. ಫ್ರಾಂಜ ಮ್ಯುಲರ ಶಾಂತ ಭಾವದಲ್ಲಿ ಅವಳ ಹತ್ತಿರ ನಿಂತಿದ್ದರು. ಅವರ ಚರ್ಯೆ ನಿರ್ವಿಕಾರವಾಗಿತ್ತು.

ಫ್ರಾಂಜ ಮ್ಯುಲರ ಕೊಟ್ಟ ನೀರು ಅವಳು ಕುಡಿದಳು. ಅವಳ ಕೈಗೆ ನೀರಿನ ಗ್ಲಾಸು ಕೊಡುವಾಗ ಅವಳ ಕೈಗೆ ಅವರ ಸ್ಪರ್ಶವಾಯಿತು. ಅದು ಅವರು ಬೇಕೆಂತಲೆ ಮಾಡಿದರೆಂದು ಅವಳಿಗೆ ಅನಿಸಿತು. ಅವಳ ಮೈಯು ಜುಮ್ಮನೆ ನಿಮಿರಿತು. ಅವಳು ಮತ್ತೆ ಒರಗಿ ಉಳಿದಳು. ಆ ಸ್ಥಿತಿಯಲ್ಲಿಯೂ ಅವಳ ಮೋರೆ ಅರಳಿದಂತೆ ಕಾಣುತ್ತಿತ್ತು –.ಹೂವು ಅರಳುತ್ತ ನಡೆದಿತ್ತು.

ಈಗ ಸಂಜೆ ಬೆಳಕು ನಂದಿತು, ಉಳಿದದ್ದು ಕತ್ತಲೆ,–ಆದರೆ ಅದು ಅರೆಮುಸುಕು. ಆ ಅರೆಮುಸುಕು ಕತ್ತಲೆಯಲ್ಲಿಯೂ. ಅವಳ ಚಹರೆ ಕಾಣುತ್ತಿತ್ತು. ಆಕೆ ಕಣ್ಣು ಮುಚ್ಚಿಕೊಂಡಿದ್ದಳು–ತನ್ನ ಚೆಲುವಿನ ಕರಗಳನ್ನು ಆಕೆ ಹೃತ್ಪೂರ್ವಕವಾಗಿಯೇ ಮುಚ್ಚಿಕೊಂಡಂತೆ! ಏನಾಗಲಿದೆಯೊ-ಅದರ ದಾರಿಕಾಯುತ್ತಿದ್ದಿರಬೇಕು ಆಕೆ, –ಎಂದು ಅನಿಸುತ್ತಿತ್ತು.

ಕೆಲವು ಹೊತ್ತಿನ ಮೇಲೆ ಆಕೆ ಬೆಚ್ಚಿಬಿದ್ದಂತೆ ಕಣ್ಣು ತೆರೆದಳು. ಆಗ ಅವಳ ಕೈಯು ಫ್ರಾಂಜ ಮ್ಯುಲರರು ತನ್ನ ಕೈಯಲ್ಲಿ ತೆಗೆದುಕೊಂಡಿದ್ದರು. ಅವಳು ಕಣ್ಣು ತೆರೆದದ್ದು ನೋಡಿ ಅವರು ಅವಳನ್ನು ದಿಟ್ಟಿಸುತ್ತ ಅಂದರು. ನಿನ್ನ ಮೈಯಲ್ಲಿ ಎಷ್ಟು ಜ್ವರವಿದೆ? ನಿನ್ನ ಬಳಿಗೆ ಯಾರೂ ಕೂತಿರಲಿಲ್ಲವೇಕೆ?

ಇದಕ್ಕೆ ಅವಳು ನಕ್ಕು ಉತ್ತರಿಸಿದಳು. "ನೀವಿರುವಿರಲ್ಲ ಬಳಿಗೆ!"

ಆಕೆ ಈ ಶಬ್ದಗಳನ್ನು ಉಚ್ಚರಿಸಿದ ರೀತಿಯನ್ನು ಕೇಳಿ ಫ್ರಾಂಜ ಮ್ಯುಲರ ಒಮ್ಮೆಲೆ ಬೆಚ್ಚಿದರು; ಅವರಿಗೆ ಬೇಕಾದುದೇ ಘಟಿಸುತ್ತಿತ್ತು.

ಆಮೇಲೆ ಏರ್ನಾ ಅವರತ್ತ ನೋಡುತ್ತ ಅಂದಳು. "ಎಲ್ಟೆರ್ನ (ತಾಯ್ತಂದೆ, ಹಿರಿಯರು) ಇಬ್ಬರೂ ಚರ್ಚಿಗೆ ಹೋಗಿದ್ದಾರೆ"

ಅವಳ ತಂದೆ ಫರ್ಡಿನಂಡ ನಾರ್ಡ ಮತ್ತು ತಾಯಿ ಯೊಹಾನಾ ನಾರ್ಡ ಇವರಿಬ್ಬರೂ ಒಂದು ಚರ್ಚಿನಲ್ಲಿ ಕೆಲಸಕ್ಕೆ ಹೋಗುತ್ತಿದ್ದರು. ಈ ಸಂಗತಿ ಫ್ರಾಂಜ ಮ್ಯುಲರರಿಗೊ ಕೇಳಿ ಗೊತ್ತು. ಏನ್ನಾಳ ತಂದೆ ತಾಯಿ ಮುಂಚೆ ಸೆಂಟಪಿಟರ ಚರ್ಚಿನಲ್ಲಿ ಕೆಲಸಕ್ಕೆ ಹೋಗುತ್ತಿದ್ದರು. ಅಲ್ಲಿ ಪ್ರಾರ್ಥನೆಯಲ್ಲಿಯೂ ಅವರು ಭಾಗವಹಿಸಬೇಕಾಗುತ್ತಿತ್ತು. ಜೊತೆಗೆ ಚರ್ಚಿನ ಪರಿಸರದ ಎಲ್ಲ ಮೇಲ್ವಿಚಾರಣೆ ಅವರೇ ನೋಡಿಕೊಳ್ಳಬೇಕಿತ್ತು. ಸದಾ ಹಸಿರು ಮರಬಳ್ಳಿಗಳ ಪರಿಸರದಲ್ಲಿ ಈ ಚರ್ಚು ನಿಂತಿತ್ತು. ಮರಗಳ ದಟ್ಟಣೆಯೊಳಗಿಂದಲೂ ಚರ್ಚಿನ ಮುಂಭಾಗವೂ ಅದರ ಮೇಲಿನ ಸಿಲುಬೆ ನೋಡುವವರಿಗೆ ಸಹಜವಾಗಿ ಕಾಣುತ್ತಿದ್ದವು. ಚರ್ಚಿನ ಗೋಡೆಗಳು ಹಚ್ಚಗಿನ ಬಳ್ಳಿಗಳಿಂದ ಹೊದ್ದಿ ಹೋಗಿದ್ದವು. ಆ ಬಳ್ಳಿಗಳ ಆರೈಕೆ ಯಾವಾಗಲೂ ಮಾಡಬೇಕಿತ್ತು. ಚಳಿಗಾಲದ ದಿನಗಳಲ್ಲಿ ಹಿಮಬಿದ್ದು ಮರಗಳ ಎಲೆಗಳೆಲ್ಲ ಪೂರಾ ಉದುರಿ ಹೋಗುತ್ತಿದ್ದವು. ಆದರೆ ಈ ಬಳ್ಳಿಗಳು ಮಾತ್ರ ಹಚ್ಚಹಸಿರಾಗಿ ಕಾಣುತ್ತಿದ್ದವು. ಆದಾಗ್ಯೂ ಈ ಚರ್ಚಿನೊಳಗಿನ ವಾತಾವರಣವು ಮರಗಳ ಎಲೆಗಳಂತೆಯೇ ಬತ್ತಿ ಕಮರಿ ಹೋಗಿತ್ತು. ಅದರಲ್ಲಿ ತಾಜಾತನ ಎಂದೂ ಇದ್ದಿಲ್ಲ. ಅಲ್ಲಿ ನಿಂತ ಗೋರಿಕಲ್ಲುಗಳಂತೆಯೇ ಆ ವಾತಾವರಣವು ಸದಾ ಸ್ಥಿರವಾಗಿಯೇ ಇರುತ್ತಿತ್ತು. ಸತ್ತ ಮಂದಿಯೊಂದಿಗೇ ಸುಧಾರಣೆಯನ್ನು ನೆಲದಲ್ಲಿ ಹುಗಿದು ಹಾಕಿದಂತಿತ್ತು. ಮತ್ತು ಅದರೊಳಗಿಂದ ಕರ್ಮಠತೆ ಚೀರುತ್ತಿತ್ತು.

ಆದರೆ ಈ ಕರ್ಮಠತನ ಏನ್ನಾಳ ತಾಯಿ-ತಂದೆಗಳ ವೃತ್ತಿಗೆ ಒಗ್ಗಿದ್ದಿಲ್ಲ. ಅವರಿಗೆ ಅದು ಅರಗಿದ್ದಿಲ್ಲ. ಚರ್ಚಿಗೆ ಬಂದ ಅಭ್ಯಾಗತರಿಗೆ ಅಲ್ಲಿಯ ಗೋರಿಗಳಲ್ಲಿ ವಿರಮಿಸಿದ ಜನರ ಪರಿಚಯ ಹೇಳುವದು ಮತ್ತು ಚರ್ಚಿನ ಮೇಲ್ವಿಚಾರಣೆ ಮಾಡಿಕೊಳ್ಳುತ್ತಿರುವಾಗಲೇ ಪ್ರಾರ್ಥನೆಯಲ್ಲಿ ಭಾಗವಹಿಸುವದು ಇಷ್ಟೇ ಕೆಲಸ ಅವರ ಪಾಲಿನದಿತ್ತು. ಅವರ ಮನಸ್ಸು ಆ ಸೆಂಟಪಿಟರ ಚರ್ಚಿನಲ್ಲಿ ಏನೇ ಮಾಡಿದರೂ ರಮಿಸಲಿಲ್ಲ.

ಆದ್ದರಿಂದ ಅವರು 'ಪ್ರಾವಿಡನ್ಸ ಚರ್ಚಿಗೆ ತಮ್ಮ ವರ್ಗ ಮಾಡಿಸಿಕೊಂಡರು. ಮನಸ್ಸು ಮೆಚ್ಚದ ಒಂದು ಚರ್ಚು ಬಿಟ್ಟು ಇನ್ನೊಂದರಲ್ಲಿ ಅವರು ಕೆಲಸ ಕೈಗೊಂಡರು.

ದಿನದ ಕೆಲಸವೆಲ್ಲ ಮುಗಿಸಿ ಆ ಗಂಡ ಹೆಂಡತಿ ಆ ಚರ್ಚಿನ ಆವಾರದಲ್ಲಿ ವಿಶ್ರಮಿಸಿದಾಗ ಅವರ ದೃಷ್ಟಿ ಚರ್ಚಿನ ಗುಮ್ಮಟದತ್ತ ಹಾಯುವದು. ಅವರ ಮನಸ್ಸು ಭೂತಕಾಲವನ್ನು ಹೊಕ್ಕುವದು. ಯುದ್ಧದಂಥ ಆಪತ್ತಿನಿಂದ ಮನುಷ್ಯ ಭಯಭೀತನಾದನೆಂದರೆ ಅವನ ಕಣ್ಣು ಕ್ಷಿತಿಜದ ಆಚೆಗೆ ಓಡುವದು. ಆಚೆಯ ಅಜ್ಞಾತ ಪ್ರಾಂತವು ಅವನಿಗೆ ತೋರಲು ಹತ್ತುತ್ತದೆ. ಅಜ್ಞಾತದ ಆಚೆಗೆ ನಿಂತ ದೇವರ ಬೀಸುವ ಕೈಯು ಅವನಿಗೆ ಕಾಣುತ್ತದೆ. ಅವನಿಗೆ ಧೈರ್ಯ ಬರುತ್ತದೆ. ಮನುಷ್ಯನ ಕೈಗಳು ಮಾಡಿದ ದುಷ್ಕೃತ್ಯಗಳನ್ನು ಸಾವರಿಸುವ ಶಕ್ತಿ 'ಆ' ಕೈಯಲ್ಲಿದೆ ಎಂದು ಅವನಿಗೆ ಅನಿಸ ಹತ್ತುತ್ತದೆ.

ಗೊತ್ತಿದ್ದ ಪಾಪಿ ಕೈಗೆ ಆಧಾರ ಕೊಡುವ, ಗೊತ್ತಿಲ್ಲದ ಪುಣ್ಯದ ಕೈಯೂ ಒಂದು ಇದೆ ಎಂದಾಯಿತು !

ಇವೆಲ್ಲ ವಿಚಾರಗಳು ಅವರ ಮನಸ್ಸಿನಲ್ಲಿ ಸುಳಿದು ಹೋಗುತ್ತಿದ್ದವು.

ಯುದ್ಧಕೋರ ಮನಸ್ಸನ್ನು ಯುದ್ಧ ವಿಮುಖವಾಗಿ ಮಾಡಲಿಕ್ಕೆಂದೇ, ಮತ್ತು ದುಃಖಿತ ಮನುಷ್ಯನನ್ನು ಸುಖಿಯಾಗಿ ಮಾಡಲಿಕ್ಕೆಂದೇ, ಈ ಚರ್ಚನ್ನು ನಿಲ್ಲಿಸಿದ್ದಲ್ಲವೇ ? ಕಾರ್ಲ ಲುಡ್ವಿಗ್‌ನು ಈ ಚರ್ಚನ್ನು ಯಾತಕ್ಕಾಗಿ ನಿಲ್ಲಿಸಿದನು ?

ಕೆಲ್ವಿನ್‌ನ ಸುಧಾರಣಾವಾದಿ ಗಾಳಿಯು ಈ ಚರ್ಚಿಗೂ ಸೋಂಕಿತ್ತು. ಆದ್ದರಿಂದ ಸುಧಾರಣಾವಾದಿ ತರುಣ ಮಂದಿಯೂ ಚಿಕಿತ್ಸಕ ದೃಷ್ಟಿಯಿಂದ ಈ ಚರ್ಚಿಗೆ ಬರುತ್ತಿದ್ದರು.

ಎಲ್ಲ ಧರ್ಮಗಳ ಪ್ರಾಥಮಿಕ ಪಾಠವನ್ನು ಕೊಟ್ಟು ಕ್ರೈಸ್ತ ಧರ್ಮವು ಎಲ್ಲ ಧರ್ಮಗಳಿಗಿಂತ ಹೇಗೆ ಶ್ರೇಷ್ಠವೆಂಬ ಮಾಹಿತಿ ಹೊಸ ವಿದ್ಯಾರ್ಥಿಗಳಿಗೆ ಮನಗಾಣಿಸಿಕೊಡುವ ಯೋಜನೆ ಈ ಕ್ಯಾಥೊಲಿಕ ಸುಧಾರಣಾವಾದಿ ಚರ್ಚಿನ ಪರವಾಗಿ ಮಾಡಲಾಗಿತ್ತು. ಮತ್ತು ಆ ಕೆಲಸ ಫರ್ಡಿನಂಡ ನಾರ್ಡರಿಗೆ ಒಪ್ಪಿಸಿತ್ತು.

ಏನ್ನಾ ನಾರ್ಡಳೂ ತನ್ನ ಪ್ರಾಥಮಿಕ ಧಾರ್ಮಿಕ ಪಾಠಗಳನ್ನು ತಂದೆಯಲ್ಲಿಯೇ ಗೀರಿದ್ದಳು. ಅಲ್ಲಿಂದಲೆ 'ಆಬಿಟುರ'ದ ನಂತರ,-ಶಾಲಾಂತ

ಪರೀಕ್ಷೆಯ ನಂತರ ಆಕೆ ಸರ್ವಧರ್ಮಶಾಸ್ತ್ರದ ವಿಷಯವನ್ನು ಆಯ್ದು ಕೊಂಡಿದ್ದಳು. ಅವಳ ತಂದೆ ಆ ಚರ್ಚಿನಲ್ಲಿ ಸರ್ವಧರ್ಮ ಶಾಸ್ತ್ರದ ಪಾಠ ಕೊಟ್ಟು ಕ್ರೈಸ್ತ ಧರ್ಮದ ಮಹಿಮೆಯನ್ನು ಮನಗಾಣಿಸಿಕೊಡುತ್ತಿದ್ದರು. ಏರ್ನಾ ಮನೆಯಲ್ಲಿಯೆ ಕುಳಿತು ಕ್ರೈಸ್ತ ಧರ್ಮದ ಮಹಿಮೆಯನ್ನು ಹಾಡು ತ್ತಿದ್ದಳು. ಹಿಂದೂ ಧರ್ಮವು ಅವಳ ಲೆಕ್ಕಕ್ಕೇ ಇದ್ದಿಲ್ಲ.

'ಅಮ್ಮ–ಅಪ್ಪ ಇಬ್ಬರೂ ಚರ್ಚಿಗೆ ಹೋಗಿದ್ದಾರೆ' ಅಂದಳು ಏರ್ನಾ. ಆಗಲೆ ಫ್ರಾಂಜ ಮ್ಯುಲರನಿಗೆ ಗೊತ್ತು ಅವರು ತಡಮಾಡದೆ ಮನೆಗೆ ಮರಳ ಲಿಕ್ಕಿಲ್ಲವೆಂದು.

ಕೆಲಹೊತ್ತು ತಡೆದು ಅವಳು ಕೇಳಿದಳು. "ನಿಮಗೆ ಹೇಗೆ ಗೊತ್ತಾ ಯಿತು –ನನಗೆ ಕಾಯಿಲೆ ಎಂದು ?"

ಅವಳ ಈ ಪ್ರಶ್ನೆಗೆ ಫ್ರಾಂಜ ಮ್ಯುಲರ ಅಂದರು, "ನಾಲ್ಕೈದು ದಿನ ನೀನು ಕ್ಲಾಸಿಗೆ ಬರಲಿಲ್ಲ. ಏಂದು ಸಹಜವಾಗಿಯೇ ಚೌಕಶಿ ಮಾಡಿದೆ. ಆಗ ಗೊತ್ತಾಯಿತು. ನೀನು ಕಾಯಿಲೆ ಬಿದ್ದಿರುವಿಯೆಂದು ಗೊತ್ತಾದೊಡನೆ ನೇರ ಇಲ್ಲಿಗೆ ಬಂದೆ— ನಿನ್ನ ಪ್ರಕೃತಿಯನ್ನು ನೋಡಲಿಕ್ಕೆ".

ಆ ಮೊದಲು ಅವರು ಅವಳ ಮನೆಗೆ ಏನೊ ನೆವದಿಂದ ಎರಡು ಮೂರು ಸಲ ಬಂದಿದ್ದುಂಟು. ಆಗ ಅವರಿಬ್ಬರಲ್ಲಿ ವಾದ ನಡೆದದ್ದೂ ಉಂಟು. ಅವರು ಅವಳ ಪ್ರಾಧ್ಯಾಪಕರು. ಅವಳು ಅವರ ವಿದ್ಯಾರ್ಥಿನಿ. ಆದರೆ ಅವರೊಂದಿಗೆ ವಾದಿಸುವಾಗ ಅವರ ಭಯ, ಭಿಡೆ ಏನೂ ಅವಳು ಇಟ್ಟುಕೊಳ್ಳುತ್ತಿದ್ದಿಲ್ಲ. ಅವರು ಹಿಂದೂ ಧರ್ಮದ ಪಕ್ಷಪಾತ ಮಾಡಬೇಕು, ಅವಳು ಕ್ರೈಸ್ತ ಧರ್ಮ ಎತ್ತಿ ಹಿಡಿದು ಅವರ ವಾದ ತೊಡೆದು ಹಾಕಬೇಕು. ಅವರು ಕ್ರೈಸ್ತ ಧರ್ಮದ ಕುರಿತು ವಿವೇಕಾನಂದರ ಮತಗಳನ್ನು ಹೇಳಿ ಅನ್ನ ಬೇಕು. 'ವಿವೇಕಾನಂದರಿಗೆ ಹಿಂದೂ ಧರ್ಮವೇ ಸರ್ವಶ್ರೇಷ್ಠವೆನಿಸುತ್ತದೆ.' ಅದಕ್ಕೆ ಅವಳು ಒಳ್ಳೆ ಸಂಭಾವಿತ ಆಶ್ಚರ್ಯತೆಯಿಂದ ಮರು ಸವಾಲು ಹಾಕಬೇಕು. "ಯಾರು ಆ ವಿವೇಕಾನಂದ ? ನಾನು ಈ ಹೆಸರನ್ನು ಎಂದೂ ಕೇಳಿಯೆ ಇಲ್ಲ!"

ಇದರ ಮೇಲೆ ಸ್ವಾಮಿ ವಿವೇಕಾನಂದರ ಹೆಸರು ಕೂಡ ಏನ್ಸಾಳಿಗೆ ಗೊತ್ತಿಲ್ಲವೆಂಬುದಕ್ಕೆ ಫ್ರಾಂಜ ಮ್ಯುಲರ ಪರಮಾವಧಿಯ ಖೇದ ವ್ಯಕ್ತ ಮಾಡಬೇಕು.

ಆಗ ಈ ವ್ಯಾಜ್ಯ ವಿಕೋಪಕ್ಕೆ ಹೋಗುತ್ತಿತ್ತು ಏನ್ಸಾ ತನ್ನ ನಿತ್ಯದ ಪಲ್ಲವಿ ಹಾಡುತ್ತಿದ್ದಳು. "ನಮ್ಮಿಬ್ಬರ ಪ್ರಕೃತಿಯೇ ಭಿನ್ನ, ಇಬ್ಬರದೂ ಒಮ್ಮತವೆಂದೂ ಆಗಲಾರದು."

ವಿದ್ಯಾಪೀಠದಲ್ಲಿ ಅವರ ಕೋಣೆಗೆ ಹೋಗಿ ಆಕೆ ಅವರೊಂದಿಗೆ ವಾದ ಹಾಕಿದ್ದಳು. ಆ ವಾದಗಳ ಕೊನೆಗೂ ಅವಳು ತನ್ನ ನಿತ್ಯದ ಪಲ್ಲವಿ ಹಾಡಿದ್ದಳು. ಮತ್ತು ಇಂದು ಫ್ರಾಂಜ ಮ್ಯುಲರ ಅವಳ ಪ್ರಕೃತಿಯನ್ನು ನೋಡಲು ಅವಳ ಮನೆಗೆ ಬಂದಿದ್ದರು—ಮಾನಸಿಕ ಪ್ರಕೃತಿಯಲ್ಲ. ಶಾರೀರಿಕ ಪ್ರಕೃತಿಯನ್ನು ನೋಡಲಿಕ್ಕೆ!

ಫ್ರಾಂಜ ಮ್ಯುಲರ ಬರುಪದರಲ್ಲಿ ಅವಳಿಗೆ ಏನೇನೂ ಆಶ್ಚರ್ಯವೆನಿಸಲಿಲ್ಲ. ತಿರುಗಿ, ಅವಳು ಅವರ ಬರವನ್ನೇ ಕಾಯುತ್ತಿದ್ದಳು. ತಾನು ವರ್ಗದಲ್ಲಿ ಕಾಣಲಿಲ್ಲವೆಂದಾಗ ಅವರು ತನ್ನ ಬಗೆಗೆ ಚೌಕಶಿ ಮಾಡುವರು. ಚೌಕಶಿ ಮಾಡಿದಾಗ ತಾನು ಬೇನೆಬಿದ್ದಿದ್ದೇನೆಂದು ಅವರಿಗೆ ಗೊತ್ತಾಗುವದು. ಅದು ಗೊತ್ತಾದೊಡನೆ ಅವರು ತನ್ನ ಮನೆಗೆ ಬರದೆ ಉಳಿಯುವದಿಲ್ಲ—ಈ ಸಂಗತಿ ಅವಳು ತನ್ನ ಮನಸ್ಸಿನಲ್ಲಿ ಗಂಟು ಹಾಕಿಕೊಂಡಿದ್ದಳು. ಅದೇ ಮೇರೆಗೆ ಅವರು ಬಂದಿದ್ದರು. ಇದರಿಂದ ಏನು ತಿಳಿಯಬೇಕೋ ಅದನ್ನು ಆಕೆ ತಿಳಿದಿದ್ದಳು.

ಕಳೆದ ಕೆಲವು ದಿನಗಳಿಂದ ಏನೋ ಒದಗಿ ಬರುತ್ತಿತ್ತೆಂಬುದು ಮಾತ್ರ ನಿಜ! ಫ್ರಾಂಜ ಮ್ಯುಲರ ಅವಳ ಕಡೆಗೆ ಆಗಾಗ್ಗೆ ಬರುತ್ತಿದ್ದರು. ಅವರಲ್ಲಿ ಚರ್ಚೆಗಳು ನಡೆಯುತಿದ್ದವು. ಚರ್ಚೆ ವಿಕೋಪಕ್ಕೆ ಹೋಗುತ್ತಿತ್ತು. ಈ ಜಗಳಗಳು ತುಂಬ ಜಗ್ಗಿ ಎಳೆಯಲ್ಪಡುತ್ತಿದ್ದವು ಆದರೆ ಹರಿಯುತ್ತಿದ್ದಿಲ್ಲ. ಇಬ್ಬರ ಮತಗಳು ಪೂರ್ವ ಪಶ್ಚಿಮದಂತೆ ಆಗುತ್ತ ಹೋಗಿದ್ದವು. ಆದರೆ ಮನಸ್ಸು ಮಾತ್ರ ಕೂಡುತ್ತ ನಡೆದಿದ್ದವು.

ಕಳೆದ ಕೆಲವು ದಿವಸಗಳಲ್ಲಿ ನಿರ್ಮಲಳ ಮನಸ್ಸು ಖಚಿತ ಮಾಡಿಕೊಂಡಿತ್ತು. ಫ್ರಾಂಜ ಮ್ಯುಲರರ ಅಂತರಂಗದಲ್ಲಿ ತನ್ನ ಒಗೆಗೆ ಸೆಳೆತ ಉಂಟಾಗಿದೆ. ಅವರು ತನ್ನೊಂದಿಗೆ ವಾದ ಹೂಡುತ್ತಾರೆ ಆದರೆ ವಾದ ನಡೆಯುತ್ತಿದ್ದಾಗಲೂ, ಈ ವಾದ ಬೇಡವಾಗಿತ್ತು- ಎಂಬ ಭಾವ ಅವರ ಚರ್ಯೆಯಲ್ಲಿ ಒಡೆದದ್ದು ಕಾಣುತ್ತಿತ್ತು. ವಾದ ಮಾಡುವಾಗ ಅವರ ಎದೆಯಲ್ಲಿ ಕಳವಳ ನಡೆದಿರುತ್ತದೆ, ಎಂಬುದೂ ಅವಳಿಗೆ ಚಟ್ಟನೆ ಹೊಳೆಯುತ್ತಿತ್ತು. ವಿಶೇಷವಾಗಿ ಕಳೆದ ಹದಿನೈದು ದಿನಗಳಲ್ಲಿ ಅವಳು ಅವರ ಮಾತುಕತೆಗಳನ್ನು ಸೂಕ್ಷ್ಮವಾಗಿ ನೋಡಿಕೊಂಡಿದ್ದಳು. ಅವರು ಅವಳ ಕಡೆಗೆ ನೋಡುವ ರೀತಿಯನ್ನು ಚೆನ್ನಾಗಿ ದಿಟ್ಟಿಸಿದ್ದಳು. ಮತ್ತು ಮನೋಭಾವದಿಂದ ಏನು ಅರಿತುಕೊಳ್ಳಬೇಕೋ ಅದನ್ನು ಅರಿತುಕೊಂಡಿದ್ದಳು. ಫ್ರಾಂಜ ಮ್ಯುಲರರ ಮನಸ್ಸು ತನ್ನಲ್ಲಿ ಪೂರ್ತಿ ನೆಟ್ಟಿದೆ ಈ ಕುರಿತು ಅವಳಿಗೆ ಈಗ ಯಾವ ಶಂಕೆಯೂ ಉಳಿದಿದ್ದಿಲ್ಲ.

ಆದರೆ ಅವಳಿಗೆ ತನ್ನ ಮನಸ್ಸಿನದೇ ನೆಲೆ ಇನ್ನೂ ಪೂರ್ಣ ಹತ್ತಿದ್ದಿಲ್ಲ. ಈ ವರೆಗೂ ಅವಳ ಮನವರಿಕೆ ಏನಿತ್ತೆಂದರೆ. ಇದೆಲ್ಲ ಪ್ರಕಾರ ಏಕಪಕ್ಷೀಯವಾಗಿದೆ. ಒಂದು ಬದಿಯದಾಗಿದೆ. ಏಕೆಂದರೆ ಪ್ರಿಯತಮನೊಂದಿಗೆ ಪ್ರೇಯಸಿಯು ಜಗಳಾಡುವದು ಉಂಟೇ? ಅವನೊಂದಿಗೆ ಮಾತಾಡುವದರಲ್ಲಿ ಅವಳು ನಿಕರಕ್ಕೆ ಬರುವದುಂಟೇ?

ಅವಳು ತನ್ನ ಮನಸ್ಸಿಗೆ ಮತ್ತೆ ಮತ್ತೆ ತಿಳಿಹೇಳುತ್ತಿದ್ದಳು.--ಇದೆಲ್ಲ ಪ್ರಕಾರ ಒಂದೇ ಬದಿಯದು ಏಕಪಕ್ಷೀಯ. ತಾನೇನು ಆ ಕುರಿತು ವಿಚಾರ ಮಾಡುವ ಕಾರಣವಿಲ್ಲ. ತಾನು ತನ್ನ ಪಾಲಿಗೆ ತೆಪ್ಪಗಿದ್ದರೆ ತೀರಿತು!

ಆದರೆ ಜಪ್ಪಿಸಿ ನಡೆಯಬೇಕೆಂದರೂ ಇಂಥ ಸಂಗತಿಗಳಲ್ಲಿ ಜಪ್ಪಿಸಿರಲು ಆಗುವದಿಲ್ಲ.--ಈ ವಿಚಾರದ ಅರಿವೂ ಅವಳಿಗೆ ಇದ್ದಿಲ್ಲ. ತನ್ನ ಮನಸ್ಸಿನೊಂದಿಗೆ ಜಗಳಾಡುತ್ತ ಆಡುತ್ತ ಒಳಗೆ ಆಳದಲ್ಲಿ ಅವಳಿಗೆ ಅನಿಸುತ್ತಿತ್ತು. ತನ್ನ ಮತ್ತು ಫ್ರಾಂಜ ಮ್ಯುಲರರ ಕಲಹ ಬರೆ ಮೇಲ್ಮೇಲಿನದು. ತಾನು ಅವರೊಂದಿಗೆ ಹಾಕುವ ವಾದವೂ ಬರೆ ಹುಸಿ ತೋರಿಕೆಯದು. ನಿಜವಾದ ಅರ್ಥದಲ್ಲಿ ಅವರೊಂದಿಗೆ ಮಾತಾಡುವಾಗ ತಾನು ಹಾಗೆ ನಿಕರ ಪ್ರಸಂಗಕ್ಕೆ

ಬರುವದೇ ಇಲ್ಲ. ಅವರ ಪಾಲಿಗೆ ಹಿಂದೂ ಧರ್ಮವೇ ಶ್ರೇಷ್ಠವಿರಲಿ, ನನ್ನ ಪಾಲಿಗೆ ಕ್ರೈಸ್ತ ಧರ್ಮವೇ ಶ್ರೇಷ್ಠವಿರಲಿ– ಅದರಲ್ಲಿ ಏನಿದೆ? ಆದರೆ ಅವರು ಯಾವಾಗಲೂ ಅನ್ನುತ್ತಿರುತ್ತಾರೆ. ಹಿಂದೂ ಧರ್ಮವು ಸಹಿಷ್ಣು ವಾಗಿದೆ. ಉದಾರವಾಗಿದೆ, ಅಂದಾಗ....

ಅವಳಿಗೆ ಈ ತನ್ನ ವಿಚಾರಗಳ ಬಗೆಗೆ ನಗು ಬರುವದು. ಸರ್ವ ಸಮಾವೇಶಕ ಹಿಂದೂ ಧರ್ಮವು ಸಹಜವಾಗಿಯೆ ತನ್ನನ್ನು ಸಮಾವೇಶ ಗೊಳಿಸಿಕೊಂಡು ಬಿಡುವದು-ಎಂದು ಅವಳಿಗೆ ಅನಿಸುತ್ತಿರುತ್ತಿತ್ತು. ಅದೇ ಹಿಗ್ಗಿನಲ್ಲಿ ಅವಳು ನಗುತ್ತ ಇರುತ್ತಿದ್ದಳು.

ವಸ್ತುತಃ ಅವಳ ಮತ್ತು ಅವರ ವಯೋಮಾನದಲ್ಲಿ ಬಹಳ ಅಂತರ ವಿತ್ತು. ಭಾರತೀಯ ಸಂಸ್ಕೃತಿಯ ಅಭ್ಯಾಸದಲ್ಲಿ ಬಿದ್ದ ಫ್ರಾಂಜ ಮ್ಯುಲರ ತಮ್ಮ ವಯಸ್ಸಿನ ಕಡೆಗೆ ಏನೂ ಲಕ್ಷ್ಯ ಪೂರೈಸಿದ್ದಿಲ್ಲ. ಅವರು ಮೂವತ್ತೈದು ದಾಟಿದ್ದರು. ಆದರೂ ಭಾರತೀಯ ಸಂಸ್ಕೃತಿಯ ಅವರ ವ್ಯಾಸಂಗ ಮುಗಿ ದಿದ್ದಿಲ್ಲ. ತಮ್ಮ ಬಾಳಿನಲ್ಲಿ ಜ್ಞಾನಾರ್ಜನೆಯ ಹೊರತು ಬೇರೆ ಕರ್ತವ್ಯವೇ ನಾದರೂ ಉಂಟೆಂಬ ಸಂಗತಿಯನ್ನೇ ಅವರು ಪೂರ್ತಿ ಮರೆತಿದ್ದರು. ಆದರೆ ಅದು ಎಲ್ಲಿಯ ವರೆಗೆ ? ಏರ್ನಾ ಸಾರ್ಡ ಮತ್ತು ಅವರು ಗಂಟು ಬೀಳುವ ತನಕ. ಫ್ರಾಂಜ ಮ್ಯುಲರ ಗಂಟು ಬಿದ್ದದ್ದು ಕೇವಲ ಇಪ್ಪತ್ತರ ಹರೆಯದ ಹುಡುಗಿಯೊಂದಿಗೆ. ಮತ್ತು ಅವರ ಮನಸ್ಸು ನೇರವಾಗಿ ಎಲ್ಲಿ ಬೇಡವೋ ಅಲ್ಲಿಯೇ ಸಿಲುಕಿಕೊಂಡಿತು. ತನಗಿಂತ ಎಷ್ಟೋ ಕಡಿಮೆ ಪ್ರಾಯದ ಹುಡು ಗಿಯ ಪ್ರೇಮ ಪಾಶದಲ್ಲಿ ತಾನು ಸಿಲುಕಿಕೊಳ್ಳುತ್ತಿದ್ದೇನೆ. ಈ ಸಂಗತಿಯ ಅರಿವು ಪೂರ್ತಿ ಆಗುವ ಮುಂಚೆಯೆ ಅವರ ಮನಸ್ಸು ಅವಳ ಸ್ವಾಧೀನವಾ ಗಿಯೆ ಬಿಟ್ಟಿತು. ಈ ಹುಡುಗಿಯಲ್ಲಿ ತಮ್ಮ ಪ್ರೇಮ ನಟ್ಟಿದೆ– ಎಂಬ ಸಂಗ ತಿಯನ್ನು ತಮ್ಮ ಮನಸ್ಸಿನಲ್ಲಿಯೆ ಪ್ರಾಂಜಳವಾಗಿಯೆ ಅವರು ಒಪ್ಪಿಕೊಂಡು ಬಿಟ್ಟರು.

ಏರ್ನಾ ಸಾರ್ಡಳ ಲಕ್ಷ್ಯಕ್ಕೆ ಈ ಸಂಗತಿ ಬರಲು ಏನೂ ವಿಲಂಬವಾಗ ಲಿಲ್ಲ ಕಣ್ಣಿನ ಚಿನ್ನಾಟವಾಡುವಲ್ಲಿ. ಮಾತಿನ ಚಾತುರ್ಯ ಗುರುತಿಸುವಲ್ಲಿ ತರುಣ ಹುಡುಗಿಯರು ತಜ್ಞರೇ ಇರುತ್ತಾರೆ, ಹಾಗೆ ಏರ್ನಾ ತಜ್ಞಳಿದ್ದಳು.

ಅವರ ಪ್ರೇಮಕ್ಕೆ ಅವಳು ಪ್ರತ್ಯುತ್ತರ ಕೊಡಲೇ ಇಲ್ಲ. ತಿರುಗಿ ಪ್ರಸಂಗ ಬಂದಾಗಲೆಲ್ಲ ಅವರಿಗೆ ಹೇಳುತ್ತಲೇ ಉಳಿದಳು. "ನಮ್ಮಿಬ್ಬರ ಪ್ರಕೃತಿಯೇ ಭಿನ್ನ. ನಮ್ಮಲ್ಲಿ ಒಮ್ಮತ ಎಂದೂ ಆಗಲಾರದು."

ಪ್ರಕಟವಾಗಿ ಅವಳು ಅವರೊಂದಿಗೆ ಈ ತರ ಮಾತಾಡುತ್ತಿದ್ದಳು ನಿಜ. ಆದರೆ ಈ ಕುರಿತು ತನ್ನ ಒಳ ಮನಸ್ಸನ್ನು ಪರೀಕ್ಷಿಸಿ ನೋಡುವ ಅವಕಾಶ ಅವಳಿಗೆ ವಿಶೇಷ ಒದಗಿದ್ದಿಲ್ಲ.

ಜ್ವರದಿಂದ ಆಕೆ ಕಾಯಿಲೆ ಬಿದ್ದಳು. ಮತ್ತು ರುಗ್ಣಶಯ್ಯೆಯಲ್ಲಿ ಬಿದ್ದಿರುವಾಗ ವಿಚಾರ ಮಾಡುವದರ ಹೊರತು ಬೇರೆ ಕೆಲಸ ಉಳಿಯಲಿಲ್ಲ. ಮನಸ್ಸಿನ ಒಂದು ಚೇಷ್ಟೆಯೆಂದು ಆಕೆ ಫ್ರಾಂಜ ಮ್ಯುಲರರ ಬಗೆಗೆ ವಿಚಾರ ಮಾಡಲು ತೊಡಗಿದಳು.

ಅವರಿಬ್ಬರ ವಯೋಮಾನದಲ್ಲಿ ಬಹಳ ಅಂತರವಿತ್ತು. ಆ ಪ್ರಶ್ನೆಯೇ ಅವಳ ಮನಸ್ಸಿನ ಇದಿರು ಮುಖ್ಯವಾಗಿ ಬರುತ್ತಿತ್ತು. ಅವರ ವಯಸ್ಸಿನ ವಿಷಯವಾಗಿ ತಾನೇಕೆ ಇಷ್ಟೊಂದು ವಿಚಾರ ಮಾಡಬೇಕು ?—ಎಂದು ಆಕೆ ತನ್ನ ಮನಸ್ಸನ್ನೇ ಗದರಿಸುತ್ತಿದ್ದಳು. ಆದರೆ ಹೀಗೆ ಗದರಿಸಿ ವಿಚಾರಿಸುವದಕ್ಕಿಂತ ಅವರ ಕುರಿತು ವಿಚಾರಗಳಿಗೇ ಅವಳ ಮನಸ್ಸಿನಲ್ಲಿ ಹೆಚ್ಚು ಅವಕಾಶ ಸಿಗುತ್ತಿತ್ತು. ಆಗ ಮಾತ್ರ ಅವಳ ಮನಸ್ಸು ಸ್ಥೈರವಾಗಿ ಸಂಚರಿಸುತ್ತಿತ್ತು.

ಆ ವಯಸ್ಸೇ ಅಂತಹದು. ಬೇಕಾದ್ದು ಮಾಡಿ ಬಾನಿಗೇ ಬುರಕಿ ಹಾಕಬೇಕು. ಬಾನಿಗೆ ಬುರಕಿ ಹಾಕಲು ಬೇಕಾದ್ದು ಮಾಡಬೇಕು– ಎಂದು ಉನ್ನತ ಊರ್ಮಿಗಳೇಳುವ ವಯಸ್ಸದು. ಸುಳ್ಳು ಅಡಿಮಾಡಿ ಸತ್ಯವನ್ನು ತಪ್ಪಿಸಿಕೊಳ್ಳುವದಕ್ಕಿಂತ ಸತ್ಯವನ್ನೆ ಸಂತೋಷದಿಂದ ಇದಿರಿಸಬೇಕು–ಎನ್ನುವ ನಿರಾತಂಕ ನಿರಂಕುಶ ವೃತ್ತಿಯ ಪ್ರಾಯವದು. ಏನೇ ಆಡಿತೋರಿಸದಿದ್ದರೂ ಅವಳಿಗೆ ತನ್ನ ಮನಸ್ಸು ಅರಿವಾಗಿತ್ತು. ಅವಳ ಅಂತಃಕರಣದಲ್ಲಿ ಹೊಚ್ಚ ಹೊಸತಾಗಿ ಪ್ರಪ್ರಥಮವಾಗಿ ಉಂಟಾದ ವಿಕಾರಗಳ ಪರಿಚಯ ಅವಳಿಗೆ ಆಗಿಬಿಟ್ಟಿತ್ತು. ಅರಿಯ ಬೇಕಾದ್ದನ್ನು ಅವಳು ಮನದಾಳದಲ್ಲಿಯೇ ಅರಿತು ಬಿಟ್ಟಿದ್ದಳು. ಸೂರ್ಯನ ಅಸ್ತಿತ್ವವನ್ನು ಕ್ಷಣಹೊತ್ತು ಹೇಳ ಬೇಕಾಗುತ್ತದೆಯೇ ?

ನಾಲ್ಕೇ ದಿನಗಳ ಆಚೆಗೆ ಅವಳು ಒಂದು ವೈದ್ಯಕೀಯ ಮಾಸಿಕದಲ್ಲಿ ('ಮೆಡಿಕಲ್ ಜರ್ನಲ್') ಒಂದು ಲೇಖನವನ್ನು ಓದಿದ್ದಳು. 'ಗಂಡು-ಹೆಣ್ಣುಗಳ ವಯಸ್ಸಿನ ಅಂತರವು ಎಷ್ಟು ಹೆಚ್ಚೋ ಅಷ್ಟೂ ಅವರ ವೈವಾಹಿಕ ಜೀವನ ಹೆಚ್ಚು ಸುಖದ್ದಾಗುತ್ತದೆ.'—ಎಂದು ಆ ಲೇಖದ ನಿಷ್ಕರ್ಷವಿತ್ತು. ಆ ಲೇಖ ಓದುವಾಗಲೆ ಅವಳ ಮೈಮೇಲೆ ರೋಮಾಂಚಗಳೆದ್ದವು. ಅವಳ ಮನಸ್ಸಿಗೆ ಸವಿಯಾದ ಕಚಕಳಿ ಅನಿಸಿತು. ಪ್ರಾಯದ ಪ್ರಶ್ನೆಯೊಂದನ್ನು ಬಿಟ್ಟರೆ ಫ್ರಾಂಜ ಮ್ಯುಲರರಲ್ಲಿ ಏನು ಕಡಿಮೆ ಇದೆ ? ಯಾತರ ಕೊರತೆ ಇದೆ ? ಅವರು ಕಾಣಲಿಕ್ಕೆ ಹುರುಪಿನವರು. ವಯೋಮಾನಕ್ಕಿಂತ ಎಷ್ಟೋ ತರುಣರಾಗಿ ತೋರುತ್ತಿದ್ದರು. ಕೇತಕೀ ಅಂಗಕಾಂತಿ, ಮತ್ತು ನೀಲಕಣ್ಣು ಇವು ಅವರ ಸೌಂದರ್ಯದ ವೈಶಿಷ್ಟ್ಯಗಳಾಗಿದ್ದವು. ಅವರು ಮಿತವಾದಿ ಮಾತನಾಡುತ್ತಿದ್ದರು. ಆದರೆ ಮಾತಿನಲ್ಲಿ ಏನೂ ಬಾಕಿ ಇಡುತ್ತಿದ್ದಿಲ್ಲ. ಅವರ ಮಾತು ಕೇಳುವವರಿಗೆ ಅನಿಸುತ್ತಿತ್ತು. ಆ ಗೃಹಸ್ಥರು ಇಷ್ಟು ಮಾತಾಡಿದ್ದೇ ಲೇಸು. ಇದಕ್ಕೂ ಹೆಚ್ಚು ಮಾತು ಏನು ಮಾಡಲಿಕ್ಕೆ ? ಅವರು ಮಾತಾಡುವಾಗ ಅವರ ಶಬ್ದಗಳೊಳಗಿಂದ ಹೆಚ್ಚಿನ ಅರ್ಥವು ವ್ಯಕ್ತವಾದಂತೆ ಅನಿಸುತ್ತಿತ್ತು ಅವರ ಬಾಯಿಂದ ಹೊರಬಿದ್ದ ಶಬ್ದಗಳಿಗೆ ಇನ್ನೂ ನಾಲಿಗೆ ಒಡೆದು ಅವೂ ಮಾತಾಡುತ್ತಿದ್ದವೋ ಎಂಬಂತೆ. ಅವರ ಚರ್ಯೆ ಯಾವಾಗಲೂ ವಿಚಾರಮಗ್ನವಾಗಿ ಕಾಣುತ್ತಿತ್ತು. ಆದರೆ ಅವರನ್ನು ನೋಡಿದಾಗ ಇವರು ದಿಗಂತದ ಆಚೆಯ ಯಾತರದೋ ಶೋಧದಲ್ಲಿ ಇರಬೇಕೆಂದು ಅನಿಸುತ್ತಿತ್ತು. ಯಾವದೊಂದು ಸಂಗತಿಯಲ್ಲಿ ಸ್ಥಿರವಾದ ಅವರ ನೀಲ ನೇತ್ರಗಳು ಏರ್ನಾಳಿಗೆ ವಿಶೇಷವಾಗಿ ಮೆಚ್ಚಿಗೆ ಆಗುತ್ತಿದ್ದವು. ಅವರ ದೃಷ್ಟಿಯತ್ತ ದೃಷ್ಟಿ ಇಟ್ಟು ಕೂತಿರಬೇಕೆಂದು ಅವಳಿಗೆ ಅನಿಸುತ್ತಿತ್ತು. ಮೈ ಕೈಗಳಿಂದ ಅವರು ದೊಡ್ಡಗಾತ್ರದವರಿದ್ದರು. ಆದರೆ ಅವಳೂ ಏನೂ ಕಡಿಮೆ ಇದ್ದಿಲ್ಲ.

ಇಂಥ ಹುರುಪಿನ ಸುಂದರಾಂಗ ಪುರುಷನು ಏರ್ನಾಳಿಗೆ ಸೇರದಿದ್ದರೇ ಸೋಜಿಗವಿತ್ತು ! ಹೆಣ್ಣಿಗೆ ಒಬ್ಬ ಗಂಡು ಮೆಚ್ಚಿಗೆ ಆಗಬೇಕು. ಮತ್ತು ಆತ ಮೆಚ್ಚಿಗೆ ಆಗಿಲ್ಲವೆಂದು ಆಕೆ ಸೋಗು ಮಾಡಬೇಕು,—ಇದೆಲ್ಲಿಯ ಪ್ರಣಯದ ರೀತಿ ? ಏರ್ನಾ ಆರಂಭದಲ್ಲಿ ಹಾಗೆ ಸೋಗು ಮಾಡಿದಳು. ನಿಜ. ಆದರೆ

ಈಗ ಆ ಸೋಗು ಮುಗಿದಿತ್ತೆಂಬುದೂ ನಿಜ ! ಇಪ್ಪತ್ತರ ಹೊಸ್ತಿಲಲ್ಲಿ ಕಾಲಿಟ್ಟ ಆ ಹುಡುಗಿಯ ಮನಸ್ಸು ಆ ಪ್ರೌಢ ಪುರುಷನಲ್ಲಿ ತೊಡಗಿತ್ತು ಇದನ್ನು ಆಕೆಯೂ ಅಲ್ಲಗಳೆಯುವಂತೆ ಇದ್ದಿಲ್ಲ. ಸೋಗು ಮಾಡದಿದ್ದ ಪ್ರೀತಿ ಎಲ್ಲಿದೆ?

ಆ ಕಾಯಿಲೆಯಲ್ಲಿಯೇ ಬಿದ್ದಲ್ಲಿಯೆ ಇವೆಲ್ಲ ಸಂಗತಿಗಳನ್ನು ಅವಳು ಪರ್ಯಾಲೋಚಿಸುತ್ತಿದ್ದಳು. ಫ್ರ್ಯಾಂಜ ಮ್ಯುಲರ ಬರುವ ಮುಂಚೆ ಅವಳದು ಇದೇ ವಿಚಾರ ನಡೆದಿತ್ತು. ಕಣ್ಣು ಮುಚ್ಚಿಕೊಂಡು ಆಕೆ ಹಾಸಿಗೆಯಲ್ಲಿ ಬಿದ್ದಿದ್ದಳು. ಆದರೆ ಅವಳಿಗೆ ನಿದ್ದೆ ಬಂದಿದ್ದಿಲ್ಲ. ಅವಳು ಇದೊಂದೇ ಸಂಗತಿಯ ಕುರಿತು ವಿಚಾರ ಮಾಡುತ್ತಿದ್ದಳು. ಚಿಕ್ಕ ಮಗು ಒಂದು ಹೊಸ ಆಟಿಗೆಯ ಕಡೆಗೆ ನೋಡುವಂತೆ ಆಕೆ ತನ್ನ ಮನಸ್ಸನ್ನು ಪರಿಶೀಲಿಸುತ್ತಿದ್ದಳು.

ಅವಳ ತಂದೆ ತಾಯಿ ಮನೆಗೆ ಲಗು ಬರುವವರಿದ್ದಿಲ್ಲ. ಒಂದು ಚರ್ಚಿನಲ್ಲಿ ಯಾರೋ ವಿದೇಶೀ ಅಭ್ಯಾಗತರು ಬರುವವರಿದ್ದರು. ಅವರಿಗೆ ಚರ್ಚಿನ ಎಲ್ಲ ಮಾಹಿತಿ ಕೊಡತಕ್ಕದ್ದಿತ್ತು. ಅದಕ್ಕಾಗಿ ಅವಳ ತಾಯಿ ತಂದೆ ಅಲ್ಲಿ ತಡೆಯಬೇಕಿತ್ತು. ಮನೆಗೆ ಬರಲು ಅವರಿಗೆ ವಿಲಂಬವಾಗಲಿತ್ತು. ಆದ್ದರಿಂದ ಫ್ರ್ಯಾಂಜ ಮ್ಯುಲರ ಅವಳಿಗೆ ಕೇಳಿದರು. "ಮದ್ದು ತರುವದಿದೆಯೇ ?"

ಇದಕ್ಕೆ ಅವಳು ನಕ್ಕಳು. ಮತ್ತು ಕಿಟಕಿಯ ಹೊರಗೆ ನೋಡುತ್ತ ಅಂದಳು. "ಈಗ ಮದ್ದು ಯಾರಿಗೆ ಬೇಕು ? ನೀವು ಬಂದಿರಿ, ನಾನೀಗ ಗುಣವಾಗುತ್ತೇನೆ."

ಹೀಗೆಂದು ಆಕೆ ಕಿಟಕಿಯ ಹೊರಗೆ ನೋಡುತ್ತಲೆ ಉಳಿದಳು.

ಅವಳ ಮಾತಿನ ಮನೋಗತ ಫ್ರ್ಯಾಂಜ ಮ್ಯುಲರರಿಗೆ ಚಟ್ಟನೆ ಹೊಳೆಯಲಿಲ್ಲ. ಆದರೆ ಆ ಅಭಿಪ್ರಾಯ ಅರ್ಥವಾದೊಡನೆ ಅವರು ತುಸು ಗೊಂದಲದಲ್ಲಿ ಬಿದ್ದರು. ಮತ್ತು ಆ ಅಭಿಪ್ರಾಯವನ್ನು ಪರಾಮರ್ಶಿಸಿ ನೋಡಲಿಕ್ಕೆ ಅವರ ಶೋಧಕ ದೃಷ್ಟಿಯು ಅವಳಲ್ಲಿಯೇ ನಟ್ಟು ಉಳಿಯಿತು. ಅದೇ ಹೊತ್ತಿಗೆ ಅವಳು ಕತ್ತು ಹೊರಳಿಸಿದಳು. ನೀಲ ನೇತ್ರಗಳ ನೋಟಗಳು ಒಂದನ್ನೊಂದು ಸಿಲುಕಿಸಿಕೊಂಡವು—ಆದರೆ ಒಂದೇ ಕ್ಷಣ. ಅವಳ ಕೆನ್ನೆಗಳ

ಮೇಲೆ ಕೆಂಪು ಹಬ್ಬಿತು. ಮತ್ತು ಅವಳು ಲಜ್ಜೆಯಿಂದ ಗೋಣು ಕೊಂಕಿಸಿದ್ದು ತಿರುಗಿ ಕಿಟಕಿಯ ಹೊರಗೆ ನೋಡುತ್ತಲೇ ! 'ನಾವೊಲ್ಲೆ, ಹೋಗಿ'– ಎಂದು ಅವಳು ಅನ್ನುವಂತಿತ್ತು.

ಇನ್ನೂ ಅವಳು ಕಿಟಕಿಯ ಹೊರಗೇ ನೋಡುತ್ತಿದ್ದಳು. ತಿಳಿನೀಲಿಯಾದ ಅವಳ ದುಂಡುಗಣ್ಣುಗಳ ಮೇಲೆ ಹೊರಗಿನ ಮಂದ ಬೆಳಕು ಬಿದ್ದಿತ್ತು. ಅವಳ ಕಣ್ಣಲ್ಲಿಯ ಹೊಳಪು ಸ್ಪಷ್ಟ ಮಿಂಚುತ್ತಿತ್ತು, ಅವಳ ತುಸು ಹೊಂಬಣ್ಣದ ಕುರುಳುಗೂದಲು ಗಾಳಿಗೆ ಬುರು ಬುರು ಹಾರಾಡುತ್ತಿದ್ದವು. ಮತ್ತು ಅವಳ ಬೆಳ್ಳಗಿನ ವಿಶಾಲ ಹಣೆಯನ್ನು ಅವು ಮುಚ್ಚುತ್ತಿದ್ದವು. ಆ ದೃಶ್ಯವೇ ಮೋಹ ಹಚ್ಚುವಂತಿತ್ತು. ಆತ್ಮೀಯತೆಯ ಅರಿವು ಅನ್ಯೋನ್ಯರಲ್ಲಿ ಅಂಕುರಿಸಿತ್ತು. ಪ್ರೇಮದ ಹಕ್ಕನ್ನು ಸ್ಥಾಪಿಸುವ ಕ್ಷಣವು ಹತ್ತಿರ ಬರುತ್ತಿತ್ತು. ಫ್ರಾಂಜ ಮ್ಯುಲರ ಅವಳ ಮಂಚಕ್ಕೆ ಇನ್ನೂ ಹತ್ತಿರ ಸರಿದರು. ಕೂಡಲೆ ಅವಳು ಅವರತ್ತ ನೋಡಿದಳು; ಮತ್ತು ಪರಸ್ಪರರೂ ಅರಿತುಕೊಂಡ, ಆದರೆ ಈ ವರೆಗೆ ಅಂತರಂಗದಲ್ಲಿ ಬಚ್ಚಿಟ್ಟುಕೊಂಡ ಗೌಪ್ಯವನ್ನು ಪ್ರಕಟ ಮಾಡುವಂತೆ ಆಕೆ ಅಂದಳು. "ಫ್ರಾಂಜ, ನಿಮಗೆ ನಿಜ ಹೇಳಲೋ? ನೀವು ನನ್ನನ್ನು ಪೂರಾ ಗೆದ್ದಿದ್ದೀರಿ!"

ಫ್ರಾಂಜ ಮ್ಯುಲರರಿಗಾದರೂ ಇದಕ್ಕಿಂತ ಇನ್ನೇನು ಬೇಕಿತ್ತು?

ಅವಳ ಈ ಮಾತಿಗೆ ಅವರು ಇನ್ನೇನೂ ಮರು ಮಾತಾಡಲಿಲ್ಲ. ಅವರು ಕೆಳಗೆ ವಾಲಿದರು ಮತ್ತು ತನ್ನ ತುಟಿಗಳನ್ನು ಅವಳ ತುಟಿಗಳ ಮೇಲೆ ಇಟ್ಟರು. ಮೊದಲು ಒಮ್ಮೆ. ಆಮೇಲೆ ಅವಳ ಉಸಿರುಗಟ್ಟುವ ತನಕವೂ! ಅವಳು ತನ್ನ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು.– ತನಗೆ ಬೇಕಾದದ್ದು ಅಡಿಯಲ್ಲಿ ಬಿದ್ದ ಆನಂದದಲ್ಲಿ– ಖುಶಿಯಲ್ಲಿ!

ಮತ್ತೆ ಅವರು ಹಾಗೇನೂ ಮಾಡಲಿಕ್ಕಿಲ್ಲವೆಂದು ಮನವರಿಕೆ ಆದ ಮೇಲೆ ಆಕೆ ತನ್ನ ನೀಲ ಕಣ್ಣಾಲಿಗಳನ್ನು ಪಿಳಿ ಪಿಳಿ ಹೊರಳಿಸುತ್ತ ಕೇಳಿದಳು. "ಇದೇನು"

ಫ್ರಾಂಜ ಮ್ಯುಲರ ನಗುತ್ತ ಹೇಳಿದನು "ನೀನೂ ನನ್ನನ್ನು ಗೆದ್ದಿರುವಿ –ಎಂಬುದಕ್ಕೆ ಇದು ಉತ್ತರ!"

*   *   *

ಅವರ ಮದುವೆಯನಂತರ ಫ್ರಾಂಜ ಮ್ಯುಲರರು ಏರ್ನಾಳನ್ನು ಮೊದಲ ಸಲ ಏಕಾಂತದಲ್ಲಿ ಹತ್ತಿರ ಸೆಳೆದುಕೊಂಡಾಗ ಅಂದರು. "ನಮ್ಮ ಮದುವೆ ಏಕೆ ಆಯಿತು, ಗೊತ್ತೇ ?"

ಏರ್ನಾ ಅವರ ಕಡೆಗೆ ಪ್ರಶ್ನಾರ್ಥಕ ಕಟಾಕ್ಷ ಬೀರಿದಳು. ಆಗ ಅವಳ ಗದ್ದವನ್ನು ಎತ್ತಿ ಫ್ರಾಂಜ ಮುಂದರಿದು ಅಂದರು. "ನಮ್ಮ ಡಿಕ್ಕಿಯಾದದ್ದು ನಿನಗೆ ನೆನಪಿದೆಯಷ್ಟೇ ? ಆ ಡಿಕ್ಕಿಯಿಂದ ನಾವು ಕೂಡಿದೆವು. ನಮ್ಮ...."

ಅವನ ಬಗಲಲ್ಲಿ ಹೊಕ್ಕುತ್ತ ಏರ್ನಾ ಅಂದಳು. "ಆದರೆ ವಿಚಾರಗಳ ಡಿಕ್ಕಿ ಹೊಡೆದು ನಾವು ಒಬ್ಬರಿಂದೊಬ್ಬರು ದೂರವಾಗಲಾರೆವಷ್ಟೇ?"

ಅವಳನ್ನು ಇನ್ನೂ ಬಿಗಿದಪ್ಪಿ ಫ್ರಾಂಜ ಮ್ಯುಲರ ಅಂದರು. "ನಾ, ಬಿಡ್ತೇನು ನಿನಗೆ ದೂರ ಹೋಗಲಿಕ್ಕೆ ? ಆ ದಿನ ಕ್ಲಾಸಿನ ಹೊರಗೆ ಡಿಕ್ಕಿ ಹೊಡೆದಾಗ ಆ ವಿದ್ಯಾರ್ಥಿಗಳು ಕೂಗಿದ್ದರು– ಸರ್ವಧರ್ಮಗಳ ಮಿಲನವಾಯಿತೆಂದು! ಅಂದಾಗ ಈಗ ದೂರ ಹೋಗುವ ಮಾತೇಕೆ?....ನಿನಗೆ ನೆನಪಾಯಿತೇನೇ? ವಿದ್ಯಾರ್ಥಿಗಳು ಏನೆಂದಿದ್ದರೆಂಬುದು?

ಅವಳು ಅಹುದೆಂದು ತಲೆದೂಗಿದಳು.

ಅವರು ಮುಂದೆ ಕೇಳಿದರು, "ಇನ್ನೇನು ನೆನಪಾಗುತ್ತದೆ?"

"ಓ ಬಹಳ ಬಹಳ ಮಾತು ನೆನಪಾಗುತ್ತವೆ."

"ನೀನು ಕಾಯಿಲೆ ಬಿದ್ದಾಗಿನ ಆ ಪ್ರಸಂಗ?"

ಇಲ್ಲವೆಂದು ತಲೆ ಅಲ್ಲಾಡಿಸಿ ಅವಳು ತುಂಟತನದಿಂದ ನಕ್ಕಳು. ಆಗ ಫ್ರಾಂಜ ಮ್ಯುಲರ ಅವಳ ಗಲ್ಲಗಳ ಮೇಲೆ ಮತ್ತೆ ಮತ್ತೆ ತನ್ನ ತುಟಿಗಳನ್ನು ಇಟ್ಟರು. ಆಗ ತಾಳಲಾರದೆ ಅವಳು ಅಂದಳು, "ಹಾಂ ಹಾಂ ಈಗ ಎಲ್ಲ ಎಲ್ಲವು ನೆನಪಾಯಿತು".

"ಇನ್ನೇನು ನೆನಪಾಗುತ್ತದೆ?"

ಈ ಪ್ರಶ್ನೆಗೆ ಅವಳು ಅವರತ್ತ ಪ್ರಶ್ನಾರ್ಥಕ ಮುದ್ರೆಯಿಂದ ನೋಡುತ್ತಲೆ ಉಳಿದಳು. ಆಗ ಅವರು ಅಂದರು. "ಇನ್ನೂ ಒಂದು ಪ್ರಸಂಗ ನಿನಗೆ ನೆನಪಾಗಲಿಕ್ಕೆ ಬೇಕು".

"ಯಾವದು"?

"ನೀನು ಬೇನೆಯಿಂದ ಗುಣವಾಗಿ ಎದ್ದಿ. ನಮ್ಮ ಮದುವೆಗೆ ಎಲ್ಲರ ಒಪ್ಪಿಗೆಯು ಆಯಿತು. ನಿನಗೆ ಅನಿಸಿತು–ನಿನ್ನ ತಾಯಿ ಒಪ್ಪಿಗೆ ಕೊಡುವಳೊ ಇಲ್ಲವೊ ಎಂದು. ನಿನ್ನ ತಾಯಿ ಏನೆಂದಳು ನೆನಪುಂಟೇ ?"

ಏರ್ನಾ ಸುಮ್ಮನೆ ಕುಳಿತಳು. ಆಗ ಫ್ರಾಂಜ ಮ್ಯುಲರ ಅಂದ, "ಆಗಲಿಕ್ಕೇ ಇಲ್ಲ ನೆನಪು! ನಿನ್ನ ಸ್ವಭಾವ ಜಗಳಗಂಟಿನದೆಂದು ನಿನ್ನ ತಾಯಿಗೆ ಏನು ಚಿಂತೆ ಅನಿಸಿತ್ತು!"

"ಆದರೆ ನೀವು ಆ ಚಿಂತೆ ದೂರ ಮಾಡಿದಿರಿ–ಎಂತಲ್ಲವೇ?"

ಇದಕ್ಕೆ ಫ್ರಾಂಜ ಅಂದರು. "ಆಗ ನಾವು ವಿಚಾರವಿನಿಮಯ ಮಾಡುವ ನಿಮಿತ್ತದಿಂದ ಹೊರಗೆ ಹೋದೆವು. ನಿನಗೆ ನೆನಪಿರಲಿಕ್ಕಿಲ್ಲ. ಆದರೆ ನನಗೆ ಪೂರ್ತಿ ನೆನಪಿದೆ. ಅಂದು ಹುಣ್ಣಿಮೆಯ ರಾತ್ರಿ. ಎಲ್ಲ ಮನೆ ಮಠ ಬೆಳದಿಂಗಳಲ್ಲಿ ಮಿಂದು ಮಿಂಚುತ್ತಿದ್ದವು. ನಾವು ಮನೆಯಿಂದ ಹೊರಗೆ ಬಿದ್ದಾಗ ಕೇರಿಯೊಳಗಿನ ಮನೆಗಳ ನೆರಳುಗಳು ಪಡುವಣಕ್ಕೆ ಚಾಚಿದ್ದವು. ನಾವು ಮರಳಿ ಬರುವಾಗ ಅವು ಪೂರ್ವಕ್ಕೆ ಒಲಿದಿದ್ದವು."

"ಒಳ್ಳೆ ನೆನಪುಂಟು ನಿಮಗೆ!"

ಫ್ರಾಂಜ ಮ್ಯುಲರರಿಗೆ ಆ ಬೆಳದಿಂಗಳ ರಾತ್ರಿ ನಿಜವಾಗಿಯೂ ಕೊರೆದಿಟ್ಟಂತೆ ನೆನಪಿತ್ತು. ಸಾಮಾನ್ಯವಾಗಿ ಮಿತವಾಗಿಯೇ ಎಣಿಸಿ ಮಾತಾಡುವವರು ಫ್ರಾಂಜ ಮ್ಯುಲರ ಆದರೆ ಆ ರಾತ್ರಿ ಅವರ ಮಾತಿಗೆ ಅಡೆತಡೆ ಇದ್ದಿಲ್ಲ. ಮನೆಯ ಹೊರಗೆ ಬಿದ್ದು ಅವರಿಬ್ಬರೂ ನದಿಯ ದಾರಿ ಹಿಡಿದರು. ಆಗ ಅಭಾವಿತವಾಗಿಯೇ ಅವರ ಕೈಗಳು ಒಂದನ್ನೊಂದು ಸಿಕ್ಕಿಕೊಂಡಿದ್ದವು. ನಡೆಯುವಾಗ ಹೆಗಲಿಗೆಹೆಗಲು ತಾಗುತ್ತಿತ್ತು. ಕಣ್ಣಿಗೆ ಕಣ್ಣು ಕೂಡತ್ತಿತ್ತು.

ಇಬ್ಬರ ಮೋರೆಯಲ್ಲಿಯೂ ಆತುರ ತುಳುಕಾಡುತ್ತಿತ್ತು. ಇಬ್ಬರಿಗೂ ಪರಸ್ಪರರಿಂದ ಏನೋ ಬೇಕಾಗಿತ್ತು. ಅದನ್ನು ಪಡೆಯಲಿಕ್ಕೆ ಇಬ್ಬರೂ ಆತುರರಾದಂತಿತ್ತು.

ಪೂಲಿನ ದುರುಸ್ತಿ ಏನೋ ನಡೆದಿತ್ತು. ಕಲ್ಲಚಾಕುಗಳು ಹರಡಿ ಬಿದ್ದಿದ್ದವು ಪೂಲಿನ ಬಳಿಗೆ ಹೋಗುವಾಗ ಒಂದು ಕಲ್ಲಿಗೆ ಜಪ್ಪಿ ಅವಳು ಬೀಳಲಿದ್ದಳು. ಅಷ್ಟರಲ್ಲಿ ಫ್ರಾಂಜ ಮ್ಯುಲರ ಅವಳನ್ನು ಮೇಲೆಯೇ ಎತ್ತಿಕೊಂಡು ಎದೆಗೆ ಒತ್ತಿಹಿಡಿದು ಕೊಂಡರು. ಆಗ ಅವಳು ಅರಿವಿಲ್ಲದೆ ಉದ್ಗರಿಸಿದಳು–"ಓsss!"

ಒಮ್ಮೊಮ್ಮೆ ಸುಖದ ಪರಮಾವಧಿಯು ಅಸಹ್ಯವಾದಾಗ ತೆಗೆಯುವ ಉದ್ಗಾರವಾಗಿತ್ತು ಅದು.

ಪೂಲಿನ ನಡುಭಾಗದಲ್ಲಿ ಅವರು ಒಬ್ಬರಿಗೊಬ್ಬರು ಒಟ್ಟಾಗಿ ಪೂರ್ವಕ್ಕೆ ಮೋರೆ ಮಾಡಿಕೊಂಡು ನಿಂತಾಗ ಅವರಿಗೆ ಒಂದು ಕ್ಷಣ ಅನಿಸಿತು–ಸ್ವರ್ಗವೆಂದರೆ ಇದೇ ಇರಬೇಕು! ಇಡಿಯ ಆಕಾಶಕ್ಕೆ ಬೆಳ್ಳಿಯ ಲೇಪ ಬಳಿದಿತ್ತು. ಹುಣ್ಣಿಮೆಯ ಚಂದ್ರನಿಂದ ಬೆಳ್ಳಿಯ ಕಾಂತಿ ಸ್ರವಿಸುತ್ತಿತ್ತು. ಗುಡ್ಡದಿನ್ನೆಗಳ ಮೇಲೆ ಕಿಕ್ಕಿರಿದು ನಿಂತ ಫರ್ ವೃಕ್ಷಗಳ ಬಣ್ಣವೂ ಬೆಳ್ಳಿಯದಾಗಿತ್ತು. ದಿಬ್ಬಗಳ ಮೇಲೆ ಮತ್ತು ಬುಡಕ್ಕೆ ಇದ್ದ ಬಂಗಲೆಗಳಿಂದ ಬೆಳಕು ಹೊರಸೂಸುತ್ತಿತ್ತು. ಅದೂ ಬೆಳದಿಂಗಳೊಂದಿಗೆ ವರ್ಣಸಂಗತಿಯನ್ನು ಸಾಧಿಸುತ್ತಿತ್ತು. ನೆಕರ ನದಿಯ ಹರಿಯುವ ಜಲಾಶಯದಲ್ಲಿ ಚಂದ್ರನ ಪ್ರತಿನೆಳಲು ಬಿದ್ದಿತ್ತು. ಅದೂ ತೇಲಿಹೋಗುತ್ತಿರುವಂತೆ ಭಾಸವಾಗುತ್ತಿತ್ತು. ನದಿಯ ಇಕ್ಕಲಗಳ ರಸ್ತೆಗಳಲ್ಲಿ ಸಾಗಿದ ವಾಹನಗಳ ಗತಿಯೂ ಮಂದವಾಗಿತ್ತು.

ರಂಗ ಭೂಮಿಯ ಮೇಲೆ ಆಕರ್ಷಕ ದೃಶ್ಯವೊಂದನ್ನು ರಚಿಸಿ ಇಟ್ಟಂತೆ ಆ ನೋಟವಿತ್ತು. ಪೂಲಿನ ಮೇಲೆ ಜನರ ಬರಹೋಗುವಿಕೆ ವಿಶೇಷವಿದ್ದಿಲ್ಲ. ಇದ್ದ ಸಂಚಾರ ಇದೇ ಪ್ರಕಾರದ್ದಿತ್ತು. ಪ್ರಣಯಿ ಯಾತ್ರಿಗಳು ಕೈಯಲ್ಲಿ ಕೈಯಿಟ್ಟು, ಹೆಗಲಿಗೆ ಹೆಗಲಿಟ್ಟು ಸಾಗಿದ್ದವು. ಆ ಪ್ರಪಂಚ ಅವರಿಬ್ಬರದೇ. ಸುತ್ತಲಿನ ಪ್ರಪಂಚದತ್ತ ಅವರ ಲಕ್ಷ್ಯವಿದ್ದಿಲ್ಲ. ಸ್ವರ್ಗದ

ಬೆಳದಿಂಗಳ ಹೂವಿನ ಹಾಸಿನ ಮೇಲೆ ಈ ಪ್ರೇಮಿಗಳ ಜಗತ್ತು ಮೆಲ್ಲಗೆ ಹೆಜ್ಜೆ ಇಡುತ್ತ ಮುಂದೆ ಸರಿಯುತ್ತಿತ್ತು. ಸುಖದ ಅರಿವಿನ ಹೊರತು ಅವರಿಗೆ ಬೇರೆ ಯಾವ ಅರಿವೂ ಉಳಿದಿದ್ದಿಲ್ಲ.

ನದಿಯ ನೀರಿನಲ್ಲಿ ಬಿದ್ದು ಹೊಯ್ದಾಡುತ್ತಿರುವ ಚಂದ್ರ ಬಿಂಬದತ್ತ ಬೆರಳನ್ನು ತೋರಿಸುತ್ತ ಫ್ರಾಂಜ ಮ್ಯುಲರ ಅಂದರು. "ಏನ್ಸಾ, ಅದೆಷ್ಟು ಚಂದ ಕಾಣುತ್ತದೆ!"

ಏನ್ಸಾ ಅವರ ಕಡೆಗೆ ಮೋರೆ ತಿರುವಿ ಕೇಳಿದಳು. 'ಏನು'?

ಚಟ್ಟನೆ ಅವಳ ತುಟಿಗಳನ್ನು ಚುಂಬಿಸಿ ಅವರೆಂದರು. 'ಇದೇ, ನಿನ್ನ ಮೊಗ– ನಿನ್ನ ಈ ತುಟಿಗಳು–ಕೆಂಪು ಕೆಂಪು !

ಅವಳು ಮೋರೆ ತಿರುವಿಸಿ ಗಾಬರಿಯಾದಂತೆ ಅಂದಳು. ರೀ, ಇದೇನು ಮಾಡುವಿರಿ! ನಾವೊಲ್ಲೆ! ಇಲ್ಲಿ ಹೀಗೆ ಮಾಡುವದೇ? ಯಾರಾದರೂ ಕಂಡರೆ!"

"ಇಲ್ಲಿ ಯಾರು ನೋಡುವರು? ಮತ್ತೆ ನಾವಿಲ್ಲಿ ಮಾತಾಡಲು ಬಂದಿದ್ದೇವಲ್ಲ?"

ಆ ಮೇಲೆ ಫ್ರಾಂಜ ಅವಳನ್ನು ಹತ್ತಿರಕ್ಕೆ ಎಳೆದುಕೊಂಡು ಅಂದರು, ಹೌದು, ಹೌದು, ನಾವು ಇದನ್ನೆ ಮಾತಾಡಬೇಕಾಗಿದೆ. ಇದೇ ವಿಷಯದ ಕುರಿತು ಚರ್ಚಿಸಬೇಕಾಗಿದೆ– ನಮ್ಮ ಮದುವೆ। ಮತ್ತು ಮಾತಾಡುವದಿದ್ದರೆ ಅದು ಶಬ್ದಗಳಲ್ಲಿಯೆ ಮಾತಾಡಬೇಕೆಂದು ಯಾರು ಅಂದರು?"

ಹೀಗೆಂದು ಅವರು ಅವಳನ್ನು ಭರಭರನೆ ಚುಂಬಿಸ ಹತ್ತಿದರು– ಕೃತಕ ಕೋಪದಿಂದ ಅವಳು ದೂರ ಸರಿಯುತನಕವೂ!

ಜಗಳಗಂಟಿ ಹುಡುಗಿಯನ್ನೇ ಅವರು ಆರಿಸಿಕೊಂಡಿದ್ದರು; ವರಿಸಿದ್ದರು

ಇದೆಲ್ಲ ಪ್ರಸಂಗವನ್ನು ಹೇಳಿ ಮುಗಿದ ಮೇಲೆ ಫ್ರಾಂಜ ಮ್ಯುಲರ ಅವಳಿಗೆ ಕೇಳಿದರು" ಈ ಪ್ರಸಂಗ ನಿನಗೆ ನೆನಪಾಯಿತೇ? ಆ ಹೂಲು, ಆ ಬೆಳಬಂಗಳು ಮತ್ತು ಮತ್ತು ಆ–ಆ"

"ಹಾಂ ಹಾಂ ಈಗ ಸಾಕು" ಎಂದು ಆಕೆ ಅನ್ನುತ್ತಿರುವಾಗಲೆ ಅವರು ತನಗೆ ಬೇಕಾದುದನ್ನು ಮಾಡಿಯೇ ಬಿಟ್ಟರು. ಅವಳೂ ಅದು ತನಗೆ ಬೇಕಿದ್ದರೂ ಅವರಿಂದ ದೂರ ಸರಿದಂತೆ ಮಾಡಿದಳು.

ಫ್ರಾಂಜ ಮ್ಯುಲರರ ಆಲಿಂಗನದೊಳಗಿಂದ ದೂರ ಸರಿಯುವದು ಆಗ ಅವಳಿಗೆ ಶಕ್ಯವಿದ್ದಿಲ್ಲ.

* * *

ಹೈಡೆಲಬರ್ಗ ವಿದ್ಯಾಪೀಠದಿಂದ ನಿವೃತ್ತರಾದ ಮೇಲೆ ಮಾನಫ್ರೆಡ್ ಮ್ಯುಲರರಿಗೆ ಒಂದೇ ಉದ್ಯೋಗ ಉಳಿದಿತ್ತು. ಭೆಟ್ಟಿ ಆದವರಿಗೆಲ್ಲ ಭಾರತೀಯ ಸಂಸ್ಕೃತಿಯ ಮಹಿಮೆಯನ್ನು ಮನಗಾಣಿಸಿ ಕೊಡುವದು. ಇದೊಂದು ಹುಚ್ಚೇ ಅವರಿಗೆ ಹಿಡಿದಂತಿತ್ತು. ವಿದ್ಯಾಪೀಠದಲ್ಲಿ ತಮ್ಮ ಕೆಲಸ ಮುಗಿಸಿ ಫ್ರಾಂಜ ಮ್ಯುಲರ ಸಂಜೆಗೆ ಮನೆಗೆ ಬಂದೊಡನೆ ತಂದೆ-ಮಕ್ಕಳ ತತ್ವಚರ್ಚೆ ಆರಂಭವಾಯಿತೆಂದರೆ ಅದು ಮಧ್ಯರಾತ್ರಿ ದಾಟಿದರೂ ಮುಗಿಯುತ್ತಿದ್ದಿಲ್ಲ. ದಾರಿ ಕಾದು ಕಾದು ಏರ್ನಾ ತೀರ ಬೇಸರಿಸಿ ಹೋಗುತ್ತಿದ್ದಳು. ಗೀತಾಪಾಠಮಾಡಿ ಗೀತೆಯ ಗುಣ ಕೀರ್ತನೆ ಮಾಡುವಾಗ ಆ ತಂದೆ-ಮಕ್ಕಳಿಗೆ ಮಾತ್ರ ಎಂದೂ ಬೇಸರವೆಂಬುದೇ ಬರುತ್ತಿದ್ದಿಲ್ಲ. ಅವರ ಆ ಗಿಳಿಪಾಠ ಅವಳಿಗೆ ತೀರ ಬೇಡವೆನಿಸುವದು. ಅವರ ಆ ಆಧ್ಯಾತ್ಮಿಕ ಚರ್ಚೆ ಮುಗಿಯುವ ಲಕ್ಷಣ ಕಾಣದಿದ್ದಾಗ ಅವಳು ತನ್ನ ಹಾಸಿಗೆಯಲ್ಲಿ, ಕೆಲ ಸಲ ಕೂತಲ್ಲಿಯೆ ನೆಲದ ಮೇಲೆ ನಿದ್ದೆ ಹೋಗುವಳು. ಫ್ರಾಂಜ ಮ್ಯುಲರ ಅವಳನ್ನು ಅಲ್ಲಾಡಿಸಿ ಎಬ್ಬಿಸಿದಾಗ ಮಧ್ಯರಾತ್ರಿ ಆಗಿರುತ್ತಿತ್ತು, ಇಂಥ ಸಮಯ ತುಂಬ ಬೇಸರಪಟ್ಟು ಅವಳು ಅನ್ನುತ್ತಿದ್ದಳು. "ಮುಗಿಯಿತೇ ನಿಮ್ಮ ಚರ್ಚೆ ? ಇಂಥ ಚರ್ಚೆಯಿಂದ ನಿಮಗೆ ಸ್ವರ್ಗವೇ ಸಿಗಬಹುದು. ಆದರೆ ನನ್ನ ಪಾಲಿಗೆ ಮಾತ್ರ ಈ ನರಕ ಒಂದೇ ಉಳಿದಿದೆ."

ಫ್ರಾಂಜ ಮ್ಯುಲರ ಅವಳಿಗೆ ತಿಳಿ ಹೇಳುತ್ತಿದ್ದರು, "ಅಲ್ವೇ ಹಾಗೆ ಮಾತಾಡಬಾರದು. ಯಾವಾಗಲೂ ಇನ್ನೊಬ್ಬರನ್ನು ತಿಳಿಹೇಳಿ ಮನವೊಲಿಸಿ ಕೊಳ್ಳಲು ಯತ್ನಿಸಬೇಕು."

"ಈ ತತ್ವ ನಿಮಗೆ ಅನ್ವಯಿಸುವದಿಲ್ಲವೆಂದು ಕಾಣುತ್ತದೆ ?"

ಅವಳ ಆ ಮಾತಿಗೆ ಫ್ರಾಂಜ ನಿರುತ್ತರ. ಒಮ್ಮೆಯಂತೂ ಏರ್ನಾ ಅವರಿಗೆ ಉದ್ವೇಗದಿಂದ ಅಂದಳು. "ನೀವು ಲಗ್ನವಾದರೂ ಏಕಾದಿರೋ ಯಾರಿಗೆ ಗೊತ್ತು ?"

ಇದಕ್ಕೆ ಫ್ರಾಂಜ ಮ್ಯುಲರ ತಮಾಷೆಯಲ್ಲಿ ಅಂದರು. "ವಂಶವೃದ್ಧಿ ಗಾಗಿ ! ಪುತ್ರ ಪ್ರಾಪ್ತಿಯ ಹೊರತು ಸ್ವರ್ಗದಲ್ಲಿ ಸ್ಥಾನ ಸಿಗುವದಿಲ್ಲ–ಹಿಂದೂ ಧರ್ಮಶಾಸ್ತ್ರದಲ್ಲಿ ಹೇಳಲಾಗಿದೆ;"

ಏರ್ನಾ ಕೆರಳಿ ಅಂದಳು. "ಇದಕ್ಕಿಂತ ವಂಶ ಕಡಿದು ಹೋದರೂ ಅಡ್ಡಿ ಇಲ್ಲ. ಮತ್ತೆ ಮನೆಯಲ್ಲಿ ಇದೇ ನಡೆಯುವದಲ್ಲವೆ ? ಹುಟ್ಟುವ ಮಗ ಮತ್ತೆ ಇದೇ ಹಾದಿಗೆ ಹತ್ತುವನಲ್ಲವೆ ? ಹಿಂದೂ ಧರ್ಮದ ಹಾದಿಗೆ ? ಅದರ ಬದಲು ನಾನು ಹೀಗೆಯೇ ಉಳಿದರೂ ಅಡ್ಡಿ ಇಲ್ಲ. ನಿಜ. ತೀರ ನಿಜ !"

ಅವಳ ಈ ಮಾತಿಗೆ ಈಗ ಏನು ಅನ್ನಲಿ ?— ಎಂಬ ಉದ್ವೇಗ. ವಿಚಾರ, ಫ್ರಾಂಜ ಮ್ಯುಲರರ ಮನಸ್ಸಿಗೆ ಬರುತ್ತಿತ್ತು. ಅಷ್ಟರಲ್ಲಿ ಏರ್ನಾ ಅನ್ನಹತ್ತಿದಳು. "ಅಲ್ಲ, ನಿಜವಾಗಿಯೂ ನಿಮಗೆ ಏಕೆ ಏನೇನೂ ಅನಿಸವ ಲ್ಲದು ? ಹೊಸದಾಗಿ ಮದುವೆಯಾದ ಹುಡುಗಿಯ ಭಾವನೆ ಏನಿರುತ್ತವೆ— ಅವರ ಏನೂ ಕಲ್ಪನೆ ಮಾಡಲು ನಿಮಗೆ ಬರುವದಿಲ್ಲ? ಹೊಸದಾಗಿ ಕೈಹಿಡಿದು ತಂದ ಹುಡುಗಿಯನ್ನು ಹೀಗೆಯೇ ಛಳಿಸಬೇಕು, ಅವಳ ಗುದುಮುರಿಗೆ ಕಟ್ಟ ಬೇಕು—ಇದೇ ಹೇಳಿದೆಯೇನು ನಿಮ್ಮ ಆ ಮುದ್ದಿನ ಹಿಂದೂ ಧರ್ಮದಲ್ಲಿ ? ಏನು ? ಹೇಳಿದೆಯಾದರೂ ಏನು ? ಹೇಳಿರಲ್ಲ ! ಮದುವೆಯಾದರೂ ಏಕೆ ಮಾಡಿಕೊಂಡಿರಿ — ಹೀಗೆ ನಡೆಯುವದೇ ಇದ್ದಿದ್ದರೆ ? ಭಾವನಾಶೂನ್ಯ, ಒಣ ಬರಡು. ಏನೂ ತೇವಿಲ್ಲದ ತಂಪಿಲ್ಲದ ನಡೆಯುದು ! ನಾನೇನು ಮಾಡಲಿ ಈಗ? ಹೇಗೆ ಸುಡಲಿ ನನ್ನ ಭಾವನೆಗಳನ್ನು ? ಮತ್ತು ನೀವು ?"

ಅವಳು ಅಳಲು ಬಂದಿದ್ದಳು. ಸಂತಾಪದಿಂದ ಥರಥರ ನಡುಗುತ್ತಿ ದ್ದಳು. ಅವಳ ಭಾವನೆಗಳ ಕಟ್ಟು ಒಡೆದಿತ್ತು. ತನ್ನ ಮನಸ್ಸನ್ನು ತಡೆ ಯುವದು ಅವಳಿಗೆ ಶಕ್ಯವಿದ್ದಿಲ್ಲ.

ಆದರೆ ಫ್ರಾಂಜ ಮ್ಯುಲರ ಶಾಂತವಾಗಿಯೇ ಅಂದರು. "ನಿನಗೆ ಏನು ಬೇಕು ಹೇಳು. ಆದರೆ ಹಿಂದೂ ಧರ್ಮಕ್ಕೆ ಏಕೆ ಸುಮ್ಮನೆ ದೋಷ ಹಚ್ಚುವಿ? ಸಂಯಮವೆಂಬುದಂತೂ ಹಿಂದೂ ಧರ್ಮದ ಆತ್ಮ.... ಅಂದಾಗ"

ಅವರ ಮಾತು ಪೂರ್ತಿ ಕೇಳಲಿಕ್ಕೂ ಅವಳು ಕಾಯಲಿಲ್ಲ. ಒಮ್ಮೆಲೆ ಸಿಡಿದೆದ್ದು ಅಂದಳು. ಬೆಂಕಿ ಹಚ್ಚಿ ನಿಮ್ಮ ಆ ಸಂಯಮಕ್ಕೆ ! ಇಲ್ಲಿ ನನ್ನ ಎದೆಗೆ "ಬೆಂಕಿ ಬಿದ್ದಿದೆ. ಅಂತಃಕರಣದಲ್ಲಿ ಜ್ವಾಲೆಹೊತ್ತಿದೆ. ಸಂಯಮವಂತೆ; ಮೈಯ ಕಣಕಣವೂ ಕೂಗುತ್ತಿದೆ—ವಾಸನೆಯಿಂದ! ಹೌದು—ವಾಸನೆ ! ತಾರುಣ್ಯ ಸುಲಭ ವಾಸನೆ ! ಅದಕ್ಕೇಕೆ ನಾಚಿಕೆ ? ತಾರುಣ್ಯದಲ್ಲಿ ಮದುವೆ ಮಾಡಿಕೊಳ್ಳುವದೇಕೆ ಮತ್ತೆ ? ಹಾಗಾದರೆ ಬರೇ ಪ್ರೇಮಾರಾಧನೆಯಷ್ಟೇ ಮಾಡುತ್ತ ಕೂಡ್ರಲಿಲ್ಲವೇಕೆ ?–ದೂರದಿಂದ–ಅಂತರವಿಟ್ಟು? ಹತ್ತಿರ ತೆಗೆದು ಕೊಂಡಿರೇಕೆ ? ಮುದ್ದಾಡಿದಿರೇಕೆ ? ಚುಂಬನಗಳ ಸುರಿಮಳೆ ಗರೆದಿರೇಕೆ ? ಬಿಗಿದಪ್ಪಿಕೊಂಡಿರೇಕೆ ?— ಆ ದಿನ ಬೆಳದಿಂಗಳಲ್ಲಿ ? ಬೆಂಕಿಹೊತ್ತಿಸಿ ಉರಿಯೆಬ್ಬಿಸಿದಿರೇಕೆ?....ಮತ್ತೆ ಈಗ ಅದನ್ನು ಆರಿಸಲು ಹೇಳುವಿರಾ? ಸಂಯಮದಿಂದ ?–ಆ ನಿಮ್ಮ ಡಾಂಭೀಕ ಹಿಂದೂ ಧರ್ಮದ ದಾಖಲೆ ಕೊಟ್ಟು ? ಸುಳ್ಳು, ಸುಳ್ಳಿದೆ ಆ ನಿಮ್ಮ ಧರ್ಮ....ಮತ್ತು ಆ ನಿಮ್ಮ ಶ್ರದ್ಧೆ. ಹೀಗೆ ನನ್ನ ಉರಿಸಬೇಡಿರಿ– ಏರುವ ತಾರುಣ್ಯದಲ್ಲಿ !"

ಸನ್ನೆ ಬಡಿದಂತೆ ಆಕೆ ಹೀಗೆಯೇ ಎಷ್ಟೋ ಹೊತ್ತು ಮಾತಾಡುತ್ತಲೇ ಉಳಿದಳು.

ಫ್ರಾಂಜ ಮ್ಯುಲರ ಶಾಂತರಾಗಿದ್ದರು. ಅವರ ಮತದಂತೆ ಜ್ಞಾನಿಗಳು ಅಜ್ಞಾನಿಗಳೊಂದಿಗೆ ಹೇಗೆ ನಡೆಯಬೇಕೋ ಹಾಗೇ ನಡೆಯುತ್ತಿದ್ದರು.

ಮಾತಾಡುತ್ತ ಆಡುತ್ತ ಅವಳ ಮೈ ಥರ ಥರ ನಡುಗಹತ್ತಿತು– ಅನಿವಾರ ಸಂತಾಪದಿಂದ. ಆಗ ಅವಳನ್ನು ಅವರು ಹತ್ತಿರ ಎಳೆದುಕೊಂಡರು, ಮೈದಡವಿದರು. ಅವಳ ಕಣ್ಣೀರನ್ನು ತಿದ್ದಲು ಅವರು ಯತ್ನಿಸಿದರು. ಆಗ ಅವಳು ಅವರಿಗೆ ಇನ್ನಷ್ಟು ಅಂಟಿಕೊಂಡಳು ಮತ್ತು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಅವಳ ಹೊಂಗೂದಲುಗಳ ಮೇಲಿಂದ ಮೆಲ್ಲ ಮೆಲ್ಲಗೆ ಕೈ ಆಡಿಸುತ್ತ ಅವಳ ತುಟಿಗಳನ್ನು ಚುಂಬಿಸುತ್ತ ಅವರೆಂದರು. 'ಹುಚ್ಚಿ ಹೋಗ್ಲಿ! ತುಸು ನಗು ನೋಡುವಾ? '

ಅವಳು ನಸು ನಕ್ಕಳು.– ಮೋಡಗಳೊಳಗಿಂದ ಚಂದ್ರನ ಬಿಂಬ ಹೊರ ಬರುತ್ತಿರುವಂತೆ ಅನಿಸಿತು ಅವರಿಗೆ.

* * * * *

ಮಾನಫ್ರೆಡ ಮತ್ತು ಫ್ರಾಂಜ ಇವರ ಭಾರತೀಯ ಸಂಸ್ಕೃತಿಯ ಹುಚ್ಚು ದಿನೇ ದಿನೇ ಬೆಳೆಯುತ್ತಲೆ ಇತ್ತು ಮತ್ತು ಅಪ್ರಮಾಣದಲ್ಲಿ ಏರ್ನಾಳ ದ್ವೇಷವೂ ಬೆಳೆಯುತ್ತಿತ್ತು. ಎರಡೂ ತುದಿಗಳು ಎರಡು ದಿಟ್ಟಿನಲ್ಲಿ ಸಾಗಿದ್ದವು. ಅವೆರಡೂ ಎಂದಾದರೂ ಹೊಂದುವ, ಕೂಡುವವೆಂಬ ಸಂಭವವೇ ಇದ್ದಿಲ್ಲ. ಯಾರು ಯಾರನ್ನೂ ಅರಿತುಕೊಳ್ಳುವ ಪ್ರಯತ್ನವನ್ನೆ ಮಾಡುತ್ತಿದ್ದಿಲ್ಲ. ಮಾನಫ್ರೆಡ-ಫ್ರಾಂಜ ಈ ಪಿತಾಪುತ್ರರಿಗೆ ಏರ್ನಾಳ ದಾರಿ ಏನೂ ಸೇರುತ್ತಿದ್ದಿಲ್ಲ. ಯಾವ ಧರ್ಮದ ಸೆರಗನ್ನೆ ಹಿಡಿದಿರಲಿ, ಮನಃಶಾಂತಿಯೇ ಕೊನೆಗೆ ಉಡಿಯಲ್ಲಿ ಬೀಳಬೇಕಷ್ಟೇ ? ಆದರೆ ಅವರಲ್ಲಿ ಯಾರ ಉಡಿಯಲ್ಲಿಯೂ ಮನಃಶಾಂತಿಯು ಬಿದ್ದಿದ್ದಿಲ್ಲ. ಹಾದಿ ತಪ್ಪುತ್ತಿರಬಹುದಾದರೆ, ಎಲ್ಲರದೂ ತಪ್ಪುವ ಸಂಭವವಿತ್ತು. ಆದರೆ ಹಾಗೆ ಯಾರಿಗೂ ಅನಿಸುತ್ತಿದ್ದಿಲ್ಲ. ಮಾನಫ್ರೇಡ ಮತ್ತು ಫ್ರಾಂಜ ಇವರಿಬ್ಬರೂ ಒಂದೂ ಧರ್ಮದ ಬೆನ್ನಿಗೆ ಓಡುತ್ತಿದ್ದುದು ಶಾಂತಿಗಾಗಿಯೇ. ಮತ್ತು ಅವರ ತಮ್ಮ ಧರ್ಮವನ್ನು ಬಿಟ್ಟು ಹಿಂದೂ ಧರ್ಮದ ಬೆನ್ನಿಗೆ ಓಡಬಾರದೆಂದು ಏರ್ನಾಳಿಗೆ ಮನವಾರೆ ಅನಿಸುತಿದ್ದುದೂ ಶಾಂತಿಗಾಗಿಯೇ ಇತ್ತು! ಆದರೆ ತಮ್ಮ ತಮ್ಮ ದಾರಿಯಲ್ಲಿ ನಡೆಯುತ್ತಿರುವಾಗಲೂ ಅವರ ಇಡಿ ಮನೆಯು, ಅಶಾಂತವಾಗಿತ್ತು. ಅಸ್ವಸ್ಥವಾಗಿತ್ತು. ಶಾಂತಿ ಆ ಮನೆಯನ್ನೆ ಬಿಟ್ಟು ಫರಾರಿಯಾಗಿ ಬಿಟ್ಟಿತು.

ಭಾರತೀಯ ಸಂಸ್ಕೃತಿಯ ಬಗ್ಗೆ ತಮ್ಮ ಅಂತಃಕರಣದಲ್ಲಿ ಇಷ್ಟೊಂದು ಪ್ರೀತಿ ಏಕೆ ಉಂಟಾಯಿತು– ಈ ಕುರಿತು ಅನೇ ಅದೇ ವೃತ್ತಾಂತವನ್ನು ಮಾನಫ್ರೆಡ್ ಭೆಟ್ಟಿ ಆದವರೆಲ್ಲರಿಗೂ ಒಳ್ಳೆ ಬಣ್ಣ ತುಂಬಿ ಬಣ್ಣಿಸುತ್ತಿ

ದ್ದರು. ಅವರ ಮಗನ ಮಡದಿಯಾಗಿ ಮನೆಗೆ ಮೊದಲು ಕಾಲಿಟ್ಟಾಗ ಏರ್ನಾಳಿಗೂ ಅವರ ಬಾಯಿಯಿಂದ ಅದೇ ವೃತ್ತಾಂತ ಕೇಳಲು ಸಿಕ್ಕಿತ್ತು.

ಏರ್ನಾಳಿಗೆ ಆ ಕಥೆಯನ್ನು ಹೇಳುವಾಗ ಮಾನಫ್ರೆಡ್ ಅಂದಿದ್ದರು. "ತಂಗೀ, ಭಾರತೀಯ ಸಂಸ್ಕೃತಿಯ ಆ ಉಜ್ವಲ ನಿಧಿಯು ಒಬ್ಬ ಅತಿ ದೊಡ್ಡ ಮಹಾಪುರುಷರಿಂದ ನಮ್ಮ ಮನೆಗೆ ಲಭಿಸಿದೆ. ನಿನಗೆ ಸ್ವಾಮಿ ವಿವೇಕಾನಂದರ ಹೆಸರು, ಕೇಳಿ ಗೊತ್ತಿದೆಯೇ ?"

ಫ್ರಾಂಜ ಮ್ಯುಲರನ ಜತೆಗೆ ಮಾತಾಡುವಾಗ ಸ್ವಾಮಿ ವಿವೇಕಾನಂದರ ಹೆಸರು ಗೊತ್ತಿಲ್ಲವೆಂದು ನಟಿಸಿದ್ದರೂ ಮಾನಫ್ರೆಡ್‌ರೊಂದಿಗೆ ಮಾತಾಡುವಾಗ ಅವಳು ಅಹುದೆಂದು ತಲೆದೂಗಿ ಅಂದಳು. "ವಿದ್ಯಾಪೀಠದಲ್ಲಿ ಕಲಿಯುತ್ತಿರುವಾಗ ನಾನು ಎಲ್ಲ ಧರ್ಮಗಳ ಮುಖಪರಿಚಯ ಮಾಡಿಕೊಂಡಿದ್ದೇನೆ. ಸ್ವಾಮಿ ವಿವೇಕಾನಂದರ ಪರಿಚಯ ನನಗೆ ಚೆನ್ನಾಗಿದೆ."

ಇದಕ್ಕೆ ಮಾನಫ್ರೆಡ್ ಹಿರಿದಾಗಿ ಹಿಗ್ಗಿ ಅಂದರು "ನೀನು ಅವರ ತತ್ವಜ್ಞಾನವನ್ನು ಓದಿರಬಹುದು. ಆದರೆ ನನಗೆ ಅವರ ಪ್ರತ್ಯಕ್ಷ ದರ್ಶನವಾಗಿದೆ. ಮತ್ತು ಅವರ ಮುಖದಿಂದಲೆ ಭಾರತೀಯ ಸಂಸ್ಕೃತಿಯ ಮಹಿಮೆಯನ್ನು ಕೇಳುವ ಭಾಗ್ಯ ನನ್ನದಾಗಿದೆ."

ಇಷ್ಟು ಹೇಳಿ ಅವರು ಸ್ವಲ್ಪ ವೇಳೆ ತಡೆದರು. ಆಗ ಅವರ ಮನಸ್ಸು ಗತಕಾಲದಲ್ಲಿ ವಿಹರಿಸಹತ್ತಿತ್ತು. ಅವರು ತಮ್ಮ ಕಣ್ಣು ಕೆಲಹೊತ್ತು ಮುಚ್ಚಿಕೊಂಡರು. ಮತ್ತೆ ತೆರೆದು ಮಾತಾಡ ಹತ್ತಿದರು. ಅವರು ಅಂದರು "ನಮ್ಮ ದೇಶಕ್ಕೆ ಸ್ವಾಮೀಜೀ ಬಂದಿದ್ದರು. ಆಗ ಅವರ ಮತ್ತು ಮ್ಯಾಕ್ಸ ಮ್ಯುಲರರ ಭೆಟ್ಟಿ ಆಯಿತು. ಆಗ ಮ್ಯಾಕ್ಸ ಮ್ಯುಲರರು ನನ್ನನ್ನು ಮುದ್ದಾಂ ಕರೆಯಿಸಿಕೊಂಡು ಸ್ವಾಮೀಜಿಯ ಪಾದಕ್ಕೆ ಹಾಕಿದರು. ಸ್ವಾಮೀ ವಿವೇಕಾನಂದರ ಆ ತೇಜಃಪುಂಜ ಮೂರ್ತಿಯನ್ನು ಕಂಡು ನಮ್ಮ ಕಣ್ಣು ಅಕ್ಷರಶಃ ಕುಕ್ಕಿದಂತಾದವು. ನಾನು ಅವರತ್ತ ನೋಡುತ್ತಲೆ ಕುಳಿತೆ."

ಸ್ವಲ್ಪ ಹೊತ್ತು ತಡೆದು ಮಾನಫ್ರೆಡ್ ಮುಂದರಿದು ಅಂದರು. "ಆದರೆ ಆ ದಿನ ಸ್ವಾಮೀಜಿ ಮೊದಲು ಏನೇನೂ ಮಾತಾಡಲಿಲ್ಲ. ನನಗೆ

ಚೆನ್ನಾಗಿ ನೆನಪಿದೆ. ಮೊದಲು ಮಾತು ತೆಗೆದವರು ಮ್ಯಾಕ್ಸ ಮ್ಯುಲರರು. ಮತ್ತು ಅದೂ ಹಿಂದೂ ಧರ್ಮದ ಬಗೆಗೆ–ಆ ಧರ್ಮದ ಪ್ರಶಸ್ತಿಯದು! ಮ್ಯಾಕ್ಸ ಮ್ಯುಲರ ಅಂದರು ಮರಣಾನಂತರದ ಶಾಶ್ವತ ಸುಖವನ್ನು ಸಂಪಾದಿಸಿ ಕೊಳ್ಳುವದೆ ಈ ಎಲ್ಲ ಹಿಂದುಗಳ ಪ್ರವೃತ್ತಿ. ಆದ್ದರಿಂದ ಈ ಐಹಿಕ ವ್ಯವಹಾರದಲ್ಲಿ ಅವರು ಅಲಿಪ್ತ ವೃತ್ತಿಯಿಂದ ನಡೆಯುತ್ತಾರೆ. ಐಹಿಕ ಪ್ರಪಂಚದಲ್ಲಿ ಚಿರವಿಯೋಗ ಹೊಂದಿದ ಆ ಪರಮೇಶ್ವರನೊಂದಿಗೆ ಸಾಯುಜ್ಯ ಹೊಂದುವದೊಂದೆ ಅವರ ಪ್ರಯತ್ನ ವಿರುತ್ತದೆ ಪರಮೇಶ್ವರ ನೊಂದಿಗೆ ಏಕರೂಪಹೊಂದಿ ಶಾಶ್ವತ ಆನಂದವನ್ನು ಉಪಭೋಗಿಸುವದರ ಸಲುವಾಗಿಯೆ ಅವರ ಮನಸ್ಸಿನ ಅಖಂಡ ತಲ್ಲಣ–ತಳಮಳ ವಿರುತ್ತದೆ. The Hindu enters the world as a stranger. ಈ ವಾಕ್ಯ ವನ್ನಂತು ಮ್ಯಾಕ್ಸ ಮ್ಯುಲರರು ತಿರುತಿರುಗಿ ಅನ್ನುತ್ತಿದ್ದರು. ನನಗೂ ಅದನ್ನು ಕೇಳಿ ಬೇಸರ ಬಂತು."

ಏರ್ನಾಳಿಗೆ ಅನಿಸಿತು ತಾನೂ ಹೇಳಿಬಿಡಬೇಕು. "ನಿಮ್ಮ ಇದೆಲ್ಲ ಕಥೆ ತಿರುತಿರುಗಿ ಕೇಳಿ ನನಗೂ ಬೆಸರ ಬಂದಿದೆ."

ಆದರೆ ಹಾಗೆ ಹೇಳುವದು ಅವಳಿಗೆ ಶಕ್ಯವಾಗಿದ್ದಿಲ್ಲ.

ಮಾನಫ್ರೆಡ್ ಮುಂದರಿದರು. "ಆದರೆ ಆ ದಿನ ಸ್ವಾಮೀ ವಿವೇಕಾ ನಂದರು ಹಿಂದೂ ಸಂಸ್ಕೃತಿಯ ಕುರಿತು ಏನೆಂದರೆ ಅದನ್ನು ಕೇಳಿ ನನ್ನ ಹೃದಯವು ಅಕ್ಷರಶಃ ತೃಪ್ತವಾಯಿತು. ನನ್ನ ಅಂತಃಕರಣದಿಂದ ಆನಂದದ ಕೋಡಿ ಹರಿದವು–ವಿಶ್ವದ ಸೌಖ್ಯದ ನಿಧಿಯೇ ನನ್ನ ಕೈಗೆ ಬಂದಂತೆ ಅನಿಸಿ ಆಕಾಶವೇ ಕಿರಿದಾಯಿತು. ಏನು ಹೇಳಲಿ, ಏರ್ನಾ, ನನ್ನ ಆನಂದಕ್ಕೆ ಪಾರಾವಾರವೇ ಉಳಿಯಲಿಲ್ಲ."

ಮಾನಫ್ರೆಡ್ ಮ್ಯುಲರರ ಮಾತು ಏನು ಮಾಡಿದರೂ ಮುಗಿಯು ತ್ತಿದ್ದಿಲ್ಲ. ಈ ಎಲ್ಲ ವೃತ್ತಾಂತ ಹೇಳುವಾಗ ಅವರು ಅಷ್ಟು ತಲ್ಲೀನರಾಗಿ ಬಿಡುತ್ತಿದ್ದರು.

ತಮ್ಮ ಕಥನ ಮುಂದುವರಿಸುತ್ತ ಅವರೆಂದರು. "ಸ್ವಾಮೀಜಿಯ ಭೆಟ್ಟಿಯ ನಂತರವೆ ನನ್ನ ಈ ಭಾರತ ಪ್ರೇಮ ಆರಂಭವಾಯಿತೆಂಬುದು

ಅಲ್ಲವೆ ಅಲ್ಲ. ಅದು ನನ್ನ ಮನಸ್ಸಿನಲ್ಲಿ ಬೀಜರೂಪದಿಂದ ಬಹಳ ಹಿಂದಿನಿಂದಲೂ ಇತ್ತು. ನಾನು ಸ್ವಾಮೀಜಿಗೆ ಅದರ ಕಾರಣವನ್ನು ಕೇಳಿದೆ. ಆಗ ಅವರೆಂದರು! ಅದು ನಿಮ್ಮ ಮೂಲ ಪ್ರೇರಣೆ. ಮನುಷ್ಯ ಯಾವಾಗಲೂ ತನ್ನ ಅಂತಃಪ್ರೇರಣೆಯಿಂದಲೇ ವರ್ತಿಸ ಬೇಕು ಅಂತಃಪ್ರೇರಣೆಯಲ್ಲಿ ಪೂರ್ವ ಜನ್ಮದ ಸಂಸ್ಕಾರ ಬೀಜ ರೂಪದಿಂದ ಸುಳಿಯುತ್ತಿರುತ್ತವೆ.

"ಆಮೇಲೆ ನಾನು ಸ್ವಾಮೀಜಿಗೆ ಕೇಳಿದೆ. ಪ್ರಪಂಚದ ಎಲ್ಲ ಧರ್ಮಗಳಲ್ಲಿಯೂ ಶ್ರೇಷ್ಠ ಧರ್ಮವು ಯಾವದು?" ಸ್ವಾಮೀಜಿ ತತ್‌ಕ್ಷಣ ಉತ್ತರವಿತ್ತರು. 'ಮಾನವ ಧರ್ಮ! ನಾವೆಲ್ಲರೂ ಮಾನವರು. ಅಂದಾಗ ಅಖಿಲ ಮಾನವ ಜಾತಿಯ ಉದ್ಧಾರ ಮಾಡಬಲ್ಲ ಮಾನವ ಧರ್ಮವೇ ಸರ್ವ ಶ್ರೇಷ್ಠ ಧರ್ಮ! ಆದರೆ ಧರ್ಮವು ನಮ್ಮ ಹಿಂದುಗಳ ಜೀವನದ ಹೇತುವಾಗಿರಬೇಕು. ನಮ್ಮ ಹಿಂದೂ ರಾಷ್ಟ್ರದ ಆತ್ಮವೇ ಮೂಲತಃ ಧರ್ಮವೆ ಆಗಿದೆ. ಅದ್ದರಿಂದಲೇ ಹಿಂದೂ ರಾಷ್ಟ್ರ ಮತ್ತು ಆ ರಾಷ್ಟ್ರದ ಸಂಸ್ಕೃತಿಯನ್ನು ನಾವು ಶ್ರೇಷ್ಠವೆನ್ನುತ್ತೇವೆ.

'ಮುಂದೆ ಮಾತಾಡುತ್ತ ಸ್ವಾಮೀಜಿ ಒಂದು ಅತ್ಯಂತ ಸುಂದರ ದೃಷ್ಟಾಂತವನ್ನು ಕೊಟ್ಟರು. ಅವರೆಂದರು, 'ಹಾಗೆ ನೋಡಿದರೆ, ಎಲ್ಲ ಧರ್ಮಗಳ ಸ್ವರೂಪವು ಒಂದೇ ತಿಳಿಯಿರಿ. ಒಂದು ಭವ್ಯ ಇಮಾರತು ಇದೆ. ಆ ಇಮಾರತಿನ ಬೇರೆ ಬೇರೆ ನಿಟ್ಟಿನಿಂದ ಫೋಟೋ ತೆಗೆದುಕೊಂಡರೆ ಆ ಇಮಾರತಿನ ಸ್ವರೂಪ ಬೇರೆ ಬೇರೆಯಾಗಿ ತೋರಬಹುದು. ಅಂದ ಮಾತ್ರಕ್ಕೆ ಆ ಇಮಾರತು ಬೇರೆ ಬೇರೆ ಆಗುವದಿಲ್ಲ. ಅದು ಮೂಲತಃ ಬೇರೆ ಬೇರೆ ಎಂದು ಸಿದ್ಧವಾಗುವದುಂಟೇ? ಸರ್ವ ಧರ್ಮಗಳ ಸ್ವರೂಪವು ಕೊನೆಗೂ ಒಂದೇ ಆಗಿದೆ.'

"ಅವರ ವಿಲಕ್ಷಣ ತೇಜಸ್ವಿಯಾದ ಕಣ್ಣುಗಳತ್ತ ನಾನು ನೋಡುತ್ತಲೆ ಕೂತಿರುತ್ತಿದ್ದೆ. ಅವರ ಆ ತೇಜಸ್ವಿಯಾದ ದೃಷ್ಟಿಯು ಅಜ್ಞಾತದ ಆಚೆಗೆ ಎಲ್ಲೋ ನೆಟ್ಟಿದೆ. ಮತ್ತು ಅಜ್ಞಾತದ ಆಚೆಗಿರುವಂಥ ಜ್ಞಾನವನ್ನು ಅವರು ತನ್ನೆಡೆಗೆ ಎಳೆದು ತರುತ್ತಿದ್ದಾರೆ-ಎಂದೆನಿಸುತ್ತಿತ್ತು. ನಮಗೆ

ಅನೇಕಾನೇಕ ಸಂಗತಿಗಳ ಜ್ಞಾನವೂ ಅವರಿಂದ ಆಯಿತು. ಓ! ಬಹಳ ದೊಡ್ಡ ವಿಭೂತಿ! ಮತ್ತು ಬಹಳ ದೊಡ್ಡದು ಅವರ ಆ ಹಿಂದೂ ಧರ್ಮ!"

ಏರ್ನಾ ಅವರಿಗೆ ಒಮ್ಮೆ ಕೇಳಿದಳು." ಆದರೆ ಆ ಹಿಂದೂಧರ್ಮದಲ್ಲಿ ಮೂವತ್ತುಮೂರು ಕೋಟಿ ದೇವತೆಗಳ ಕಲ್ಪನೆ ಇದೆ. ಅದು ಹಾಸ್ಯಾಸ್ಪದ ವಲ್ಲವೇ? ಮತ್ತು ಅವರ ಆ ಮೂರ್ತಿ ಪೂಜೆ! "

ತಿಳಿಸಿ ಹೇಳುವ ದನಿಯಲ್ಲಿ ಮಾನಫ್ರೆಡ್ ಉತ್ತರವಿತ್ತರು. "ನಮಗೆ ಸ್ವಾಮೀಜಿ ಈ ಪ್ರಶ್ನದ ಉತ್ತರವನ್ನು ಕೊಟ್ಟೇ ಇಟ್ಟಿದ್ದಾರೆ. ನೀನು ಕೇಳಿದಿ ಚೆನ್ನಾಯಿತು. "

ಮುಂದೆ ತನ್ನ ಪ್ರತಿಪಾದನೆಯ ವಿವರಗಳನ್ನು ಮನಸ್ಸಿನಲ್ಲಿಯೆ ಹೊಂದಿಸಿಕೊಳ್ಳುತ್ತ ಮಾನಫ್ರೆಡ್ ಮ್ಯುಲರ ಮುಂದೆ ಅಂದರು." ಹಿಂದೂ ಧರ್ಮದಲ್ಲಿ ಅನೇಕ ದೇವದೇವತೆಗಳ ಕಲ್ಪನೆ ರೂಢವಾಗಿದೆ- ಈ ವಿಧಾನವೆ ಮೊದಲಿಗೆ ತಪ್ಪು. ಪರಮೇಶ್ವರನು ಹೇಗೆ ಸರ್ವಸಾಕ್ಷಿಯೊ ಹಾಗೆಯೇ ಆತ ಸರ್ವಗುಣಸಂಪನ್ನ. ಈ ಕಲ್ಪನೆ ನಮಗೂ ಮಾನ್ಯವಿದೆ. ಯಾವದೇ ಹಿಂದೂ ಭಕ್ತನು ತನ್ನ ಇಷ್ಟದೇವತೆಯಲ್ಲಿ ಆ ಎಲ್ಲ ಗುಣಗಳನ್ನು ಕಲ್ಪಿಸುತ್ತಾನೆ, ಮತ್ತು ಒಂದೊಂದು ಗುಣಕ್ಕೆ ಒಂದೊಂದು ಪ್ರತೀಕ ವನ್ನು ಮನ್ನಿಸುತ್ತಾನೆ. ಈ ವಿವಿಧ ರೂಪಗಳೆಂದರೆ ಬರೆ ಹೊರಗಿನ ಗುರುತುಗಳು. ಇಷ್ಟೇ ಏಕೆ? ಈ ಎಲ್ಲ ವಿಶ್ವವು ಒಂದು ಪ್ರತೀಕವೇ, ಗುರುತಿನ ಚಿಹ್ನವೇ ಸರಿ. ಆಕೃತಿ ಮೂರ್ತಿ, ಗಂಟೆ, ಧೂಪದೀಪ, ಗ್ರಂಥ, ಗುಡಿ, ಮಶೀದಿ, ಚರ್ಚು ಇವೆಲ್ಲ ಪಾವಿತ್ರ್ಯ ದ್ಯೋತಕವಿದ್ದರೂ. ಇವೆಲ್ಲ ಬಾಹ್ಯ ಚಿಹ್ನಗಳೇ. ಕ್ರೈಸ್ತರಿಗೆ ಪ್ರಾರ್ಥನೆಗಾಗಿ ಚರ್ಚು ಏಕೆ ಬೇಕು? ಸಿಲುಬಿನ ಚಿಹ್ನಕ್ಕೆ ಪಾವಿತ್ರ್ಯ ಹೇಗೆ ಬಂತು? ಪ್ರಾರ್ಥನೆ ಮಾಡುವಾಗ ಆಕಾಶದತ್ತ ಕಣ್ಣು ಹೊರಳಿಸುವ ಅಗತ್ಯವೇನು? ಹಳೆಯ ಕ್ಯಾಥೊಲಿಕ್ ಪಂಥದ ಮುಂದಿಗೆ ಆ ಹಲವಾರು ಮೂರ್ತಿಗಳ ಅವಶ್ಯಕತೆ ಏಕೆ ಅನಿಸಿತು? ಒಂದು ಸಂಗತಿ ನೆನಪಿಟ್ಟುಕೋ. ಇವೆಲ್ಲ ಬಾಹ್ಯ ಸಾಧನಗಳ ಮುಖಾಂತರವೆ

ಅನಾದಿ, ಅನಂತ, ಅವ್ಯಕ್ತ ಮತ್ತು ನಿರ್ಗುಣನಿರಾಕಾರ ಪರಮಾತ್ಮನ ಪ್ರಾಪ್ತಿಯನ್ನು ನಾವು ಮಾಡಿಕೊಳ್ಳುವದಿದೆ. ಎಲ್ಲರೂ ಮಾಡಿಕೊಳ್ಳುವದಿದೆ. ಸ್ವಾಮೀಜಿ ಇದನ್ನೆ ಹೇಳುತ್ತಿದ್ದರು."

ಹಿಮಾಲಯದಲ್ಲಿ ಧ್ಯಾನಸ್ಥನಾಗಿ ಕುಳಿತ ಶಂಕರನ ಮೂರ್ತಿ ಮತ್ತು ಭಗವದ್ಗೀತೆ ಇವೆರಡು ವಸ್ತುಗಳನ್ನು ಸ್ವಾಮೀ ವಿವೇಕಾನಂದರು ಮಾನಫ್ರೆಡ್ ಮ್ಯುಲರರಿಗೆ ಕಾಣಿಕೆಯಾಗಿ ಕೊಟ್ಟಿದ್ದರು. ಅವನ್ನೂ ಪರಮ ಆದರದಿಂದ ಕಾಣಿಸುವ ಕೆಲಸವನ್ನು ಮಾನಫ್ರೆಡ್ ತಪ್ಪದೇ ಮಾಡುತ್ತಿದ್ದರು. ವಿಸ್ಲಾಳಿಗೂ ಅವರು ಅವೆರಡು ವಸ್ತುಗಳನ್ನು ಆ ಮನೆಯ ಒಂದು ಅಮೂಲ್ಯ ನಿಧಿಯೆಂದು ಕಾಣಿಸಿದ್ದರು. ಮತ್ತು ಆಗ ಅಂದಿದ್ದರು, "ಶಂಕರನ ಜಡೆಯೊಳಗಿಂದ ಹರಿಯುವ ಈ ಗಂಗೆಯನ್ನು ನೋಡು. ನಮ್ಮ ನೆಕರ ಹೊಳೆ ಈ ನದಿಯ ಮುಂದೆ ಏನೂ ಅಲ್ಲ. ಈ ಗಂಗಾ ನದಿಯ ಇತಿಹಾಸವೂ ಮಹಾ ಉಜ್ವಲವಿದೆ, ಉದಾತ್ತವಿದೆ. ಈ ನದಿಯನ್ನು ಭಗೀರಥನು ತನ್ನ 'ಭಗೀರಥ' ಪ್ರಯತ್ನದಿಂದ ಸ್ವರ್ಗದಿಂದ ಕೆಳಗೆ ತಂದನು. ಮತ್ತು ಅದರ ಪ್ರಥಮ ಪ್ರಪಾತವನ್ನು ಭಗವಾನ್ ಶಂಕರನು ತನ್ನ ಜಡೆಯಲ್ಲಿ ಧರಿಸಿದನು. ಬೇರೆ ಯಾರಿಗೂ ಅದು ಸಾಧ್ಯವಿತ್ತೇ ? ಅಂಥ ಪ್ರತಾಪಿ ಈ ಭಗವಾನ್ ಶಂಕರ, ಮತ್ತು ಈ ಪರಮ ಪವಿತ್ರ ಗಂಗೆ, ನಿನಗೆ ಗೊತ್ತಿರಲಿಕ್ಕಿಲ್ಲ. ಆದರೆ ಆಂಗ್ಲ ಕವಿ ವರ್ಡಸ್ವರ್ಥನು ಈ ಗಂಗಾನದಿಯ ಸ್ತೋತ್ರವನ್ನು ರಚಿಸಿದ್ದುಂಟು. ನಿಜವಾಗಿ ಹೇಳುವದಾದರೆ ಇಡಿಯ ಪ್ರಪಂಚವೇ ಇವಳನ್ನು ಪವಿತ್ರವೆಂದು ಮನ್ನಿಸಬೇಕು. ಹೌದು, ನಾವೂ ಕೂಡ ! ಸಾವಿನ ಬಾಗಿಲಲ್ಲಿ ಬಿದ್ದ ಯಾವ ಹಿಂದೂ ಮನುಷ್ಯನ ಬಾಯಿಯಲ್ಲಿಯೂ ಈ ನದಿಯ ಪವಿತ್ರ ತೀರ್ಥವನ್ನು ಹಾಕುತ್ತಾರೆ. ಮತ್ತು ಸತ್ತ ಮೇಲೆ ಅವನ ಎಲುಬು ಇದೇ ನದಿಯ ಪವಿತ್ರ ತೀರ್ಥದಲ್ಲಿ ವಿಸರ್ಜಿಸುತ್ತಾರೆ. ಆ ಮೂಲಕ ಆ ಮನುಷ್ಯನಿಗೆ ಸ್ವರ್ಗದಲ್ಲಿ ಪ್ರವೇಶ ದೊರೆಯುತ್ತದೆ."

ಭಗವದ್ಗೀತೆಯ ವಿಷಯವಾಗಿಯೂ ಮಾನಫ್ರೆಡ್ ತಮ್ಮ ಮನೆಯಲ್ಲಿ ಪದೇ ಪದೇ ಮಾತಾಡುತ್ತಿದ್ದರು. ಅವರು ಅನ್ನುತಿದ್ದರು "ಭಗವದ್ಗೀತೆ ಇದು ಹಿಂದೂ ಧರ್ಮದ ಒಂದು ಅಮುಲ್ಯ ನಿಧಿ–ಅಲ್ಲ ಅಖಿಲ ಮಾನವ

ಜಾತಿಗೇ ಬೆಳಕು ನೀಡುವ ಮಹಾಗ್ರಂಥ. ಆ ಗ್ರಂಥದಲ್ಲಿ ವರ್ಣನೆ ಮಾಡಿದ ಆತ್ಮದ ಸ್ವರೂಪವು ಎಷ್ಟು ಸಮರ್ಪಕವಾಗಿದೆ! ನಿಜವಾಗಿ ನೋಡಿದರೆ, ಪ್ರಪಂಚದ ಇತರ ಧರ್ಮಗಳಿಗೆ ಆತ್ಮದ ಗುರುತೆ ಮನದಟ್ಟಾಗಿಲ್ಲ. ಹಿಂದೂ ಧರ್ಮದಲ್ಲಿ ಗೀತೆಯ ರೂಪದಿಂದ ಆ ಪರಿಚಯ ಪರಿಪೂರ್ಣವಾಗಿ ಮನದಟ್ಟಾಗಿದೆ."

ಆಮೇಲೆ ಮಾನಫ್ರೆಡ್ ಆತ್ಮದ ವರ್ಣನೆಯನ್ನು ಆರಂಭಿಸುತ್ತಿದ್ದರು. ಅವರು ಕಳಕಳಿಯಿಂದ ಹೇಳುತ್ತಿದ್ದರು. "ಆತ್ಮವು ಅನಾದಿ, ಅವಿನಾಶಿ, ಅವಿಕಾರ್ಯ, ಅವ್ಯಯ, ಅವ್ಯಕ್ತ, ಅಗೋಚರ, ಅಚಿಂತ್ಯ ಮತ್ತು ಅದ್ಭುತವಾಗಿದೆ. ಅದು ಎಂದಿಗೂ" —

ಮಾತಿನ ಓಘದ ಭರದಲ್ಲಿ ಏರ್ನಾ ಅವರನ್ನು ನಡುವೆಯೇ ತಡೆದು ಕೇಳಿದಳು. "ಹಿಂದೂ ಧರ್ಮದೊಳಗಿನ ಈ ಆತ್ಮ ಮತ್ತು ಪುನರ್ಜನ್ಮದ ಹುಚ್ಚು ನನಗೆ ಬಲು ವಿಚಿತ್ರವೆನಿಸುತ್ತದೆ. ಒಂದೇ ಆತ್ಮ ಒಂದು ದೇಹದಿಂದ ಹೊರಟು ಇನ್ನೊಂದು ದೇಹವನ್ನು ಪ್ರವೇಶಿಸುವದೆಂಬ ಮಾತು ಏನೂ ಒಪ್ಪಿಗೆ ಆಗುವದಿಲ್ಲ."

ಇದಕ್ಕೆ ಮರುಸವಾಲು ಹಾಕುತ್ತ ಮಾನಫ್ರೆಡ್ ಅಂದಿದ್ದರು. "ನಮ್ಮ ಕ್ಯಾಥೊಲಿಕ ಧರ್ಮದಲ್ಲಿ ಆತ್ಮಗಳು ಅನಂತ ಕಾಲದವರೆಗೂ ಬಿದ್ದಿರುತ್ತಿದ್ದು, ನ್ಯಾಯದಾನದ ಆ ಒಂದು ದಿನ ಆ ಎಲ್ಲ ಆತ್ಮಗಳ ಉದ್ಧಾರ ಒಮ್ಮೆಲೇ ಆಗುವದೆಂಬ ಮಾತಾದರೂ ಮನಸ್ಸಿಗೆ ಒಪ್ಪಿಗೆ ಆಗುವದೇ? ಯಾವಾಗ ಬರುತ್ತದೊ ಆ ನ್ಯಾಯ ವಿಚಾರಣೆಯ ದಿನ ಯಾರಿಗೇ ಗೊತ್ತು"?

"ಹಿಂದೂ ಧರ್ಮದ ಮೇರೆಗೆ ಪುನರ್ಜನ್ಮ ಉಂಟೆಂಬುದಕ್ಕೆ ಆದರೂ ಏನಾದರೊಂದು ಪ್ರಮಾಣ ಉಂಟೇ?"

ಏರ್ನಾಳ ಈ ಪ್ರಶ್ನೆಗೆ ಮಾನಫ್ರೆಡ್‌ರು ಮೊಝಾರ್ಟ, ಪಗಾನಿನೀ, ಬೀಟಹೊವ್ಹನ 'ಪ್ರಭೃತಿ ಸಂಗೀತ ರಚನಾಕಾರರ ಹೆಸರು ಹೇಳಿ ಅಂದರು. "ಇವರೆಲ್ಲ ನಮ್ಮಲ್ಲಿಯ ಸಂಗೀತ ಕೃತಿಕಾರರೇ. ತೀರ ಎಳೆ ವಯಸ್ಸಿನಲ್ಲಿ

ಅವರು ರಚಿಸಿದ ಸಂಗೀತ ಕೃತಿಗಳನ್ನು ನೋಡಿದರೆ ಮನಸ್ಸು ಚಕಿತವಾಗುತ್ತದೆ. ವಯಸ್ಸಿನ ಬರೆ ಎಂಟನೆಯ ವರ್ಷಕ್ಕೆ ಬೀದೊವ್ಹನ ತನ್ನ ಹೆಸರು ಮೆರೆಯಿಸಿದ. ಚಿಕ್ಕಂದಿನಲ್ಲಿಯೇ ಆತ ವಿಯೆನ್ನಕ್ಕೆ ಹೋದ, ಆಗ ಬಾನದೊಳಗಿನ ದೊಡ್ಡ ದೊಡ್ಡ ಮಂದಿ ಅವನ ಪ್ರವಾಸಕ್ಕಾಗಿ ಹಣ ಕೂಡಿಸಿ ಕೊಟ್ಟರು. ವಿಯೆನ್ನಕ್ಕೆ ಹೋದೊಡನೆ ಆತ ಒಮ್ಮೆಲೆ ಪ್ರಖ್ಯಾತನಾದನು."

ಮಾನಫ್ರೆಡ್ ಮ್ಯುಲರ ಕೆಲಹೊತ್ತು ತಡೆದರು. ಈ ಬಗೆಯ ಸಂಗತಿಗಳ ಸೂಕ್ಷ್ಮ ವಿವರಗಳನ್ನು ಹೇಳುವಾಗ ಅವರಿಗೆ ಎಂದೂ ಬೇಸರವೆಂಬುದು ಇದ್ದಿಲ್ಲ. ಕೇಳುವವರಿಗೆ ಬೇಸರ ಬಂದರೂ ಅದು ಅವರ ಲೋಕಕ್ಕೆ ಗೊತ್ತಾಗುತ್ತಿದ್ದಿಲ್ಲ. ಅಂಥ ಒಂದು ಕಥೆ ಹೇಳುವಾಗ ಅದರ ಮೂಲ ಸೂತ್ರವು ಅವರಿಗೆ ನೆನಪಿನಲ್ಲಿ ಉಳಿಯುತ್ತಿದ್ದಿಲ್ಲ. ಕೇಳುವವರ ವ್ಯವಧಾನವೂ ತಪ್ಪಿದ್ದರಿಂದ ಅವರಿಗೂ ಆ ಸೂತ್ರವನ್ನು ಹಿಡಿಯಲು ಬರುತ್ತಿದ್ದಿಲ್ಲ. ಅವರ ಮಾತಿನ ಬಂಡಿ ಒಂದು ಅಂಶದಿಂದ ಜಾರಿ ಬೇರೆ ಯಾವದಾದರೊಂದು ಅಂಶದ ಮೇಲೆ ಬಂದು ನಿಲ್ಲುತ್ತಿತ್ತು. ಆಗ ಅವರೆ ಗೊಂದಲದಲ್ಲಿ ಬಿದ್ದು ಮುಂದಿರುವ ಮಂದಿಗೆ ಕೇಳುತ್ತಿದ್ದರು "ಹಾಂ, ಏನು ಹೇಳುತ್ತಿದ್ದೆ ನಾನು"?

ಮತ್ತು ಆಮೇಲೆ ತಾವೇ ಮುಂದುವರಿದು ಹಾಂ! ಬಂತು ಲಕ್ಷ್ಯಕ್ಕೆ. ಬೀಟಹೂವ್ಹನನ ವಿಷಯಕ್ಕೆ ಹೇಳುತಿದ್ದೇನಲ್ವೆ? ನಮ್ಮ ಕಡೆಯ ಮಾತಿರಲಿ. ಭಾರತದಲ್ಲಿ 'ಜ್ಞಾನೇಶ್ವರ'ರ ಹೆಸರು ನೀನು ಕೇಳಿರುವೆಯಾ? ತರುಣ ವಯಸ್ಸಿನಲ್ಲಿಯೆ ಪ್ರಪಂಚವನ್ನೇ ಚಕಿತಗೊಳಿಸುವ 'ಜ್ಞಾನೇಶ್ವರೀ' ಎಂಬ ಗ್ರಂಥವನ್ನು ಅವರು ಬರೆದರು. ಈ ಗ್ರಂಥದ ಇದಿರು ನಮ್ಮ ಮ್ಯಾಕ್ಸ ಮ್ಯುಲರ ಸಾಹೇಬರ ತಲೆಯು ಬಾಗುತ್ತಿತ್ತು. ಅಂಥ ತರಳ ಪ್ರಾಯದಲ್ಲಿ ಆ ಜ್ಞಾನ ಎಲ್ಲಿಂದ ಬಂತು? ಅದಕ್ಕೇನು ಲೆಕ್ಕವಿದೆಯೊ ? ಏನಾದರು ತರ್ಕ ನಡೆಯಿಸಲು ಬರುವಂತಿದೆಯೊ? ಅವರಲ್ಲಿ ಬಂದ ಆ ಪ್ರತಿಭಾ ಜ್ಞಾನದ ಕುರುಹುಗಳನ್ನು ಅವರ ಹಿಂದಿನ ಜನ್ಮದಲ್ಲಿಯೆ ಹುಡುಕಬೇಕಾಗುವದಿಲ್ಲವೇ? ಅಂದಾಗ ಹಿಂದೂ ಧರ್ಮದಲ್ಲಿಯ ಪುನರ್ಜನ್ಮದ ಕಲ್ಪನೆಯನ್ನು ಗೇಲಿಗೀಡು ಮಾಡುವದರಲ್ಲಿ ಏನು ಹುರುಳು?

ಮತ್ತು ಇಂಥ ಹೊತ್ತಿಗೆ ಫ್ರಾಂಜ ಮ್ಯುಲರ ಅಲ್ಲಿ ಇದ್ದು ಬಿಟ್ಟರಂತೂ ಕೇಳಲೇಬೇಡಿ. ವೇದೋಪನಿಷತ್ತುಗಳ ಸಂದರ್ಭಗಳು ಭರಭರನೆ ಎಚ್ಚರಾಗು ವವು. ಆಗ ಮಾನಫ್ರೆಡ್ ಮ್ಯುಲರರಿಗೆ ಪ್ರತಿಪಾದನೆಯ ಸ್ಫುರಣ ಮೇರು ವದು, ಅದೆಷ್ಟೆಂದು ಬಣ್ಣಿಸಲೇ ಸಾಧ್ಯವಿಲ್ಲ.

ಕೇವಲ ಇಷ್ಟೂ ತತ್ವ ಚರ್ಚೆ ಮಾಡಿ ಆ ಪಿತಾ ಪುತ್ರರು ತಡೆದಿದ್ದರೆ ಅಡ್ಡಿ ಏನೂ ಇದ್ದಿಲ್ಲ; ಆದರೆ ಆ ತತ್ವ ಚರ್ಚೆಯೊಂದಿಗೇ ಅವರ ಮನೆಯಲ್ಲಿ ಹಿಂದೂ ಧರ್ಮದೊಳಗಿನ ಕೆಲವು ರೀತಿ-ರೂಢಿಗಳು ತಲೆದೋರತೊಡಗಿದವು.

ಒಮ್ಮೆ ಆ ತಂದೆ–ಮಗ ನಿರ್ಧರಿಸಿದರು. ತಮ್ಮ ಮನೆಯಲ್ಲಿ ಕೃಷ್ಣ ಜನ್ಮೋತ್ಸವವನ್ನು ಆಚರಿಸಬೇಕು. ಶ್ರೀ ಕೃಷ್ಣ ಜನ್ಮದ ಮಹಿಮೆಯನ್ನು ವಿವರಿಸುವಾಗ ಮಾನಫ್ರೆಡ್ ಮ್ಯುಲರ ಅನ್ನಹತ್ತಿದರು. ಶ್ರೀ ಕೃಷ್ಣನು ಗೊಲ್ಲರ ಹುಡುಗ ಆತ ದೇವನಾದ. ನಮ್ಮಲ್ಲಿಯ ಒಬ್ಬ ಕವಿ ಅಂದಿದ್ದಾನೆ. ಈಶ್ವರನು ಖನಿಜ ಕೋಟಿಯಲ್ಲಿ ನಿದ್ದೆ ಮಾಡುತ್ತಾನೆ. ಉದ್ಭಿಜ ಕೋಟಿ ಯಲ್ಲಿ ಕನವರಿಸುತ್ತಾನೆ ಮತ್ತು ಮನುಜ ಕೋಟಿಯಲ್ಲಿ ಎಚ್ಚರಾಗುತ್ತಾನೆ. ಶ್ರೀಕೃಷ್ಣ ಇಂಥ ಮಾನವ ಕೋಟಿಯಲ್ಲಿ ಎಚ್ಚರಾದವನು. ಭಾರತೀಯರ ಅವತಾರದ ಕಲ್ಪನೆಯೆಂಬುದು ಇದೇ. ಸಾದಾ ಗವಳಿಗನ ಹುಡುಗ ದೇವ ನಾದ. ಇದರ ಅರ್ಥ ಭಾರತದಲ್ಲಿ ಗಣತಂತ್ರದ ಪ್ರಜಾಪ್ರಭುತ್ವದ ರಾಜ್ಯ ಪದ್ಧತಿ ಬಹಳ ಪುರಾತನ ಕಾಲದಿಂದಲೂ ನಡೆದು ಬಂದಿತ್ತು. ಶ್ರೀಕೃಷ್ಣನು ತನ್ನ ಗೀತೆಯಲ್ಲಿ ಹೇಳಿದ ತತ್ವಜ್ಞಾನವು ವಸ್ತುತಃ ಇಡಿ ಪ್ರಪಂಚಕ್ಕೇ ಉದ್ದೇ ಶಿಸಿ ಹೇಳಿದ್ದು. ಶ್ರೀ ಕೃಷ್ಣ ವಾಸ್ತವಿಕವಾಗಿ ಇಡಿ ಪ್ರಪಂಚಕ್ಕೆ ದೇವತೆ.

ಇದೆಲ್ಲ ಕೇಳುವಾಗ ಏನ್ನಾಳ ಮನಸ್ಸಿನಲ್ಲಿ ಸಿಡುಕು ಕೆರಳಿ ನಿಲ್ಲುವದು. ಅವಳಿಗೆ ಅವರ ಮಾತಿನ ನಡತೆಯ ಅರ್ಥವೆ ತಿಳಿಯದಂತೆ ಆಗಿತ್ತು. ವಿಷಯ ಬರೆ ಮಾತಿನ ಮರ್ಯಾದೆಯೊಳಗೆ ಇರುವತನಕ ಅವಳೂ ಮರ್ಯಾದೆ ಪಾಲಿ ಸಿದಳು. ತಾನೂ ಮಾತಾಡುವ ಭರಕ್ಕೆ ಬೀಳಲಿಲ್ಲ. ತನ್ನ ಸಂತಾಪವನ್ನು ಮನಸ್ಸಿನಲ್ಲಿಯೇ ಹೊಗೆಯಾಡುತ್ತ ಇಟ್ಟಳು. ತನ್ನ ಮನೆಯ ಆ ದೆವ್ವ ಬಡಿದ ಜನ ಯಾವ ಮಟ್ಟಕ್ಕೆ ಇಳಿಯುವದೊ ನೋಡಬೇಕೆಂದು ಕಾಯುತ್ತ ಉಳಿದಳು.

ಆದರೆ ಕೃಷ್ಣಾಷ್ಟಮಿಯ ಉತ್ಸವ ಅವಳ ಮನೆಯಲ್ಲಿ ವಿಜೃಂಭಣೆಯಿಂದ ಆಚರಿಸಿದ್ದು ಕಂಡಾಗ ಏರ್ನಾ ಅಕ್ಷರಶಃ ಉದ್ವಿಗ್ನಳಾದಳು. ಜಿಗುಪ್ಸೆ ತಾಳಿದಳು—ದೇಹದಿಂದಲೂ ಅಹುದು ಮನಸ್ಸಿನಿಂದಲೂ ಅಹುದು! ಅವಳ ಮನಸ್ಸಿನ ಕಟ್ಟು ಒಡೆಯಿತು. ಅವಳ ಸಂತಾಪ ಉಕ್ಕಿ ಸಿಡಿದು ಹೊರಬಿತ್ತು.

ಮ್ಯುಲರ ತಂದೆ-ಮಗ ಬಾಲಮುಕುಂದನ ಮೂರ್ತಿಯನ್ನು ಎಲ್ಲಿಂದಲೊ ಸಂಪಾದಿಸಿದರು. ಆ ದಿನ ಮ್ಯುಲರ ತಂದೆ-ಮಗ ಇಬ್ಬರಿಗೂ ಉತ್ಸಾಹದ ಕುದಿಯೇ ಬಂದಿತ್ತು. ಪತ್ರಿ-ಪುಷ್ಪಗಳನ್ನು ತಂದು ಇಡಿ ಮನೆಯನ್ನೆ ತಳಿರು-ತೋರಣ ಹೂಮಾಲೆಗಳಿಂದ ಅವರು ಸಿಂಗರಿಸಿದರು. ಶ್ರೀ ಕೃಷ್ಣನ ಪ್ರತಿಮೆ ಮಂಟಪದಲ್ಲಿ ಸ್ಥಾಪನೆ ಆಯಿತು. ಆ ಮಂಟಪದ ಮುಂದೆ ತುಂಬ ಸಿಂಗಾರ ಮಾಡಲಾಯಿತು. ಪ್ರತಿಮೆಯ ಸುತ್ತಲೂ ವಿದ್ಯುದ್ದೀಪಗಳ ಥಳಥಳಿಸುವ ಚಕ್ರ ತಿರುಗಹತ್ತಿತು. ಯಾರೋ ಕಲಾವಿದನು ಅಲ್ಲಿ ಯಮುನಾ ನದಿಯ ದೃಶ್ಯವನ್ನು ನಿರ್ಮಿಸಿದನು. ಸಾಲಾಗಿ ಸೊಡರುಗಳು ನಿಂತವು. ಗೀತಾ ಪಾಠ ನಡೆಯಿತು. ನೆರಕರೆಯ ಜನರನ್ನು ಕರೆದು ಅವರ ಮುಂದೆ ಮಾನಫ್ರೆಡ್ ಶ್ರೀ ಕೃಷ್ಣನೆಂಬ ವಿಶ್ವದೇವತೆಯ ಜನ್ಮಕಥೆಯನ್ನು ನಿರೂಪಿಸಿದರು. ಅವನ ಅವತಾರದ ರಹಸ್ಯವನ್ನು ವಿವರಿಸಿದರು. ಕೊನೆಗೆ ಪ್ರಸಾದವೆಂದು ಎಲ್ಲರಿಗೂ ಸಕ್ಕರೆ ಹಂಚಿದರು.

ಈ ಎಲ್ಲ ಕಾರ್ಯಕ್ರಮ ಮುಗಿಯಲು ಮಧ್ಯರಾತ್ರಿ ಮೀರಿತು. ಕಾರ್ಯಕ್ರಮ ಮುಗಿದ ಮೇಲೆ ಏರ್ನಾ ಮತ್ತು ಫ್ರಾಂಜ ಏಕಾಂತದಲ್ಲಿ ಭೆಟ್ಟಿ ಆದರು. ಆಗ ಏರ್ನಾ ಸಿಟ್ಟಿನಿಂದ ಕೆಂಪಾಗಿದ್ದಳು. ಅವಳ ಕಣ್ಣಿನಿಂದ ಕಿಡಿಗಳೇ ಸೂಸುತ್ತಿದ್ದವು. ಅವಳನ್ನು ಹತ್ತಿರ ಸೆಳೆದುಕೊಳ್ಳಲು ಫ್ರಾಂಜ ತನ್ನ ಬಲತೋಳನ್ನು ಅವಳ ಮೈಸುತ್ತಲು ಬಳಸಿದರು ಆಗ ಅವಳು ಅದನ್ನು ಕಿತ್ತೊಗೆದಳು. ಮೊದಲು ಅವಳು ಏನೂ ಅನ್ನಲಿಲ್ಲ—ಅಲ್ಲ, ಸಿಟ್ಟಿನ ಪ್ರಕೋಪದಿಂದ ಅವಳಿಗೆ ಏನೂ ಅನ್ನಲು ಆಗಲಿಲ್ಲ. ಫ್ರಾಂಜ ಮ್ಯುಲರ ಬೆಚ್ಚಿದರು. ಅವರಿಗೆ ಈಗ ಬೀಸಲಿರುವ ಬಡಿಯಲಿರುವ ಬಿರುಗಾಳಿಯ ಕಲ್ಪನೆ ಪೂರ್ತಿ ಆಯಿತು.

"ಇಂದು ನಮ್ಮ ಮನೆಯಲ್ಲಿ ಎಂಥ ದೊಡ್ಡ ಆನಂದದ ಹಬ್ಬ ಸಾಂಗ್ಯ ವಾಯಿತು. ಅಲ್ಲವೆ ?"

ಅವಳು ಇನ್ನು ಮೌನವಾಗಿಯೇ ಇದ್ದಳು. ಅವಳನ್ನು ಮತ್ತೊಮ್ಮೆ ಹತ್ತಿರ ಎಳೆದುಕೊಂಡು ಫ್ರಾಂಜ ಮ್ಯುಲರ ಕೇಳಿದರು. "ನೀನೇಕೆ ಇಷ್ಟು ಅಸ್ವಸ್ಥ ? ಏನಾಗಿದೆ ನಿನಗೆ ? ಮೈಯಲ್ಲಿ ನೆಟ್ಟಗಿಲ್ಲವೇ ?"

ಫ್ರಾಂಜ ಮ್ಯುಲರರ ಈ ಪ್ರಶ್ನೆಮಾಲಿಕೆಗೆ ಅವಳ ಬಾಯಿಯಿಂದ ಶಬ್ದ ಗಳ ರೂಪದಲ್ಲಿ ಪಿಸ್ತೂಲಿನ ಗುಂಡುಗಳೇ ಪಟಾಪಟ ಸಿಡಿದವು.

ಏರ್ನಾ ಅಂದಳು. ನನಗೇನಾಗಿದೆ ? ನಾ ಕೇಳುತ್ತೇನೆ ನನಗೆ ಏನೂ ಆಗಿಲ್ಲ ? ಈ ಮನೆಗೆ ಬಂದಂದಿನಿಂದಲೂ ನೋಡುತ್ತೇನೆ. ನೀವು ನನಗೆ ಹಿಂದೂ ಧರ್ಮದ, ಹಿಂದೂ ಸಂಸ್ಕೃತಿಯ ಮಹಿಮೆ ಬಣ್ಣಿಸಿ ಹೇಳದೆ ಇದ್ದ ಒಂದು ದಿನವೂ ವ್ಯರ್ಥ ಹೋಗಿಲ್ಲ. ಏನಾಗಿದೆ ನಿಮಗೆ ? ಯಾವ ಪಿಶಾಚಿ ಬಾಧಿಸಿದೆ ? ನಾ ಕೇಳಿದ್ದೆ ಭಾರತದ ಮಂದಿಗೆ ಮಾಟ ಮೋಡಿ ಜೂಟಾಟಿಕೆ ಬರುತ್ತದಂತೆ. ನಿಮ್ಮ ತಂದೆ ಮಕ್ಕಳ ಮೇಲೆ ಯಾರಾದರೂ ಮಾಟ ಮಾಡಿ ಹಾಕಿದ್ದಾರೋ ಏನು ? ಯಾರು ಮೋಹಮಂತ್ರ ಮಾಡಿದ್ದಾರೆ ನಿಮ್ಮ ಮೇಲೆ ? ಚಿನ್ನದಂಥ ತಮ್ಮ ಧರ್ಮ ಬಿಟ್ಟು ಪರರ ಧರ್ಮದ ಸ್ತೋಮ ನಮ್ಮ ಮನೆಯಲ್ಲಿ ಯಾಕೆ ಬೇಕು ? ಈ ನನ್ನ ಮನೆಯಲ್ಲಿ ? ಮತ್ತು ಈ ನನ್ನ ಕಣ್ಮುಂದೆ ? ಎಷ್ಟೆಂದು ಮತ್ತು ಹೇಗೆ ಸಹಿಸಲಿ ? ವೈಶ್ವದೇವ ಮಾಡಿ ಬೆಂಕಿ ಯಲ್ಲಿ ಅನ್ನ ಹಾಕುವಿರೇನು, ಮಂತ್ರ ಗೊಣಗುವಿರೇನು, ಮೈಗೆ ಭಸ್ಮ ಬಳಿ ಯುವಿರೇನು ? ಹಿಂದೂ ಧರ್ಮದ ಬಗೆಗೆ ನಿಮ್ಮ ಹುಚ್ಚು ನನಗೆ ಮದುವೆಯ ಮುಂಚೆಯೇ ಗೊತ್ತಿತ್ತು. ಆದರೆ ಅದು ಇಷ್ಟು ವಿಪರೀತಕ್ಕೆ ಮುಟ್ಟದೆ ಯೆಂಬ ಕಲ್ಪನೆ ಇದ್ದಿಲ್ಲ. ಇದ್ದಿದ್ದರೆ...."

"....ಇದ್ದಿದ್ದರೆ ನೀನು ನನ್ನೊಂದಿಗೆ ಮದುವೆಯೇ ಆಗುತ್ತಿದ್ದಿಲ್ಲ., ಅಲ್ಲವೆ ?" ಫ್ರಾಂಜ ಮ್ಯುಲರ ಶಾಂತವಾಗಿ ಅಂದರು.

ಇದಕ್ಕೆ ಏರ್ನಾ ಇನ್ನಿಷ್ಟು ಸಿಡಿದೆದ್ದಳು, "ನಿಮಗೆ ಇಷ್ಟು ಶಾಂತತೆ. ತಣ್ಣನ್ನ ಶಾಂತತೆ ಯಾರು ಕಲಿಸಿದರು ?"

"ಹಿಂದೂ ಧರ್ಮವೇ"

ಫ್ರಾಂಜ ಮ್ಯುಲರರ ಈ ಉತ್ತರದಿಂದ ಏರ್ನಾ ಇನ್ನಷ್ಟು ಸಂತಾಪಗೊಂಡಳು. ಆಕೆ ಅಂದಳು. "ಇದೆ ನಿಮ್ಮ ಹಿಂದೂ ಧರ್ಮ. ನಿಮ್ಮ ಆ ಹಿಂದೂ ಧರ್ಮದ ಹುಚ್ಚು ಒಂದು ದಿನ ನನ್ನ ಜೀವ ತೆಗೆದುಕೊಳ್ಳುವದು. ಘಾತ ಮಾಡುವದು. ನನ್ನ ಎಲ್ಲ ಬಾಳು ಹಾಳು ಮಾಡುವದು. ಇದೆ ಹುಚ್ಚಿನಿಂದಾಗಿ ನಮ್ಮ ಮನೆಯೇ ಕಿತ್ತೇಳುವದು ನಾನು ಏನು ಮಾಡಿದರೆ ನಿಮ್ಮ ಈ ಹುಚ್ಚು ನಿಂತೀತು ಮತ್ತು ನೀವು ಸರಿ–ಹಾದಿಗೆ ಬಂದೀರಿ? ಧ್ಯಾನ ಮಗ್ನ ಶಂಕರನ ಈ ಮೂರ್ತಿ, ಕೃಷ್ಣನ ಆ ಮೂರ್ತಿ ಈ ಬಯಲು ಬತ್ತಲೆ ನಾಲ್ಕು ನಾಲ್ಕು ಕೈಗಳ ಹಿಂದೂ ದೇವತೆಗಳು, ಮಂಗನ ಮತ್ತು ಆನೆಯ ಮುಸುಡಿನ ಈ ಕಲ್ಲ ದೇವರು! ಇದೇನು ಮಂದಿಯ ಮನೆಯೋ ದೆವ್ವದ ಮನೆಯೋ? ಇದೆಯಾದರೂ ಏನು? ಒಂದೊಂದು ದಿನ ಅನಿಸುತ್ತದೆ. ಈ ನಿಮ್ಮ ದೇವರ ಕಾಲಲ್ಲಿ ಈ ತಲೆ ಜಜ್ಜಿಕೊಂಡು ಜೀವ ಕೊಡಬೇಕು ಮತ್ತು ಇದೆಲ್ಲ ಆಟವನ್ನು ಒಮ್ಮೆ ಹಾಯಾಗಿ ಮುಗಿಸಬೇಕು."

ಮತ್ತು ತನ್ನ ಮೋರೆ ಮೇಲಕ್ಕೆತ್ತಿ ಆಕೆ ಉದ್ದೇಶದಿಂದ ಪ್ರಾರ್ಥನೆಯನ್ನು ಮಾಡಿಕೊಂಡಂತೆ ಅಂದಳು. "ದೇವಾ, ಯೇಸು, ನಿನ್ನ ದಯೆಯ ಬಾಗಿಲು ಸದಾ ತೆರೆದಿಡು ಮತ್ತು ಈ ಪಾಮರರನ್ನು ಕ್ಷಮಿಸು!"

ಇದೆಲ್ಲ ನಡೆಯುತ್ತಿರುವಾಗ ಫ್ರಾಂಜ ಮ್ಯುಲರ ಶಾಂತರಾಗಿಯೆ ಉಳಿದರು. ಅವರು ಅವಳನ್ನು ಹತ್ತಿರ ಎಳೆದು ಕೊಂಡರು. ಈಗ ಮಾತ್ರ ಆಕೆ ಯಾವದೇ ಪ್ರತೀಕಾರ ಮಾಡಲಿಲ್ಲ. ತಿರುಗಿ ಅವಳು ಅವರ ಬಗಲಲ್ಲಿ ಸೇರಿ ಚಿಕ್ಕ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಚಿಕ್ಕ ಮಗುವನ್ನು ಮೈ ದಡವುವಂತೆ ಮ್ಯುಲರರು ಅವಳ ಬೆನ್ನು ಚಪ್ಪರಿಸುತ್ತ ಉಳಿದರು– ತೀರ ಶಾಂತವಾಗಿ! ಅವಳು ಕಣ್ಣು ಮುಚ್ಚಿಕೊಂಡಳು. ಅವಳ ಕಂಬನಿಗಳು ಫ್ರಾಂಜ ಮ್ಯುಲರರ ಹೆಗಲ ಮೇಲೆ ತೊಟಕುತ್ತಿದ್ದವು. ಕಣ್ಣೀರಿಗೆ ಕೋಡಿ ಹರಿಯಲು ದಾರಿ ತೆರೆದು ಕೊಟ್ಟಿದ್ದರಿಂದ ಅವಳ ಮನಸ್ಸು ಮೆಲ್ಲಮೆಲ್ಲನೆ ಶಾಂತವಾಗ ತೊಡಗಿತ್ತು. ಅವರ ಬಗಲಲ್ಲಿಯೇ ಅವಳಿಗೆ ಯಾವಾಗ ನಿದ್ರೆ ಹತ್ತಿತೋ ಅವಳಿಗೆ ಗೊತ್ತಾಗಲಿಲ್ಲ, ಅವರು ಅವಳನ್ನು ಮೆಲ್ಲಗೆ ಮಂಚದ

ಮೇಲೆ ಮಲಗಿಸಿದರು ಮತ್ತು ತಾವೂ ಮಲಗಿದರು. ನಿದ್ದೆಯಲ್ಲಿ ಎಲ್ಲವೂ ಶಾಂತವಾಯಿತು.

ಮರುದಿನ ಏನೋ ಮಾತಿನ ಮೇಲಿಂದ ಭಾರತದಲ್ಲಿಯ ವಟ ಪೌರ್ಣಿಮೆಯ ವಿಷಯವೆದ್ದಿತು. ಫ್ರಾಂಜ ಮ್ಯುಲರ ಹೊರಗೆ ಹೋಗಿದ್ದರು. ಮತ್ತು ಮಾನಫ್ರೆಡ ಮ್ಯುಲರ ಏರ್ನಾಳಿಗೆ ಆ ವ್ರತದ ಮಹಿಮೆಯನ್ನು ಹೇಳುತ್ತಿದ್ದರು. ಆ ಮಹಿಮೆಯನ್ನು ಮನಗಾಣಿಸಿ ಕೊಡುತ್ತ ಮಾನಫ್ರೆಡ ಏರ್ನಾಳಿಗೆ ಅಂದರು. "ಕೃಷ್ಣ ಜನ್ಮಾಷ್ಟಮಿಯಂತೆಯೇ ವಟಸಾವಿತ್ರಿಯ ವ್ರತದ ಮಹತ್ವವೂ ಭಾರತದಲ್ಲಿ ಬಹಳವಿದೆ. ಈ ವ್ರತವನ್ನು ಹೆಚ್ಚಾಗಿ ಸೌಭಾಗ್ಯ ಪತಿ ಸ್ತ್ರೀಯರದು. ಆದ್ದರಿಂದಲೆ ಅದನ್ನು ತಿಳಿದು ಕೊಳ್ಳುವದರಲ್ಲಿ ನಿನಗೆ ಬಹಳ ಆನಂದವೆನಿಸಬಹುದು."

ಮಾನಫ್ರೆಡ್ ಮ್ಯುಲರ ಮಾತಾಡುತ್ತಿರುವಾಗ ಏರ್ನಾಳ ಹಣೆಯ ಮೇಲೆ ಗಂಟುಗಳು ಏರುತ್ತಿದ್ದವು. ಆಕೆ ಮನದಲ್ಲಿಯೇ ಅಂದಳು. "ನನಗೆ ಈ ಯಾವ ಸಂಗತಿಯು ಆನಂದವೆನಿಸುವದಿಲ್ಲ. ತಿರುಗಿ ಭಯ ಮಾತ್ರ ಅನಿಸುತ್ತದೆ."

ಆದರೆ ಮಾನಫ್ರೆಡ್ ಮ್ಯುಲರ ಮುಂದೆ ಹೇಳುತ್ತ ನಡೆದರು. ಅವರೆಂದರು. "ಸಾವಿತ್ರಿಯು ಮಹಾ ಪತಿವ್ರತೆ. ಅವಳ ಪತಿ ಸತ್ಯವಾನ ಆಲದ ಮರದ ಕೆಳಗೆ ಮೃತನಾದನು. ಆದರೆ ತನ್ನ ಪಾತಿವ್ರತ್ಯದ ಸಾಮರ್ಥ್ಯದಿಂದ ಸಾವಿತ್ರಿ ಅವನನ್ನು ಪ್ರತ್ಯಕ್ಷ ಯಮನ ದವಡೆಯೊಳಗಿಂದ ಮರಳಿ ತಂದಳು. ಆ ವಟವೃಕ್ಷದಡಿಗೇ ಸತ್ಯವಾನ ಜೀವಂತನಾದ್ದರಿಂದ ವಟವೃಕ್ಷದ ಪೂಜೆ ಮಾಡುವದಾಗಿದೆ. ಜನ್ಮ ಜನ್ಮಾಂತರಕ್ಕೂ ಅದೇ ಪತಿಯನ್ನು ವಹಿಸಬೇಕೆಂದು ಪ್ರಾರ್ಥನೆ ಮಾಡುವದಿದೆ. ಎಂಥ ನಿಷ್ಠೆ ಇದು ! ನಿಜವಾಗಿಯೂ ಕೌತುಕವೆನಿಸುತ್ತದೆ. ನಿನಗೆ ಅನಿಸುವದಿಲ್ಲವೇ ಏರ್ನಾ ?"

ಅವರ ಮಾತು ಕೇಳಿ ಅವಳ ಮನಸ್ಸಿನ ಮೇಲಿನ ಅಂಕೆ ಪೂರ್ತಿ ಹಾರಿತು. ತನ್ನ ಮಾವನನ್ನು ಕುರಿತು ಅಂದಳು. "ಯಾಕೆ ಬೇಕು ಆದೇ ಪತಿ ಜನ್ಮ ಜನ್ಮಾಂತರಕ್ಕೆ ? ಪೀಡಿಸಲಿಕ್ಕೆ ? ಸೇಡು ತೀರಿಸಿಕೊಳ್ಳಲಿಕ್ಕೆ ? ಮತ್ತೆ

ಗಿಡದ ಪೂಜೆ ಮಾಡಿ ಅಂಥ ಸಂಗತಿ ಸಿಗುತ್ತದೆಯೇ ? ಹುಚ್ಚು ಕಲ್ಪನೆ ! ಎಲ್ಲ ಹುಚ್ಚರ ಸಂತೆ ! ಗಿಡದ ಪೂಜೆ ಮಾಡಿ ಅದೇ ಗಂಡ ತಿರುಗಿ ದೊರೆ ಯುವನಾದರೆ ನಾನು ಎಂದೂ ಆ ಪೂಜೆ ಮಾಡಲಾರೆ. ಒಂದು ಜನ್ಮದಲ್ಲಿ ಆದ ಛಳ-ಪೀಡೆ ಸಾಕು ! ಗಿಡದ ಪೂಜೆಯಂತೆ ! ಹುಚ್ಚಾಟ ! ಮಳ್ಳು ! ಮೂರ್ಖತನ !"

ಹೀಗೆಂದು ಏರ್ನಾ ಉಪಹಾಸದಿಂದ ನಗಹತ್ತಿದಳು. ತಿಳಿ ಹೇಳುವ ದನಿಯಲ್ಲಿ ಮಾನಫ್ರೆಡ ಅಂದರು "ನಾವೂ ನಾತಾಳ (ಕ್ರಿಸಮಸ್)ದಲ್ಲಿ ಒಲಿವ್ಹ ವೃಕ್ಷದ ಟೊಂಗೆ ತರುತ್ತೇವೆ. ಅದರ ಸುತ್ತಲೂ ಮೇಣಬತ್ತಿಗಳನ್ನು ಉರಿಸು ತ್ತೇವೆ. ಸಿಂಗಾರ ಮಾಡುತ್ತೇವೆ. ಯಾಕೆ? ಅದು ಹುಚ್ಚಾಟವಲ್ಲವೇ ? ಅದು ಮಳ್ಳು ಅಲ್ಲವೆ ? ಅದು ಮೂರ್ಖತನವಲ್ಲವೆ ? ಆ ಪ್ರಕಾರ ನಿಮಗೆ ಮೆಚ್ಚಿಗೆ ಮತ್ತು ವಟವೃಕ್ಷದ ಪೂಜೆಯಲ್ಲಿ ಮಾತ್ರ ಹುಚ್ಚುತನ ಕಾಣುತ್ತದೆ? ಹಿಂದೂ ಧರ್ಮದಲ್ಲಿಯ ಎಲ್ಲ ಸಂಗತಿಗಳು ಶಾಸ್ತ್ರವಿಶುದ್ಧವಾಗಿರುತ್ತವೆ. ತರ್ಕ ನಿಷ್ಠವಾಗಿರುತ್ತವೆ. ಇದು ನಿಮಗೆ ಯಾವಾಗ ಮನವರಿಕೆ ಆಗುವದೋ ಏನೊ ಯಾರಿಗೆ ಗೊತ್ತು ?"

ಇದಕ್ಕೆ ಏನೂ ಮರು ಮಾತಾಡದೆ ಏರ್ನಾ ಎದ್ದು ಹೊರಟು ಹೋದಳು ಮತ್ತು ಹಿಂದೂ ಧರ್ಮದ ಮಹಿಮೆ ಅವಳನ್ನು ನಿರುತ್ತರಳಾಗಿ ಮಾಡಿತೆಂಬ ಸಮಾಧಾನದಲ್ಲಿ ಮಾನಫ್ರೆಡ್ ಕೂತಲ್ಲಿಯೆ ಧ್ಯಾನಸ್ಥ ಶಂಕರನಂತೆ ಕುಳಿತು ಕೊಂಡರು.

* * * *

ಋತು ಚಕ್ರ ಸತತ ತಿರುಗುತ್ತಿತ್ತು. ಭೂಮಿಯು ರಸರಂಗು ಪಲ್ಲಟಿಸು ತ್ತಿತ್ತು. ಸೃಷ್ಟಿಯು ನಟಿಸುತ್ತಿತ್ತು, ನಗುತ್ತಿತ್ತು, ಕಾಯುತ್ತಿತ್ತು, ಋತು ಸ್ನಾತಗಳಾಗುತ್ತಿತ್ತು, ಸೆಟೆದು ಕೊರಡಾಗುತ್ತಿತ್ತು, ಮತ್ತೆ ನಟಿಸಿ ಸಿಂಗಾರ ವಾಗುತ್ತಿತ್ತು, ನಾನಾ ರೂಪಗಳಲ್ಲಿ ಆ ದರ್ಶನ ನೀಡುತ್ತಿತ್ತು. ಕುಸುಮಾ ಕರ ಮಧುಮಾಸ ಬಂತು. ಮತ್ತು ವಸಂತದ ಆ ಸುಗಂಧಿ ಹೂವುಗಳ ಹಾಸಿನ ಮೇಲಿಂದ ಅಂತರಂಗದ ಭಾವನೆಯ ಗಂಧ ಪುಷ್ಪಗಳನ್ನು ಚೆಲ್ಲುತ್ತ ತೂರುತ್ತ ಅಸಂಖ್ಯ ಪ್ರೇಮಿಕರು ಸ್ಥೈರ್ಯವಾಗಿ ಅಡ್ಡಾಡ ಹತ್ತಿದರು. ಅವರ

ಕೈಗಳು ಒಂದರಲ್ಲೊಂದು ತೊಡಗಿದ್ದವು. ಪರಸ್ಪರರ ಕೊರಳಲ್ಲಿ ಬಾಹು ಪಾಶಗಳು ಹೆಣೆದಿದ್ದವು. ವೃಕ್ಷರಾಜಿಗಳೂ ಲತಾ ಪಲ್ಲವಗಳೂ ಚೊಚ್ಚಿಲ ಸಂಭ್ರಮದಿಂದ ಸಿಂಗಾರವಾಗಿದ್ದವು. ಬೀಚ ಮತ್ತು ಓಕ ಮರಗಳು ತಳಿತಿದ್ದವು. ಗುಡ್ಡಗಳ ನೆತ್ತಿಯ ಪೈನ ಮತ್ತು ಲಾರ್ಚ ಮರಗಳು ಹೂ-ಚಿಗುರುಗಳನ್ನೂ ಸೂಸಿದ್ದವು. ಅದರೊಂದಿಗೆ ಪ್ರೇಮಿಕರ ಅಂತರಂಗದಲ್ಲಿ ಹೊಸ ಆಸೆ ಅರಳಿತು. ಅವರಲ್ಲಿಯ ಅಂತರ ಪರಕೀಯತೆ ಮುಗಿಯಿತು. ದೂರವಿದ್ದವರು ಸಮೀಪ ಬಂದರು. ಆ ಪ್ರೇಮಿಕರ ಗಲ್ಲಗಳು ಪರಸ್ಪರ ಗಲ್ಲಗಳ ಮೇಲೆ ತಂಗಿದವು. ಉಸಿರಲ್ಲಿ ಉಸಿರು ಬೆರೆಯಿತು. ಅವರ ಬದುಕಿನಲ್ಲಿ ಭೂತಕಾಲ ಸರಿದು ವರ್ತಮಾನ ಕಾಲ ಅರಳಿತು. ಸುಖದ ಭವಿಷ್ಯದತ್ತ ಅವರ ಉನ್ಮತ್ತ ದೃಷ್ಟಿಯು ಹೊರಳಿತು ಅಷ್ಟರಲ್ಲಿ ಬೇಸಿಗೆ ಆರಂಭವಾಯಿತು. ಅವರ ಆಸೆಗಳು ಕಮರ ಹತ್ತಿದವು. ಅವರ ಪ್ರೇಮದ ಬಾಳ್ವೆ ಉರಿಯಹತ್ತಿತು; ಮತ್ತು ಆಮೇಲೆ ಬಂದ ಶರದ್ ಋತುವಿನಲ್ಲಿ ಆ ಪ್ರೇಮಿಕರ ನಡುವೆ ಅಂತರ ಬೆಳೆಯಿತು. ಅಂತರಂಗದಲ್ಲಿ ಆತುರದ ತಳಮಳ ಉಂಟಾಯಿತು. ಮರಗಳ ತರಗೆಲೆಗಳೊಂದಿಗೆ ಅವರ ಮನದ ಆಸೆಗಳೂ ಉದುರಿ ಬೀಳಹತ್ತಿದವು. ಅಷ್ಟರಲ್ಲಿ ಚಳಿಗಾಲ ಬಂತು. ಅದರಲ್ಲಿಯೇ ಕ್ರಿಸಮಸ್ (ನಾತಾಳ) ಹಬ್ಬ. ಈ ಹಬ್ಬವೆಂದರೆ ಭಾವಿಕರಂತೆಯೇ ಪ್ರೇಮಿಕರನ್ನು ಉನ್ಮತ್ತ ಮಾಡುವಂತಹದು. ಈ ಹಬ್ಬದಲ್ಲಿ ಭಾವಿಕರಲ್ಲಿ ಭಾವ ಜಾಗೃತಿ ಆಗುವಂತೆ ಪ್ರೇಮಿಕರಲ್ಲಿ ಪ್ರೇಮ ಜಾಗೃತವಾಗುತ್ತದೆ. ಈ ಋತುವಿನಲ್ಲಿ ಅವರ ಮನಸ್ಸಿಗೆ ಇಂಥ ಒಂದು ಸಾಂತ್ವನೆ ಸಿಗುತ್ತದೆ. ಚಳಿಗಾಲ ಬಂದಿಯೇ ಇದೆ. ಇನ್ನು ನಿಮ್ಮ ಪ್ರಿಯತಮ ವಸಂತ ಋತುವೇನು ದೂರವಿದೆಯೇ ?! ಮತ್ತೆ ಪ್ರೇಮಿಕರ ಕೈಗಳು ಚಳವಳ ಸುರು ಮಾಡುತ್ತವೆ. ಆಮೇಲೆ ಋತುರಾಜ ವಸಂತ ಬರುತ್ತದೆ. ಮತ್ತು ಪ್ರೇಮಿಕರ ಕೈಗಳು ಮತ್ತೆ ತನ್ನಾರೆ ಪರಸ್ಪರರ ಕೈಗಳಲ್ಲಿ ತೊಡಗಿ ಬೀಳುತ್ತವೆ.

ಈ ಕಾಲಚಕ್ರವು ಅಖಂಡವಾಗಿ ನಡೆದೇ ಇತ್ತು. ಕಾಲನ ಹೆಜ್ಜೆಗಳು ಓಡುತ್ತಿದ್ದವು. ಫ್ರ್ಯುಲಿಂಗವೆಂದರೆ ವಸಂತ, ಝೋಮ್ಮೆರ ಅಂದರೆ ಗ್ರೀಷ್ಮ, ಹೆರ್ಬಸ್ಟ ಅಂದರೆ ಶರತ್ ಮತ್ತು ವಿಂಟೇರ ಅಂದರೆ ಶಿಶಿರ—ಈ ಜರ್ಮನ

ನಿಯ ನಾಲ್ಕು ಋತುಗಳು ಬಂದವು, ಹೋದವು. ಒಂದೆ ಸಲವಲ್ಲ. ಪೂರ್ತಿ ಇಪ್ಪತ್ತನಾಲ್ಕು ಸಲ! ಆಯಾ ಋತುವು ತನ್ನ ವೈಶಿಷ್ಟ್ಯ ಕಾಣಿಸಬೇಕು ಮತ್ತು ಕಾಲದ ಉದರದಲ್ಲಿ ಅಡಗಬೇಕು. ಹೀಗೆ ಪೂರ್ತಿ ಇಪ್ಪತ್ತುನಾಲ್ಕು ವರ್ಷ ನಡೆಯಿತು. ಆದರೆ ಮ್ಯುಲರ ಕುಟುಂಬದಲ್ಲಿಯ ಹಿಂದೂ ಧರ್ಮದ ಕುರಿತ ಪ್ರೇಮ ಇದ್ದಂತೆಯೆ ಉಳಿಯಿತು. ಫ್ರಾಂಜ ಮ್ಯುಲರ ಮತ್ತು ಏರ್ನಾ ಇವರ ಮದುವೆಗೆ ಇಪ್ಪತ್ತನಾಲ್ಕು ವರ್ಷ ಸಂದವು. ಮಾನಫ್ರೆಡ್ ಮ್ಯುಲರ ಎಂಭತ್ತೈದು ವರ್ಷದ ಮುದುಕರಾಗಿದ್ದರು; ಫ್ರಾಂಜ ಮ್ಯುಲರ ಅರವತ್ತರ ಅಂಕಣದಲ್ಲಿ ಬಂದಿದ್ದರು. ಏರ್ನಾಳಿಗೆ ನಾಲ್ವತ್ತು ದಾಟಿ ಐದು ವರ್ಷ ಕಳೆದಿದ್ದವು ಫ್ರಾಂಜ ಮ್ಯುಲರರಿಗೆ ಮದುವೆಯ ನಂತರ ಎರಡು ವರ್ಷಕ್ಕೆ ಹುಟ್ಟಿದ ಮಗುವಿಗೆ ಈಗ ಇಪ್ಪತ್ತೆರಡು ವರ್ಷ ಪ್ರಾಯ. ಬಹಳಷ್ಟು ವರ್ಷ ಉರುಳಿದ್ದವು. ಋತುಗಳು ಹಿಂದೆ ಬಿದ್ದವು ಮತ್ತು ಕಾಲಪುರುಷನು ಒಂದೇ ಸವನೆ ಮುಂದೆ ಮುಂದೆ ಓಡುತ್ತಿದ್ದನು. ಆದರೆ ಈ ಮನೆಯಲ್ಲಿಯ ಹಿಂದೂ ಧರ್ಮದ ಬಗೆಗಿದ್ದ ಸೆಳೆತ ಅಥವಾ ಭಾರತೀಯ ಸಂಸ್ಕೃತಿಯ ಬಗೆಗಿನ ಪ್ರೇಮ ಏನೇನೂ ಕಡಿಮೆ ಆಗಿದ್ದಿಲ್ಲ. ಮತ್ತು ಏರ್ನಾಳ ಬೇಸರಿಕೆಯೂ ಏನೂ ಕುಗ್ಗಿದ್ದಿಲ್ಲ. ಕಾಲ ಚಕ್ರದಲ್ಲಿ ಎಷ್ಟೇ ಸುತ್ತಿದರೂ ಮಂದಿಯ ಮೂಲ ಸ್ವಭಾವ ಬದಲಾಗುವದುಂಟೇ ?

* * *

ಫ್ರಾಂಜ ಮ್ಯುಲರರಿಗೆ ಮದುವೆಯ ನಂತರ ಎರಡು ವರ್ಷಕ್ಕೆ ಮಗು ಹುಟ್ಟಿದಂದಿನ ಕಥೆ. ಮಗುವಿಗೆ ಹೆಸರೇನು ಇಡಬೇಕೆಂಬ ಬಗೆಗೆ ಮನೆಯಲ್ಲಿ ಚರ್ಚೆ ಸುರುವಾಯಿತು. ಮಾನಫ್ರೆಡ್ ಮ್ಯುಲರ ತನ್ನ ಮೊಮ್ಮಗನ ನಾಮಕರಣ ಹಿಂದು ಧರ್ಮಕ್ಕೆ ಅನುಸಾರವಾಗಿ ಮಾಡಿಯೇ ಬಿಟ್ಟರು ಮಾತ್ರವಲ್ಲ, ಮಗು ಗೋಕುಳಾಷ್ಟಮಿಗೆ ಹುಟ್ಟಿದ್ದರಿಂದ ಅವನ ಹೆಸರು ಮುಕುಂದನೆಂದು ಇಡಬೇಕು ಎಂದು ಆಗ್ರಹ ಹಿಡಿದರು. ಅವರೆಂದರು. "ನನ್ನ ಮಗನಲ್ಲಿ ಗೋಕುಲಾಷ್ಟಮಿಗೆ ಹುಡುಗ ಹುಟ್ಟಬೇಕು—ಎಂಬುದು ಎಂಥ ಭಾಗ್ಯ ನಮ್ಮದು! ನಮ್ಮ ಪೂರ್ವ ಜನ್ಮದ ಪುಣ್ಯಬಲದಿಂದಲೇ ಇದು ಹೀಗೆ ಘಟಿಸಿತು. ನಾವು ಭಾರತೀಯ ಸಂಸ್ಕೃತಿಗೆ ಉತ್ತರಾಧಿಕಾರಿಗಳೆಂದು ತೋರಿಸ

ಲಿಕ್ಕೇ ಈ ಚಮತ್ಕಾರವು ನಮ್ಮ ಮನೆಯಲ್ಲಿ ನಡೆಯಿತು. ಈಗಲಾದರೂ ಎಲ್ಲರ ಕಣ್ಣು ತೆರೆದೀತು. ನನ್ನದಂತೂ ಅಂಬೋಣ, ಪ್ರತ್ಯಕ್ಷ ಶ್ರೀ ಕೃಷ್ಣನೆ ನನ್ನ ಮೊಮ್ಮಗನ ರೂಪದಲ್ಲಿ ನನ್ನ ಮನೆಯಲ್ಲಿ ಅವತರಿಸಿದ್ದಾನೆ. ಅವನ ಹೆಸರನ್ನು ಇವನಿಗೆ ಇಡಿ, ಇವನನ್ನು ಮುಕುಂದನೆಂದು ಕರೆಯಿರಿ."

ಇದಕ್ಕೆ ಇನ್ನೊಂದು ಶಂಕೆಯನ್ನು ಪ್ರಕಟಿಸಬಾರದೆಂದು ಅವರು ಮುಂದೆ ಅಂದರು. "ಇದು ನೋಡಿ, ನಮ್ಮ ಮನೆಯ ಈ ಕೃಷ್ಣನು ರೋಹಿಣಿ, ನಕ್ಷತ್ರಕ್ಕೇ ಹುಟ್ಟಿದ್ದಾನೆ ತಿಳಿಯಿತೇ?–ಥೇಟು ಆ ಭಾರತದ ಶ್ರೀ ಕೃಷ್ಣ ನಂತೆಯೇ– ನನ್ನ ಮುಕುಂದ! ನನ್ನ ಮುಕುಂದ!"

ಹೀಗೆಂದು ಅವರು ಪ್ರೇಮದ ಭರದಲ್ಲಿ ಎಷ್ಟೋ ಹೊತ್ತು ಕುಣಿದಾಡು ತ್ತಿದ್ದರು. ಜತೆಗೆ ಆ ಪುಟ್ಟ ಮಗುವನ್ನು ತೂಗುತ್ತಿದ್ದರು.

ಆದರೆ ಏರ್ನಾಳು ಮಾತ್ರ ತನ್ನ ಮಾವನ ಈ ಹಟವನ್ನು ಸಾಧಿಸಲು ಎಂದೂ ಬಿಡಲಿಲ್ಲ. ಅವಳು ಅವನ ಹೆಸರು ಆಲ್ಬರ್ಟ ಎಂದಿಟ್ಟಳು.– ಮೊದಲನೆಯ ದಿನವೇ! ಮುದ್ದಿನಿಂದ ಆಕೆ ಅವನನ್ನು ಅಲ್ಬಾ ಎಂದು ಕರೆಯ ಹತ್ತಿದಳು. ಮಾನಫ್ರೆಡ್ ಮ್ಯುಲರರು ಮಾತ್ರ ತನ್ನ ಆ ಮೊಮ್ಮ ಗನಿಗೆ ಕೊನೆಯವರೆಗೂ 'ಮುಕುದ'ನೆಂದೇ ಕರೆಯುತ್ತಿದ್ದರು.

ಕೃಷ್ಣ ಜನ್ಮದ ವೇಳೆಯ ವೃತ್ತಾಂತವನ್ನು ಕಂಡಕಂಡವರಿಗೆ ಹೇಳುವ ಒಂದು ನಾದವೇ ಅವರಿಗೆ ಅಂಟಿಕೊಂಡಿತು. ಮೊಮ್ಮಗನ ಜನ್ಮ ಕೃಷ್ಣಾಷ್ಟ ಮಿಗೆ ಆದಂದಿನಿಂದ ಕೃಷ್ಣಜನ್ಮದ ಕಲ್ಪನೆಯಿಂದ ಅವರು ಮೈಮರೆತು ಹೋದರು. ಅವರು ಅನ್ನಹತ್ತಿದರು, "ಕೃಷ್ಣಜನ್ಮವಾದ ವೇಳೆಗೆ ಏನಾಯಿ ತೆಂದು ಗೊತ್ತೇ"? ಆಕಾಶದ ನಕ್ಷತ್ರಗಳಿಗೆ ತೇಜವೇರಿತು. ದಶ ದಿಕ್ಕುಗಳು ಪ್ರಸನ್ನವಾದವು. ಕಣಿಗಳಿಂದ ಉತ್ತಮೋತ್ತಮ ರತ್ನಗಳು ಹೊರಬಿದ್ದವು. ಕೊಳಗಳಲ್ಲಿ ತಾವರೆಗಳು ತುಂಬಿ ಅರಳಿದವು. ಅಡವಿಯ ಮರಗಳಲ್ಲಿ ಹಕ್ಕಿಗಳು ಹಾಡಹತ್ತಿದವು. ಹೊಳೆಹಳ್ಳ ಕೊಳಗಳ ನೀರು ಸ್ಫಟಿಕದಂತೆ ತಿಳಿಯಾಯಿತು. ಗಾಳಿ ತಂಪಾಗಿ ಕಂಪಾಗಿ ಬೀಸಹತ್ತಿತು. ಸ್ವರ್ಗದ ದೇವತೆ ಗಳು ದುಂದುಭಿಗಳನ್ನು ಮೊಳಗಿದವು. ಗಂಧರ್ವರು ಹಾಡಿದರು. ಅಪ್ಸರೆ

ಯರು ನರ್ತನ ಮಾಡಿದರು. ಅಖಿಲ ಜಗತ್ತಿನಲ್ಲಿ ಆನಂದ ತುಂಬಿ ತುಳು ಕಾಡಿತು. ಈಗ ನನ್ನ ಮನೆಯಲ್ಲಿಯೇ ಇದೇ ಆಗಲಿದೆ. ಏಕೆಂದರೆ ನಮ್ಮಲ್ಲಿಯೂ ಕೃಷ್ಣನ ಜನ್ಮವಾಗಿದೆ."

ಕಂಡ ಕಂಡವರೊಂದಿಗೆ ಮಾನಫ್ರೆಡ್ ಹೀಗೆ ಒತ್ತಿ ಹೇಳುತ್ತಿದ್ದರು. ಮತ್ತು ತನ್ನ ಮಾವನ ಈ ಮರುಳು ಹದ್ದು ಮೀರಿ ಹೋಗಿದೆಯೆಂದು ಏರ್ನಾ ಭಾವಿಸುತ್ತಿದ್ದಳು.

ಎಂಥ ವಿಲಕ್ಷಣ ಯೋಗಾಯೋಗ ನೋಡಿರಿ! ತೀರ ಚಿಕ್ಕಂದಿನಿಂದಲೆ ಅಲ್ಬರ್ಟನ ಒಲವು ಭಾರತೀಯ ಸಂಸ್ಕೃತಿಯ ಕಡೆಗೆ ಇತ್ತು. ಮ್ಯುಲರ ಕುಲದ ಗುಣವೆ ಅವನ ರಕ್ತದಲ್ಲಿ ಇಳಿದು ಬಂದಿತ್ತು. ತನ್ನ ಮನೆಯೊಳಗಿನ ಎರಡು ಸಂಸ್ಕೃತಿಗಳ ನಡುವಿನ ಸಂಘರ್ಷವನ್ನು ಅರಿಯುವ ವಯಸ್ಸು ಅವನದಿದ್ದಿಲ್ಲ. ಮನೆಯೊಳಗಿನ ಮಂದಿಯ ವಾದವಿವಾದಗಳು ಅವನ ಕಿವಿಗೆ ಬೀಳುತ್ತಿದ್ದವು. ಆದರೆ ಅವು ಮನಸ್ಸಿನಲ್ಲಿ ಮಾತ್ರ ಇಳಿಯುತ್ತಿದ್ದಿಲ್ಲ. ಚಿಕ್ಕ ಮಕ್ಕಳ ಮನಸ್ಸು, ಧರ್ಮ, ಸಂಸ್ಕೃತಿ ಮುಂತಾದ ವಿಷಯಗಳತ್ತ ಹೊರಳುವದು ಅಷ್ಟರಲ್ಲಿಯೆ ಇದೆ! ಅವರಿಗೆ ಈ ಇಂಥ ವಿಷಯಗಳು ತಿಳಿಯುವದೂ ಇಲ್ಲ ಒಗ್ಗುವದೂ ಇಲ್ಲ. ಆದರೆ ಆಲ್ಬರ್ಟನ ಮಟ್ಟಿಗೆ ಮಾತ್ರ ಅಂಥ ಚಮತ್ಕಾರವು ಒದಗಿ ಬಂದದ್ದು ನಿಜ!

ಸಂಜೆಯ ಹೊತ್ತಾಗಿತ್ತು. ಮನೆಯಲ್ಲಿ ಯಾರೂ ಇದ್ದಿಲ್ಲ. ಏರ್ನಾ ಏನೊ ಕೆಲಸದಲ್ಲಿ ತೊಡಗಿದ್ದಳು. ಆ ವೇಳೆಗೆ ಆಲ್ಬರ್ಟ ಅಜ್ಜನ ಕೋಣೆಯಲ್ಲಿ ಹೋಗಿ ಧ್ಯಾನಸ್ಥ ಶಂಕರನ ಮೂರ್ತಿಯ ಕಡೆಗೆ ಕಣ್ಣಿಟ್ಟು ದಿಟ್ಟಿಸುತ್ತ ಕೂತನು. ನಂತರ ತಾನೂ ಆ ಮೂರ್ತಿಯ ಶಂಕರನಂತೆ ಪದ್ಮಾಸನ ಹಾಕಿ ಕಣ್ಣು ಮುಚ್ಚಿಕೊಂಡನು ಮತ್ತು ತಾನೂ ಧ್ಯಾನಸ್ಥನಂತೆ ಕೂತನು. ಬಹಳ ಹೊತ್ತಾಯಿತು ಆಲ್ಬರ್ಟ ಕಾಣಲಿಲ್ಲ ಎಂದು ಏರ್ನಾ ಅವನನ್ನು ಹುಡುಕ ಹತ್ತಿದಳು.

ಶಂಕರನ ಮೂರ್ತಿಯ ಮುಂದೆ ಹಾಗೆಯೇ ಧ್ಯಾನಸ್ಥನಾಗಿ ಕುಳಿತ ಮಗನನ್ನು ಕಂಡು ಏರ್ನಾ ದಿಗಿಲು ಬಿದ್ದಳು. ಆ ದೃಶ್ಯವನ್ನು ನೋಡಿ

ಅವಳ ಅಂತರಂಗದಲ್ಲಿ ಶೂಲಿ ಎದ್ದಿತು. ಅಶುಭದ ಆಶಂಕೆ ಅವಳ ಮನಸ್ಸಿಗೆ ಒಮ್ಮೆಲೆ ಸೋಂಕಿ ಹೋಯಿತು. ನಡೆಯುತ್ತಿರುವದು ಏನೂ ನೆಟ್ಟಗಲ್ಲ ಎಂದು ಅವಳಿಗೆ ಅನಿಸಿತು. ಏನು ಮಾಡಿದರೆ ತನ್ನ ಈ ದೆವ್ವಬಡಿದ ಮನೆ ಒಂದು ನೆಲೆಗೆ ಬಂದಿತೋ? ಈ ಕುರಿತು ಅವಳು ವಿಚಾರಮಾಡ ಹತ್ತಿದಳು. ದಶದಿಕ್ಕುಗಳು ಕಗ್ಗತ್ತಲೆ ಕವಿದು ಹೋದಂತೆ ಅವಳಿಗೆ ಭಾಸವಾಯಿತು. ಬೆಳಕಿನ ಒಂದು ಕಿರಣವೂ ಅವಳಿಗೆ ಕಾಣಿಸದು. ಅವಳು ದಿಗ್ಗಟ್ಟಳು, ಭಯ ದಿಂದ ಕಂಗೆಟ್ಟಳು. ಅವಳ ಅಂತಃಕರಣ ತತ್ತರಿಸಿತು. ಅವಳ ದೃಷ್ಟಿಯಲ್ಲಿ ಈ ಮೂರನೆಯ ಪೀಳಿಗೆಯೂ ಹಿಂದು ಧರ್ಮದ ಹುಚ್ಚಿಗೆ ಬಿದ್ದು ವ್ಯರ್ಥ ಹೊಗಲಿತ್ತು.

ಆಲ್ಬರ್ಟನನ್ನು ಈ ಅವಸ್ಥೆಯೊಳಗಿಂದ ಆಕೆ ಹೊರ ತಂದಳು, ಮತ್ತು ಕೈಹಿಡಿದು ಅವನನ್ನು ತನ್ನ ಕೋಣೆಗೆ ಒಯ್ದಳು.

ಕೋಣೆಯೊಳಗೆ ಬಂದೊಡನೆ ಅವಳು ಒಮ್ಮೆಲೆ ಉದ್ವೇಗದಿಂದ ಅಂದಳು "ನೀವೆಲ್ಲರೂ ನನ್ನ ಛಳ ಆರಂಭಿಸಿದ್ದೀರಿ. ಈಗ ಅದರಲ್ಲಿ ನೀನೂ ಸೇರಿಕೊಂಡಂತೆ ಕಾಣುತ್ತದೆ. ನನ್ನ ಮನೆಯಲ್ಲಿ ಹೀಗೆ ನಡೆದು ನಿಮಗೆ ಏನು ಸಿಗುವದಿದೆ? ಅಂದಾಗ ಒರಿವೆ ನನ್ನನ್ನೇಕೆ ಕಾಡುವಿರಿ?"

ಏನ್ಸಾ ಮಾತಾಡುತ್ತಿದ್ದಳು. ಆಲ್ಬರ್ಟ ತೆಪ್ಪಗೆ ಕೇಳುತ್ತಿದ್ದನು. ತನ್ನ ಅಂತರಂಗದ ದುಃಖದ ಎಲ್ಲ ಕಥೆಯನ್ನು ಅವಳು ಅವನ ಮುಂದೆ ತೋಡಿಕೊಂಡಳು. ಮತ್ತು ಅವನಿಗೆ ತುಂಬ ಕಳವಳದಿಂದ ಅಂದಳು. "ನೀನಾದರೂ ಹೀಗೆ ನಡೆಯ ಬೇಡ, ಆಲ್ಬಾ! ನಿನ್ನ ಬಗ್ಗೆ ನನಗೆ ಅದೆಷ್ಟು ಆಸೆ! ಈಗ ಅದೊಂದೆ ಆಸೆಯ ಎಳೆ ಉಳಿದಿದೆ. ಅದೂ ಹರಿದರೆ ನಾನು ಮುಗಿ ದಂತೆಯೇ! ಈ ಎಲ್ಲ ಹುಚ್ಚಿನೊಳಗಿಂದ ನೀನು ಬಿಡುಗಡೆ ಆಗಿ ಉಳಿಯುವಿ, ಆ ಮರುಳಿನ ಮಾರ್ಗ ಹಿಡಿಯಲಿಕ್ಕಿಲ್ಲ ಎಂದು ಅದೆಷ್ಟು ಆಸೆ ಪಟ್ಟು ಕೊಂಡಿದ್ದೆ! ಆದರೆ ನನ್ನ ಆ ಆಸೆಯೂ ಮಣ್ಣು ಪಾಲಾಗುವದೆಂದು ತೋರು ತ್ತದೆ. ಏಕೆ ನನ್ನನ್ನು ಕಾಡುತ್ತೀರಿ? ಮತ್ತೆ ನೀನು ಅವರಲ್ಲಿ ಏಕೆ ಸೇರಿ ಕೊಳ್ಳುವಿ ಆಲ್ಬಾ ?"

ಏಸ್ನ್ಯಾಳ ದನಿ ಏರುತ್ತ ಹೋಯಿತು. ಅವಳು ಅಳಲಿಕ್ಕೆ ಬಂದಳು. ಆದರೆ ಒಮ್ಮೆಲೆ ನಿರ್ಧಾರದಿಂದ ಅಂದಳು. "ಆಲ್ಬ್ಯಾ, ಲಕ್ಷ್ಯದಲ್ಲಿ ಇಟ್ಟುಕೊ. ನಿನಗೆ ನಾನು ಹುಚ್ಚು ಪಟ್ಟೆ ನಡೆಯಲು ಬಿಡಲೊಲ್ಲೆ. ಅಲ್ಲೊ, ನಮ್ಮ ಧರ್ಮ ಬಿಟ್ಟು ನೀನು ಆ ಹುಚ್ಚು ಧರ್ಮದ ಬೆನ್ನಿಗೆ ಬಿದ್ದೀ! ಆದರೆ ಇದ ರಿಂದ ನಮ್ಮ ಕುಟುಂಬದ ಘಾತವೆ ಆಗಲಿದೆ. ನೆನಪಿನಲ್ಲಿಡು. ನಾ ನಿನಗೆ ಹೀಗೆ ನಡೆಯಲು ಬಿಡಲಾರೆ, ಛೇ. ಛೇ ಎಂದಿಗೂ ಇಲ್ಲ! ಈ ಹಾದಿಗೆ ಎಂದೂ ಹೋಗಲು ಕೊಡಲಾರೆ ನಿನ್ನ ಕೈಹಿಡಿದು ದರದರ ಹಿಂದೆ ಜಗ್ಗಿ ಕೊಳ್ಳುವೆನು, ಏನೆಂದು ತಿಳಿದಿ?"

ಮತ್ತು ಕೊನೆಗೆ ಮತ್ತೆ ಕಕುಲಾತಿಗೆ ಬಂದು ಅವಳೆಂದಳು. "ಅಲ್ಲೊ ಪೋರಾ, ನಿನ್ನ ಅಮ್ಮನ ಬಗ್ಗೆ ನೀನು ಇಷ್ಟೂ ಮಾಡಲಾರೆಯಾ? ನಾನೇನು ನಿನಗೆ ಅಡ್ಡದಾರಿಗೆ ಹಚ್ಚುವೆನೇ?

ಇದಕ್ಕೆ ಆಲ್ಬರ್ಟ ಇಲ್ಲವೆಂದು ತಲೆ ಅಲ್ಲಾಡಿಸಿದನು. ಆಗ ಅವ ಳೆಂದಳು," ಆಯಿತು, ಹಾಗಾದರೆ! ಕೊಡು ನನಗೆ ಮಾತು—ಇನ್ನು ಮುಂದೆ ನಾನೆಂದೂ ಈ ಹುಚ್ಚು ಧರ್ಮದ ತಳ್ಳಿಗೆ ಹೋಗುವದಿಲ್ಲ– ಎಂದು ನನಗೆ ಮಾತುಕೊಡು, ನೋಡುವಾ. ಹೂಂ, ನಿಜವಾಗಿಯೂ ಕೊಡು ಮಾತು. "
ಹೀಗೆಂದು ಅವಳು ತನ್ನ ಕೈಚಾಚಿ ಅದನ್ನು ಆಲ್ಬರ್ಟನ ಹೆಗಲ ಮೇಲೆ ಇಟ್ಟಳು.

ಮತ್ತು ಅವನನ್ನು ನಂಬಿಗೆಯಲ್ಲಿ ಹತ್ತಿರ ತೆಗೆದುಕೊಳ್ಳುವ ದನಿಯಲ್ಲಿ ಹೇಳಿದಳು. "ಆಲ್ಬ್ಯಾ, ನಿನಗೆ ನಿಜ ಹೇಳಲೆ? ಈ ಹುಚ್ಚು ನಮ್ಮ ಮನೆ ಹೊಕ್ಕಿತು. ಆಗಿನಿಂದಲೆ ನನ್ನ ಮನಸ್ಸಿಗೆ ಅನಿಸಿತು. ಇದೇನು ಒಳಿತಿಗೆ ಬಂದ ಲಕ್ಷಣವಲ್ಲ. ಇದರಿಂದ ಮನೆತನದ ಘಾತವೇ ಆಗಲಿದೆ. ನೀನಾ ದರೂ ಇದರಿಂದ ದೂರ ಉಳಿ! ಇಲ್ಲವಾದರೆ.... ಘಾತ ಕಟ್ಟಿಟ್ಟದ್ದೇ!"

ಮುಂದಿನದೆಲ್ಲ ಅವಳಿಗೆ ಕಾಣುತ್ತಿದ್ದಂತೆ, ಭವಿಷ್ಯ ಕಥನವನ್ನೇ ಅವಳು ಮಾಡುತ್ತಿದ್ದಂತೆ ಅನಿಸುತ್ತಿತ್ತು.

ಆಲ್ಬರ್ಟ ಅವಳಿಗೆ ಬೇಕಾದಂತೆ ಮಾತು ಕೊಟ್ಟನು. ಆಗ ಅವಳು ಶಾಂತಳಾದಳು. ಭಯಂಕರ ದರಿಯ ಕಡಿದಾದ ತಡಿಯಲ್ಲಿ ನಿಂತ ತನ್ನ ಮಗ ಇನ್ನು ಅಲ್ಲಿಂದ ತಿರುಗುವನು, ಅವನ ಘಾತವು ತಪ್ಪುವದು ಎಂದು ಅವಳಿಗೆ ಮನವರಿಕೆ ಆಯಿತು. ಮೆಲ್ಲ ಮೆಲ್ಲಗೆ ಅವಳು ಶಾಂತಳಾದಳು. ಕನಿಷ್ಟ ಆ ವೇಳೆಯ ಮಟ್ಟಿಗೆ!

* * * * *

ಅನಂತರ ಆಲ್ಬರ್ಟ ಅಬಿಟುರ ಪರೀಕ್ಷೆ ಅಂದರೆ ಶಾಲಾಂತ ಪರೀಕ್ಷೆ ಪಾಸಾದನು. ಆಗ ಮತ್ತೊಮ್ಮೆ ಮನೆಯಲ್ಲಿ ಒಂದು ಸಮಸ್ಯೆ ಎದ್ದು ನಿಂತಿತು.

ತನ್ನ ಮೊಮ್ಮಗ 'ಇಂಡೋಲಜಿ' ಅಂದರೆ 'ಭಾರತೀಯ ಸಂಸ್ಕೃತಿ' ಈ ವಿಷಯ ತೆಗೆದುಕೊಂಡು ಹೈಡೆಲಬರ್ಗ ವಿದ್ಯಾಪೀಠದಲ್ಲಿ ಕುಲದ ಪರಂಪರೆ ನಡೆಯಿಸಬೇಕು ಎಂದು ಮಾನಫ್ರೆಡ್ ಮ್ಯುಲರರಿಗೆ ಅನಿಸುತ್ತಿತ್ತು. ತನ್ನ ಮಗನ ಸ್ವಾಭಾವಿಕ ಒಲವು ಗಮನಿಸಿ ಆತ 'ಇಂಡೋಲಜಿ'ಯನ್ನೇ ಆಯ್ದುಕೊಳ್ಳಬೇಕೆಂದು ಫ್ರಾಂಜ ಮ್ಯುಲರರಿಗೂ ಅನಿಸುತ್ತಿತ್ತು. ಸ್ವತಃ ಆಲ್ಬರ್ಟನ ಒಲವೂ ಅತ್ತ ಕಡೆಗೆ ಇತ್ತು; ಆದರೆ ಏರ್ನಾ ಆ ವಿಷಯವನ್ನು ಮುರಿದು ಹಾಕಿದಳು ಮತ್ತು ತನ್ನ ಅಧಿಕಾರವನ್ನು ನಡೆಯಿಸಿ ಮಗನಿಗೆ 'ಹೊಖ್ಶ್ಯೂಲ' ಅಂದರೆ ತಾಂತ್ರಿಕ ಶಿಕ್ಷಣದ ಶಾಲೆಯಲ್ಲಿ ಹಾಕಿದಳು; ಮತ್ತು ಕೊನೆಗೆ ಆಲ್ಬರ್ಟ ಅದೇ ಶಾಖೆಯ ಪದವೀಧರನಾದನು.

'ಇಂಡೋಲಜಿ'ಯ ವಿಷಯ ತೆಗೆದುಕೊಂಡು ತನ್ನ ಮೊಮ್ಮಗ ಡಾಕ್ಟರೇಟ ಪದವಿ ಗಳಿಸಬೇಕು ಮತ್ತು ಭಾರತಕ್ಕೆ ಹೋಗಿ ಆ ವಿಷಯದ ಸರ್ವಶ್ರೇಷ್ಠ ಜ್ಞಾನವನ್ನೂ ಸಂಪಾದಿಸಬೇಕು—ಎಂಬ ಮಾನಫ್ರೆಡ್‌ನ ಇಚ್ಛೆ ಅಪೂರ್ಣವೇ ಉಳಿಯಿತು. ತಾಂತ್ರಿಕ ಶಿಕ್ಷಣವನ್ನು ಪೂರ್ತಿಗೊಳಿಸಿದ ಮೇಲೆ ಆಲ್ಬರ್ಟ ಕ್ರುಪ್ ಕಂಪನಿಯಲ್ಲಿ ಚಾಕರಿ ಹಿಡಿದನು. ಅವನಲ್ಲಿಯ ಬುದ್ಧಿಮತ್ತೆಯ ಮೂಲಕ ಆತ ಆ ಕಂಪನಿಯ ಒಂದು ವಿಭಾಗಕ್ಕೆ ಬೇಗನೇ ಪ್ರಮುಖನಾದನು. ಭರಭರನೆ ಅವನ ಪ್ರಗತಿ ಆಯಿತು. ವರಿಷ್ಠರ ಮರ್ಜಿಯನ್ನು

ಆತ ನೋಡ ನೋಡುತ್ತ ಗಳಿಸಿದನು. 'ಆಲ್ಬರ್ಟ ಮ್ಯುಲರ, ಕ್ರಪ್ ಕಂಪನಿಯ ಒಬ್ಬ ಭದ್ರ ಆಧಾರ ಸ್ತಂಭ "ಎಂದು ಎಲ್ಲರೂ ಹೇಳಹತ್ತಿದರು. ಅದರ ಜತೆಗೆ ವರಿಷ್ಠರ ವಿಶ್ವಾಸವೂ ಅವನ ಪಾಲಿಗೆ ಕೂಡಿ ಬಂತು. ಇದಕ್ಕೂ ಹೆಚ್ಚೇನು ಬೇಕು? ಚಾಕರಿಯ ಆರಂಭದ ಅವಸ್ಥೆಯಲ್ಲಿಯೇ ಈ ಭಾಗ್ಯ ಯಾರ ಪಾಲಿಗೆ ಬರುತ್ತದೆ?

ಆದರೆ ಈ ವಿಪರೀತ ಮಾರ್ಗದಲ್ಲಿ ತನ್ನ ಮೊಮ್ಮಗನ ಈ ಪ್ರಗತಿ ಯಾಗುತ್ತಿದ್ದದ್ದು ನೋಡಿ ಮಾನಫ್ರೆಡ್ ಮ್ಯುಲರರಿಗೆ ಏನೂ ಆನಂದವಾಗ ಲಿಲ್ಲ. ಇಂಥ ಸಂಗತಿಗಳತ್ತ ನೋಡುವ ಫ್ರಾಂಜ ಮ್ಯುಲರರ ವೃತ್ತಿಯೇ ತುಸು ತಟಸ್ಥನ, ತ್ರಯಸ್ಥನದಾಗಿ ಪರಿಣಮಿಸಿತ್ತು. ದಿನೇ ದಿನೇ ಅವರು ಸ್ಥಿತ ಪ್ರಜ್ಞರಾಗುತ್ತ ನಡೆದಿದ್ದರು ಮಳೆಗರೆಯುವದರಿಂದ ಸಮುದ್ರ ಉಕ್ಕೇರಿ ತುಳುಕುವದಿಲ್ಲ. ಇಲ್ಲವೆ ಅನಾವೃಷ್ಟಿಯಿಂದ ಅದು ಬತ್ತಿ ಹೋಗುವದಿಲ್ಲ. ಫ್ರಾಂಜ ಮ್ಯುಲರರ ಸ್ಥಿತಿಯೂ ಹಾಗೆಯೇ ಆಗಿತ್ತು. ಅವರಲ್ಲಿ ಹರ್ಷ-ಖೇದ ವೆರಡೂ ಉಳಿದಿಲ್ಲ. ಮನಸ್ಸಿನ ಹಲಗೆ ನಿಚ್ಚಳವಾಗಿತ್ತು. ಆ ಹಲಗೆಯ ಮೇಲೆ ಯಾವದೇ ಗೆರೆ ಗೀಚು ಮೂಡಿದ್ದಿಲ್ಲ. ತನ್ನ ಮಗನಾದರೂ ಒಂದು ಒಳ್ಳೆಯ ಹಾದಿಗೆ ಹತ್ತಿದನೆಂದು ಏರ್ನಾ ಸಮಾಧಾನದ ನಿಟ್ಟುಸಿರು ಎಳೆದಳು. ಅವಳು ಮನಸ್ಸಿನಲ್ಲಿಯೆ ಮತ್ತೆ ಮತ್ತೆ ಅಂದುಕೊಳ್ಳುತ್ತಿದ್ದಳು. "ನನ್ನ ಯೇಸೂ ನನ್ನ ಮೊರೆ ಕೇಳಿದನು. ಹುಚ್ಚು ಚೇಷ್ಟೆಗಳಿಂದ ನನ್ನ ಮಗ ದೂರ ವಾದನು. ಆತ ಸರಿ ದಾರಿಗೆ ಸೇರಿದನು. ಆತ ನನಗಿನ್ನೂ ಒಳ್ಳೆಯ ದಿನ ಗಳನ್ನು ಕಾಣಿಸುವನು."

ಏನಾಗುವದಿತ್ತೋ ಯಾರಿಗೆ ಗೊತ್ತು? ಆದರೆ ಆ ಪ್ರಸಂಗದಲ್ಲಿ ಯಂತೂ ಏರ್ನಾಳಿಗೆ ಬಾಳಿನಲ್ಲಿಯೇ ಮೊತ್ತ ಮೊದಲು ನಿಜವಾದ ಸಮಾ ಧಾನ ಲಭಿಸಿತು.

* * * *

ಇವೆಲ್ಲ ಘಟನೆಗಳು ನಡೆಯುತ್ತಿರುವಾಗ ಹೆಚ್ಚು ಕಡಿಮೆ ಇಪ್ಪತ್ತು ನಾಲ್ಕು ವರ್ಷಗಳ ಕಾಲ ಮುಂದೆ ಸರಿಯಿತು. ಎರಡು ತಪಗಳು ಸಂದವು. ಹಿಂದೂ ಧರ್ಮದ ಗೂಢ ತತ್ವಗಳ ಶೋಧವನ್ನು ಮಾಡುತ್ತ ಮಾನಫ್ರೆಡ್

ಮ್ಯುಲರ ಈಗ ತೀರ ಮುದುಕರಾಗಿದ್ದರು. ಅವರಿಗೆ ಇನ್ನೂ ಅಜ್ಞಾತದ ಪತ್ತೆ ಹಚ್ಚುವದಿತ್ತು. ಹಿಂದೂ ಧರ್ಮವು ಒಂದು ಮಹಾ ಸಾಗರದಂತೆ. ಆ ಸಿಂಧುವಿನೊಳಗಿನ ಒಂದು ಬಿಂದುವೂ ತನ್ನ ಕೈಗೆ ಹತ್ತಿಲ್ಲ-ಎಂಬ ಸಂಗತಿಯ ದುಃಖ ಅವರ ಮನಸ್ಸಿಗೆ ಅಂಟಿಕೊಂಡಿತ್ತು. ಹಿಂದೂ ಧರ್ಮದಲ್ಲಿ ಹೇಳಿದ ಮೋಕ್ಷದ ರಹಸ್ಯವು ಅವರಿಗೆ ಇನ್ನೂ ಕೈಗೆ ಸಿಕ್ಕಿದ್ದಿಲ್ಲ. ಆದರೆ ಅವರು ಮನಸ್ಸಿನಲ್ಲಿಯೇ ಅಂದು ಕೊಳ್ಳುತ್ತಿದ್ದರು, ಈ ಜನ್ಮದಲ್ಲಿ ತನಗೆ ಆ ಮೋಕ್ಷದ ಹಂಬಲ-ಬಯಕೆ ಆದರೂ ಉಂಟಾಯಿತು ಹಿಂದೂ ಧರ್ಮದಲ್ಲಿಯ ಆ ಬ್ರಹ್ಮತತ್ವದ ಧ್ಯಾಸವಾದರೂ ತನಗೆ ಹಾಗಿದೆ. ಈಗ ಮುಂದಿನ ಜನ್ಮದಲ್ಲಿ ಹೆಚ್ಚಿನದೇನಾದರೂ ಕೈಗೆ ಸಿಗುವದು ಖಚಿತ. ಅನೇಕ ಜನ್ಮಗಳ ಸುತ್ತು ಸುತ್ತಿದ ಹೊರತು ಆ ಮುಕ್ತಿಯ ಮಹೋತ್ಸವ ನೆರವೇರಲಾರದು.

ಹಿಂದೂ ಧರ್ಮದಲ್ಲಿ ಹೇಳಿದ ಪುನರ್ಜನ್ಮದ ತತ್ವದ ಮೇಲೆ ಅವರ ಪರಮ ವಿಶ್ವಾಸ ನೆಲಿಸಿತ್ತು. ಮೋಕ್ಷ ಲಾಭವೆಂಬುದು ಜನ್ಮ ಜನ್ಮಾಂತರದ ಪ್ರಕ್ರಿಯೆ. ಇದಕ್ಕಾಗಿ ಮನುಷ್ಯನು ಪ್ರತಿ ಜನ್ಮದಲ್ಲಿಯೂ ಪುಣ್ಯಸಂಚಯ ಮಾಡಬೇಕು. ಒಂದು ಜನ್ಮದ ಸಂಚಿತ ಮುಂದಿನ ಜನ್ಮದಲ್ಲಿ ಉಪಯೋಗಕ್ಕೆ ಬೀಳುತ್ತದೆ. ಒಂದು ಜನ್ಮದಲ್ಲಿಯ ಪುಣ್ಯದ ಬುತ್ತಿ ಮುಂದಿನ ಜನ್ಮದಲ್ಲಿ ಕೆಲಸಕ್ಕೆ ಬರುವದು. ಯಾವ ಜನ್ಮದಲ್ಲಿ ಪುಣ್ಯದ ಕೊಡ ತುಂಬಿ ತುಳುಕ ತೊಡಗುವದೋ ಅದೇ ಜನ್ಮದಲ್ಲಿ ಮನುಷ್ಯನಿಗೆ ಮೋಕ್ಷವು ದೊರೆಯುವದು. ಹಿಂದೂ ಧರ್ಮದ ಇದೆಲ್ಲ ತತ್ವಜ್ಞಾನವು ಅವರಿಗೆ ಈಗ ತಿಳಿದು ಬಂದಿತ್ತು ಹಿಂದೂ ಧರ್ಮದ ತತ್ವ ಜ್ಞಾನವನ್ನು ಎದೆಗೆ ಬಿಗಿದವಚಿ ಇಟ್ಟು ಕೊಂಡರೆ, ಮಾನವನು ಮರಣಕ್ಕೂ ಹೆದರುವದಿಲ್ಲ, ಅಲ್ಲ, ಆತ ಆನಂದದಿಂದ ಮರಣವನ್ನು ಎದುರಿಸುತ್ತಾನೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದರು. ಈ ಸಂಗತಿಯು ಅವರಿಗೆ ನೆನಪಾಯಿತು.

ಮರಣವು ಮಾನವೀ ಜೀವನದ ಒಂದು ಅವಸ್ಥೆ. ಈ ವಿಚಾರ ಅವರ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿತ್ತು. ಆದ್ದರಿಂದ ಅವರ ವೃತ್ತಿಯು ಈ ವಯಸ್ಸಿನಲ್ಲಿಯೂ ಶಾಂತವಾಗಿತ್ತು. ಮಾನವನ ಜೀವನಕ್ಕೆ ಎಲ್ಲಿಯಾದರೂ ಒಂದು ಮಿತಿ-ಮರ್ಯಾದೆ ಬೀಳುತ್ತದೆ. ಇದರ ಅರಿವು ಮಾಕ್ಸ್‌ಫ್ರೆಡ್ ಮ್ಯುಲ

ರರಿಗೆ ಇತ್ತೀಚೆಗೆ ಆಗಹತ್ತಿತ್ತು. ತನಗೀಗ ಮನೆಯಿಂದ ಕರೆಬಂದಿದೆ. ತನ್ನ ತಲೆ ಇಂದು ಮರಣದ ತೊಡೆಯ ಮೇಲೆ ವಿಶ್ರಮಿಸಬೇಕು.–ಇದನ್ನು ಅವರು ಮನದಾಳದಲ್ಲಿ ಅರಿತಿದ್ದರು. ಯಾವದು ನಿಜವಾಗಿಯೂ ಅಜ್ಞೇಯವೋ ಅದು ಅವರಿಗೆ ತಿಳಿದಿತ್ತು. ಹಿಂದೂ ಧರ್ಮದ ಬೆನ್ನಿಗೆ ತಾನು ಓಡೋಡಿ ಬಂದೆ. ಆದರಿಂದ ತನಗೆ ಮಾನವನ ಜೀವನ ಮರಣಗಳ ಸಮಗ್ರ ಜ್ಞಾನ ವಾಗಿದೆ—ಹೀಗೂ ಅವರ ಧಾರಣೆ ಆಗಿತ್ತು.

ಮಾನಫ್ರೆಡ್ ಮ್ಯುಲರ ಈಗ ಮುಂದಿನ ಮೆಟ್ಟಿಲ ತಯಾರಿಗೆ ಹತ್ತಿದರು.—ತೀರ ಶಾಂತವಾಗಿ, ಸುಖ ಸಂತೋಷದಿಂದ !

ಫ್ರಾಂಜ ಮ್ಯುಲರರಿಗೆ ಹೇಳಿ ಅವರು ಮನೆಯಲ್ಲಿ ಭಾಗೀರಥಿಯನ್ನು ತಂದು ಇಟ್ಟರು. ಡಿಟಮಾರ ಒಡೊಮನ್ ಭಾರತದಲ್ಲಿಯ ತಮ್ಮ ಮಿತ್ರರಿಗೆ ಬರೆದು ಈ ಗಂಗಾಜಲದ ಏರ್ಪಾಡು ಮಾಡಿದರು. ಮಾನಫ್ರೆಡ್ ಮ್ಯುಲರ ಮನೆಯ ಎಲ್ಲ ಮಂದಿಗೆ ತನ್ನ ಅಂತ್ಯಕಾಲದ ಕಲ್ಪನೆ ಕೊಟ್ಟಿದ್ದರು. “ನಾನು ಇಹಲೋಕದ ಯಾತ್ರೆಯನ್ನು ಮುಗಿಸಲಿದ್ದೇನೆ” ಎಂದು ಅವರು ಅಂದಾಗ ಏರ್ನಾಳಿಗೆ ಅದೊಂದು ಹುಚ್ಚೆಂದು ಅನಿಸಿತು. ಮಾನಫ್ರೆಡ್ ಬಹಳೇ ಮುದುಕರಾಗಿದ್ದರು. ಆದರೂ ಅವರ ಪ್ರಕೃತಿಯು ಗಟ್ಟಿ ಮುಟ್ಟಾಗಿ ಇತ್ತು. ಅವರ ಅಂತ್ಯಕಾಲ ಸಮೀಪಿಸಿದೆ ಎಂಬ ಕಲ್ಪನೆ ಯಾರಿಗೂ ಇದ್ದಿಲ್ಲ, ಆದರೆ ಸ್ವತಃ ಮಾನಫ್ರೆಡ್‌ರಿಗೆ ತನ್ನ ನಿಧನದ ಸುಳಿವು ಹತ್ತಿತ್ತು. ಭಾರತದಲ್ಲಿಯ ಅನೇಕ ಸಂತ ಮಹಾತ್ಮರು ಹೇಳಿ ಕೇಳಿ ತಮ್ಮ ಅಂತ್ಯವನ್ನು ಎದುರಿಸಿದ್ದರು. ಅದೇ ಪರಂಪರೆಯಲ್ಲಿ ತಾನು ಇದ್ದೇನೆ—ಎಂದು ಮಾನಫ್ರೆಡ್ ಮ್ಯುಲರರ ವಿಶ್ವಾಸವಿತ್ತು. ಆದ್ದರಿಂದ ಮನೆಯಲ್ಲಿಯ ಎಲ್ಲರನ್ನೂ ಹಾಗೂ ಮನೆಗೆ ಬರಹೋಗುವ ಮಂದಿಯನ್ನೂ ಬೀಳ್ಕೊಳ್ಳಲು ಅವರು ಆರಂಭಿಸಿದರು. ಏರ್ನಾ ಇದನ್ನು ವಿನೋದವಾಗಿಯೇ ಕಂಡಳು. ಹುಚ್ಚು ಲಹರಿಯ ವಿಲಾಸಗಳಲ್ಲಿ ಇದೊಂದು—ಎಂದು ಅವಳು ಎಣಿಸಿದಳು. ಆದರೆ ಫ್ರಾಂಜ ಮತ್ತು ಆಲ್ಬರ್ಟ ಇವರಿಬ್ಬರು ಮಾತ್ರ ಗದ್ಗದರಾದರು. ಅವರಿಬ್ಬರಿಗೆ ಅವರ ಕೊನೆಯ ಗಳಿಗೆ ಕಾಣಿಸ ಹತ್ತಿತು, ಮ್ಯುಲರ ಕುಟುಂಬದಲ್ಲಿಯ ಒಂದು ಗಂಟು ಬಿಚ್ಚಲಿತ್ತು, ಒಂದು ಕೊಂಡಿ

ಕಳಚಲಿತ್ತು. ಆ ಮೂಲಕ ಅವರಿಬ್ಬರೂ ಅಸ್ವಸ್ಥರಾದರು, ಏರ್ನಾಳ ದಿನ ಕ್ರಮವು ಮಾತ್ರ ಎಂದಿನಂತೆಯೆ ನಡೆದಿತ್ತು. ಅವಳ ಆಕ್ರೋಶ. ಸಿಟ್ಟು ಸೆಡವು, ಜಪ್ಪು–ನಪ್ಪು ದಿನದಂತೆಯೇ ನಡೆದಿದ್ದವು, ಈ ಮಳ್ಳರ ಸಂತೆಯಲ್ಲಿ ಅವಳು ಎಂದಿಗೂ ಸೇರಿಕೊಂಡಿದ್ದಿಲ್ಲ. ಅವಳು ವಿಶೇಷ ಅಸ್ವಸ್ಥಳಾದಂತೆ ಕಾಣಲಿಲ್ಲ. ಮನದಲ್ಲಿ ಅವಳಿಗೆ ಅನಿಸುತ್ತಿತ್ತು. ಮನೆಯೊಳಗಿನ ಒಂದು ಮರುಳು ಮುಗಿದೀತು, ಕಡಿಮೆ ಆದರೂ ಆದೀತು; ಮತ್ತು ಪ್ರಕಟವಾಗಿಯೇ ಅವಳು ಆಡಿದಳು. “ನನಗಾಗುವ ಕಾಟ, ಪರಪೀಡನೆ ಹೀಗೆ ಈಗಲೆ ಮುಗಿಯುವದೆಂದು ನನಗೇನೂ ಅನಿಸುವದಿಲ್ಲ. ಅವರ ಪ್ರಕೃತಿಯು ಲಕ್ಷಣ ಏನೂ ಕೆಟ್ಟಿಲ್ಲ. ನನ್ನ ಯಾತನೆಗಳು ಹಾಗೇ ಹೀಗೆ ತೀರುವದು ಅಷ್ಟರಲ್ಲಿಯೇ ಉಂಟು !”

*　　*　　*　　*　　*

ಕೊನೆಗೂ ಆ ದಿನವು ಮೂಡಿತು. ಆ ದಿವಸ ಮಾತ್ರ ಏರ್ನಾ ತುಸು ಗಾಬರಿ ಆದಳು. ಏನೇ ಆದರೂ ಅವರು ಅವಳ ಮಾವ. ಅವರ ಅಂತ್ಯ ಕಾಲ ತೀರ ಸಮೀಪಿಸಿದ್ದನ್ನು ನೋಡಿ ಅವಳ ಮನಸ್ಸು ಅಸ್ವಸ್ಥವಾಗದೆ ಉಳಿಯಬಹುದೇ?

ಸಂಜೆಯ ವೇಳೆ ಆಗಿತ್ತು. ಮಾನಫ್ರೆಡ್ ಕ್ಷೀಣ ದನಿಯಲ್ಲಿ ಅಂದರು. “ನನಗೀಗ ಮಾತಾಡಲು ಆಗುವದಿಲ್ಲ, ವಿಪರೀತ ದಣಿವು. ನನ್ನ ತಲೆ ದಿಂಬಿನ ಬಳಿಗೆ ಶಂಕರನ ಮೂರ್ತಿಯನ್ನಿಡಿ. ಮತ್ತು ಶ್ರೀ ಕೃಷ್ಣನ ಮೂರ್ತಿ ನನ್ನ ಹತ್ತಿರವಿಡಿ.”

ಮತ್ತು ಗಂಟಲು ಒಣಗಿ ಬಂದಾಗ ಅವರೆಂದರು. ಈ ಭಾಗೀರಥಿಯ ಮುಚ್ಚಳ ತೆಗೆಯಿರಿ, ಮತ್ತು ಆ ನೀರನ್ನು ನನ್ನ ಬಾಯಿಯಲ್ಲಿ ಹಾಕಿರಿ– ಕೊನೆಯ ತೀರ್ಥವೆಂದು! ”

ಡಿಟಮಾರ ಒಟೊಮಾನ್‌ರು ಗಂಗೆಯ ಗಿಂಡಿಯ ಮುಚ್ಚಳ ತೆರೆದರು. ಮತ್ತು ಫ್ರಾಂಜ ಮ್ಯುಲರರ ಕೈಗೆ ಗಂಗಾಜಲವನ್ನು ಕೊಟ್ಟರು. ಅವರು

ಸ್ವಲ್ಪ ಜಲವನ್ನು ತಂದೆಯ ಬಾಯಿಯಲ್ಲಿ ಹನಿಸಿದರು. ಆಮೇಲೆ ಆಲ್ಬರ್ಟನೂ ಅಜ್ಜನಿಗೆ ಗಂಗೆಯ ನೀರನ್ನು ಕುಡಿಸಿದನು.

ಮಾನಫ್ರೆಡ್ ಮ್ಯುಲರರು ಅಲ್ಬರ್ಟನ ಬೆನ್ನ ಮೇಲೆ ಕೈ ಆಡಿಸಿದರು. ಮಂದವಾಗಿ ನಕ್ಕರು ಮತ್ತು ತೀರ ಕೆಳದನಿಯಲ್ಲಿ ಅವರೆಂದರು, ಈಗ ಈ ತೀರ್ಥ ತೆಗೆದುಕೊಂಡೆ. ಈಗ ನಾನು ಆನಂದದಿಂದ ಕಣ್ಣು ಮುಚ್ಚುವೆ, ಗಂಗಾ ಸ್ನಾನಂ ಹರೇರ್ನಾಮ...."

ಮುಂದೆ ಅವರಿಂದ ಮಾತಾಡಲು ಆಗಲಿಲ್ಲ. ತಡೆದು ಅವರೆಂದರು, "ಗಂಗೆಯಲ್ಲಿ ಸ್ನಾನಮಾಡುವವರು ಶಿವರೂಪರಾಗುವರು, ವಿಷ್ಣುರೂಪ ರಾಗವರು."

ಯಾತರ ಮೂಲಕವೊ ಯಾರಿಗೆ ಗೊತ್ತು? ಅವರಿಗೆ ತುಸು ಹುರುಪೆನಿಸಿತು. ಮೊಮ್ಮಗನನ್ನು ಕುರಿತು ಅವರು ಒತ್ತಿದ ದನಿಯಲ್ಲಿ ಅಂದರು, "ಮುಕುಂದಾ ನಿನಗೆ ಗೀತೆಯನ್ನು ಓದಿ ಹೇಳಲು ಬಂದೀತೇ? ಗೀತೆಯೊಳಗಿನ ಒಂದು ಶ್ಲೋಕವನ್ನು ನನಗೆ ಓದಿ ಕೇಳಿಸು. ನೈನಂ ಛಿಂದಂತಿ ಶಸ್ತ್ರಾಣಿ...."

ಮುಂದೆ ಮಾತಾಡಲು ಆಗಲಿಲ್ಲ. ಅವರಿಗೆ ದಣಿವು ಅನಿಸಿತು.

ಆಗ ಮಗನ ಕಡೆಗೆ ಕಣ್ಣು ಕಿಕ್ಕರಿಸಿ ಅವರು ನೋಡಿದರು. ಫ್ರಾಂಜ ಮ್ಯುಲ್ಯರರ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕೊನೆಯದಾಗಿ ಅಂದರು. "ಫ್ರಾಂಜ, ನನ್ನದೊಂದೇ ಇಚ್ಛೆ–ಹಿಂದೂ ಧರ್ಮದಂತೆ ನನ್ನನ್ನು ದಹನ ಮಾಡಿರಿ ಮತ್ತ ನನ್ನ ಅಸ್ಥಿಗಳನ್ನು ಗಂಗೆಯಲ್ಲಿ ಹಾಕಿರಿ."

ಇದನ್ನು ಅನ್ನುವಾಗಲೆ ಅವರಿಗೆ ಅಪಾರ ಕಷ್ಟವಾಗುತ್ತಿತ್ತು. ಗಂಟಲೊಳಗೆ ಗೊಗ್ಗರು ಕೇಳಿಬರುತ್ತಿತ್ತು. ಕಣ್ಣಲ್ಲಿ ಮಾತ್ರ ಅದ್ಭುತ ತೇಜವು ತುಂಬಿತ್ತು. ಅವರ ಕೈ ಮಗನ ಕೈಯಲ್ಲಿ ಹಾಗೇಯೆ ಉಳಿಯಿತು ಮತ್ತು ಅದೆ ಅವಸ್ಥೆಯಲ್ಲಿ ಮಾನಫ್ರೆಡ್ ಮ್ಯುಲ್ಯರ ಈ ಜಗತ್ತನ್ನು ಬಿಟ್ಟು ಹೊರಟು ಹೋದರು.

ಹಿಂದೂ ಧರ್ಮದಲ್ಲಿ ಅಪರಂಪಾರ ಶ್ರದ್ಧೆಯುಳ್ಳ ಮ್ಯುಲರ ಕುಟುಂಬದ ಒಂದು ಕೊಂಡಿಯು ಕಳಚಿ ಬಿತ್ತು.

ಫ್ರಾಂಜ ಮತ್ತು ಆಲ್ಬರ್ಟ ಇಬ್ಬರೂ ಶೋಕಸಾಗರದಲ್ಲಿ ಮುಳುಗಿ ಹೋದರು. ಏನ್ನಾಳು ಮಾತ್ರ ಶಾಂತವಾಗಿದ್ದಳು. ಅವಳಿಗೆ ನಿಜವಾಗಿ ಏನನಿಸುತ್ತಿತ್ತು-ಎಂಬುದು ಅವಳದು ಅವಳಿಗೆ ತಿಳಿಯುತ್ತಿದ್ದಿಲ್ಲ. ಅಂದಾಗ ಉಳಿದವರ ಪಾಡೇನು ? ಹುಟ್ಟು ಇದ್ದಲ್ಲಿ ಸಾವು-ಈ ತತ್ವದಿಂದ ನಡೆಯು ವವರೇ ಬಹಳ ಮಂದಿ, ಅವರಿಗೆ ಫ್ರಾಂಜ ಮತ್ತು ಆಲ್ಬರ್ಟ ಈ ತಂದೆ ಮಕ್ಕಳ ದುಃಖದ ಕಲ್ಪನೆ ಎಲ್ಲಿಂದ ಬರಬೇಕು?

* * * *

ಫ್ರಾಂಕ ಫುರ್ಟ ವಿಮಾನ ನಿಲ್ದಾಣದಲ್ಲಿ ಫ್ರಾಂಜ ಮ್ಯುಲರರಿಗೆ ಪ್ರಮೋದ ತಲಗೇರಿ ಭೆಟ್ಟಿಯಾದನು. ಆಗ ಅವರು ಅವನಿಗೆ ಆಶ್ಚರ್ಯ ದಿಂದ ಕೇಳಿದರು. "ಎಲ್ಲಿಗೆ ಹೊರಟಿಯೋ ಇದೆಲ್ಲ ಗುಡಿಚಾಪೆ ಕಟ್ಟಿ ಕೊಂಡು"?

ಪ್ರಮೋದ ತಲಗೇರಿ ಅಂದ, "ಸರ್ ನನ್ನ ವಿದ್ಯಾಭ್ಯಾಸ ಮುಗಿಯಿತು. ನಾನೀಗ ತಿರುಗಿ ಭಾರತಕ್ಕೆ ಹೊರಟೆ!"

"ಇಷ್ಟು ಲಗು"?

"ಲಗು ಏನು? ಆದವಲ್ಲ ನಾಲ್ಕು ವರ್ಷ! ಇನ್ನೂ ಎಷ್ಟು ಕಾಲ ಉಳಿ ಯುವದು ಪರದೇಶದಲ್ಲಿ"?

"ಅದು ಸರಿಯೋ ಅನ್ನು. ಭಾರತದಂಥ ತಾಯ್ನಾಡು ಬಿಟ್ಟು ಎಷ್ಟು ದಿನವೆಂದು ದೂರ ಉಳಿಯುವದು? ಈಗ ತಾಯ್ನಾಡಿಗೆ ಹೊರಟಿರುವಿ, ಭಾಗ್ಯವಾನನು ನೀನು, ಮಿಸ್ಟರ ತಲಗೇರಿ !"

ಪ್ರಮೋದ ತಲಗೇರಿಯು ಫ್ರಾಂಜ ಮ್ಯುಲರರನ್ನು ಆಶ್ಚರ್ಯದಿಂದ ಕೇಳಿದನು. ಸರ್, ಕ್ಷಮಿಸಿ. ಆದರೆ ತಾವು ಎಲ್ಲಿಗೆ ಹೊರಟಿದ್ದೀರಿ"?

"ನಿಮ್ಮ ದೇಶಕ್ಕೇ ಹೊರಟಿದ್ದೇನೆ. ನನ್ನ ತಂದೆಯವರ ಅಸ್ಥಿ ವಿಸರ್ಜನೆ ಗಾಗಿ-ನಿಮ್ಮ ಆ ಪವಿತ್ರ ಗಂಗೆಯಲ್ಲಿ!"

ಏನ್ನಾಳ ಹಣೆಯ ಮೇಲಿನ ಹುಬ್ಬುಗಂಟು ಪ್ರಮೋದನಿಗೆ ಸ್ಪಷ್ಟವಾಗಿ ತೋರಿದವು. ಆತ ಏನೂ ಮಾತಾಡಲಿಲ್ಲ. ಇಷ್ಟೇ ಅಂದನು, "ತಮ್ಮ ತಂದೆ

ಯವರು ತೀರಿಕೊಂಡರು! ಬಹಳ ಕೆಡುಕೆನಿಸಿತು. ನಮಗೆ ಅವರಲ್ಲಿ ಬಹಳ ಆದರವಿತ್ತು-ಆತ್ಮೀಯತೆ ಅನಿಸುತ್ತಿತ್ತು !"

"ಮತ್ತೆ ಅವರಿಗೂ ನಿಮ್ಮ ಬಗ್ಗೆ, ನೀವು ಭಾರತೀಯರಲ್ಲವೇ? ಯಾವ ದೇಶದಲ್ಲಿ ಗಂಗೆಯು ಹರಿಯುವದೋ ಅದು ಪವಿತ್ರ ದೇಶ!"

ಮತ್ತು ಸ್ವಲ್ಪ ಹೊತ್ತಿನ ನಂತರ ಫ್ರಾಂಜ ಮ್ಯುಲರ ತಲಗೇರಿಗೆ ಕೇಳಿದರು. "ನಿಮ್ಮ ದೇಶದಲ್ಲಿ ಗಂಗೆಗೆ ಬಹಳ ಮಹತ್ವವಿದೆಯಲ್ಲವೆ"?

ಪ್ರಮೋದ ತಲಗೇರಿ ನಕ್ಕು ಅಂದನು. "ಇದು ಅವರವರ ಭಾವನೆಯ ಪ್ರಶ್ನೆ. ನಮ್ಮ ವೈಜ್ಞಾನಿಕ ದೃಷ್ಟಿಯಿಂದ ಹೇಳುವದಾದರೆ ಗಂಗಾಜಲವು ನಿರ್ಜಂತುಕ. ಅದು ವರ್ಷಗಟ್ಟಲೆ ಕೆಡದೆ ಉಳಿಯುತ್ತದೆ.. ಆ ನೀರಿನಲ್ಲಿ ಮದ್ದಿನ ಗುಣವಿದೆ. ಆದ್ದರಿಂದ ಅದನ್ನು ಪವಿತ್ರವೆಂದು ಭಾವಿಸುತ್ತಿರ ಬಹುದು.

ನಡುವೆಯೆ ಫ್ರಾಂಜ ಮ್ಯುಲರ ಕೇಳಿದರು. "ಆದರೆ ಗಂಗೆಯಲ್ಲಿ ಸ್ನಾನ ಮಾಡಿದ ಮಾತ್ರಕ್ಕೆ ಮನುಷ್ಯನಿಗೆ ಮೋಕ್ಷಸಿಗುವದೆಂಬುದು ಎಷ್ಟು ಮಟ್ಟಿಗೆ ಸತ್ಯ? ಮಾನಫ್ರೆಡ್‌ರು ಅನ್ನುತ್ತಿದ್ದರು ಯಾವಾಗಲೂ-"

ಏನ್ರಾಳಿಗೆ ಅನಿಸಿತು, ಇನ್ನು ಈ ಗಂಗಾ ಪುರಾಣ ಸುರುವಾಗುವದು! ಮಾವನ ಅಸ್ಥಿಗಳ ಅಸ್ತಿತ್ವವೂ ತನ್ನನ್ನು ಕಾಡಹತ್ತಿ.ದೆ—ಎಂದು ಅವಳಿಗೆ ಸುಮ್ಮನೆ ಅನಿಸಿತು.

ಫ್ರಾಂಜ ಮುಂದೆ ಮಾತಾಡುವವರು ಅಷ್ಟರಲ್ಲಿ ಪ್ರಮೋದ ತಲಗೇರಿ ಅಂದನು. "ನಾ ಆಗಲೆ ಅಂದಿಲ್ಲವೆ-ಇದು ಅವರವರ ಭಾವನೆಯ ಪ್ರಶ್ನೆ ಶ್ರದ್ಧೆಯ ಪ್ರಶ್ನೆ."

"ಆದರೆ ನಿಮ್ಮ ದೇಶದಲ್ಲಿ ಚಮತ್ಕಾರಗಳು ಬಹಳ ಸಿಗುತ್ತವೆ ನೋಡಲಿಕ್ಕೆ ಅಲ್ಲವೆ ?"

"ಸರ್. ಇದೂ ಶ್ರದ್ಧೆಯದೆ ಅಂಶ. ಆದರೆ ನಮ್ಮ ದೇಶದಲ್ಲಿ ಚಮತ್ಕಾರಗಳು ಒದಗುತ್ತವೆ. ಈ ಮಾತು ಮಾತ್ರ ಸತ್ಯ. ಒಂದು ಜನ್ಮ ಸಾಲಲಿಕ್ಕಿಲ್ಲ ಅವನ್ನು ನೋಡಲಿಕ್ಕೆ !"

ಇದನ್ನು ಕೇಳಿ ಫ್ರಾಂಜ ಮ್ಯುಲರರ ಇಡಿಯ ಮೈ ನಿಮಿರಿತು, ಏರ್ನಾಳ ಮನಸ್ಸಿಗೆ ಮಾತ್ರ ಏನೋ ಅಶುಭದ ಕಲ್ಪನೆಯೊಂದು ಸೋಂಕಿ ಹೋಯಿತು.

ಇಷ್ಟು ಹೇಳಿ ಏನೋ ನೆನಪಾದಂತೆ ಮಾಡಿ ಪ್ರಮೋದ ತಲಗೇರಿ ಎದ್ದನು ಮತ್ತು ಅಂದನು. "ಸರ್, ನಾನು ಸ್ವಲ್ಪ ಆ 'ಡ್ಯೂಟಿ ಫ್ರೀ ಶಾಪಿ' ನಲ್ಲಿ ಹೋಗಿ ಬರುತ್ತೇನೆ ಕೆಲವು ಚಿತ್ರಗಳನ್ನು ಕೊಂಡುಕೊಳ್ಳುವದಿದೆ. ಸಿಗ ಬಹುದೇ ?"

"ಎಂಥ ಚಿತ್ರಗಳು ?" ಫ್ರಾಂಜ ಮ್ಯುಲರರ ಈ ಪ್ರಶ್ನೆಗೆ ಪ್ರಮೋದ ತಲಗೇರಿ ಅಂದನು. "ನನ್ನ ಮಿತ್ರನೊಬ್ಬನಿಗೆ ಸ್ಟಾಂಪುಗಳನ್ನು ಕಲೆಹಾಕುವ ಹವ್ಯಾಸ. ಬೀಟಹೋವ್ಹನ್, ಹೆಂಡೆಲ, ಬ್ಯಾಂಗಲರ ರಿಚರ್ಡ ಇವರ ಚಿತ್ರ ಗಳ ಸ್ಟಾಂಪುಗಳನ್ನು ನಾನು ಕೂಡಿಸಿದ್ದೇನೆ. ಆದರೆ ಫ್ರಾಂಜ ಮಾರ್ಕನ ಕೆಲವು ಚಿತ್ರಗಳು ಬೇಕಾಗಿವೆ. ಫ್ರಾಂಜ ಮಾರ್ಕ ಒಬ್ಬ ಮಹಾನ್ ಗೂಢ ಚಿತ್ರಕಾರ ನಲ್ಲವೆ ? ನನಗಂತೂ ಅವನ ಚಿತ್ರಗಳ ಅರ್ಥವೇ ಆಗದು. ಆದರೆ ನನ್ನ ಮಿತ್ರನಿಗೆ ಈ ಚಿತ್ರಗಳು ಬಹಳ ಬೆಲೆಯುಳ್ಳವೆನಿಸುತ್ತದೆ. ನಮ್ಮ ದೇಶದಲ್ಲಿ ಏನು ಚಿತ್ರಕಾರರು ಕಡಿಮೆಯೇ ?"

ಏರ್ನಾ ಒಮ್ಮೆಲೆ ಅಂದಳು. "ನಮ್ಮ ಧರ್ಮದಲ್ಲಿ ತತ್ವಜ್ಞಾನಿಗಳೇನು ಕಡಿಮೆಯೇ ? ಆದರೆ ತಮ್ಮದಕ್ಕಿಂತ ಅನ್ಯರದೆಲ್ಲ ಶ್ರೇಷ್ಠವೆನಿಸುವದು ಮಾನ ವನ ಸ್ವಭಾವವೇ ಆಗಿರುವದೇನೋ, ಯಾರಿಗೆಗೊತ್ತು ?"

ಅವಳ ಮಾತಿನ ವ್ಯಂಗಕ್ಕೆ ಪ್ರಮೋದ ತಲಗೇರಿಗೆ ಅರ್ಥವಾಯಿತು. ಆದರೆ ಮಾತಾಡದೆ ಆತ ಚಿತ್ರಗಳನ್ನು ನೋಡಲು ಎದ್ದು ಹೋದನು.

ವಿಮಾನ ಹೊರಡುವ ಸಮಯ ಸಮೀಪಿಸಿತು. ಫ್ಲಾಯಿಟಿನ ಘೋಷಣೆ ಆಯಿತು. "ಏರ ಇಂಡಿಯಾ"ದ ವಿಮಾನಿನಲ್ಲಿ ಹೋಗುವ ಪ್ರವಾ ಸಿಗಳು ಹೊರಟರು. ಪ್ರವೇಶದ್ವಾರದಲ್ಲಿ ತಿಕೀಟುಗಳ ತಪಾಸಣೆ ಆಯಿತು. ಪ್ರಮೋದ ತಲಗೇರಿ ತ್ವರೆಯಿಂದ ಮುಂದೆ ಬಂದನು. ತಾಯ್ನಾಡಿಗೆ ಹೋಗಲು ಆತ ಅತಿ ಆತುರನಾದಂತೆ ತೋರಿದನು. ತಮ್ಮ ತಂದೆಯ

ಅಂತಿಮ ಇಚ್ಛೆಯಂತೆ ಅವರ ಅಸ್ಥಿವಿಸರ್ಜನೆ ಮಾಡಲಿಕ್ಕೆ ಫ್ರಾಂಜ ಮ್ಯುಲರ ಭಾರತಕ್ಕೆ ಹೋಗಲು ಅಷ್ಟೇ ಉತ್ಸುಕರಾಗಿದ್ದರು.

ಪ್ರವೇಶ ದ್ವಾರದೊಳಗಿಂದ ಅವರು ಒಳಗೆ ಹೋಗಲು ಹೊರಡಬೇಕು ಅಷ್ಟರಲ್ಲಿ ಏರ್ನಾ ಅವರಿಗೆ ಸಣ್ಣದನಿಯಲ್ಲಿ ಅಂದಳು. "ಇದು ನಿಮ್ಮ ಕೊನೆಯ ಹುಚ್ಚೆಂದೇ ತಿಳಿಯಿತು. ಗಂಗೆಯಲ್ಲಿ ಎಲುಬು ಹಾಕುವಿರಂತೆ! ನಮ್ಮ ತಾತ ಮುತ್ತಾತರು ಮಾಡದಿದ್ದುದನ್ನು ನಾವು ಮಾಡುವದು! ಇನ್ನು ಮುಂದೆ ಮಾತ್ರ ನಮ್ಮ ಮನೆಯಲ್ಲಿ ಇಂಥ ರೀತಿಗಳನ್ನು ನಾನು ನಡೆಯಗೊಡಲಾರೆ. ಇನ್ನು ಹೋಗಿ ಬನ್ನಿ. ಗುಡ್‌ಬಾಯ್, ಡಿಯರ್!"

ವಿಮಾನವು ಆಕಾಶಕ್ಕೆ ನೆಗೆಯಿತು. ಫ್ರಾಂಜ ಮ್ಯುಲರ ಆ ವಿಮಾನಿನಿಂದ ಭಾರತಕ್ಕೆ ಹೋಗಲು ಹೊರಟಿದ್ದರು.

ವಿಮಾನದ ಗರಗರ ಸದ್ದು ಕೇಳಿಸುವದು ನಿಂತಿತು. ಆದರೂ ಏರ್ನಾ ಆಕಾಶದತ್ತ ದಿಟ್ಟಿಸುತ್ತ ನಿಂತಿದ್ದಳು. ಅವಳಿಗೆ ಒಮ್ಮೆಲೆ ಒಂಟಿ-ಒಂಟಿ ಅನಿಸಿತು. ತಾನು ಎಲ್ಲಿ ಇದ್ದೇನೆ, ಯಾತಕ್ಕಾಗಿ ಬಂದಿದ್ದೇನೆ—ಇದರ ಎಚ್ಚರವೆ ಅವಳಿಗೆ ಉಳಿಯಲಿಲ್ಲ. ಆಕಾಶದ ಕಡೆಗೆ ನಟ್ಟು ಕಣ್ಣಿನಿಂದ ನಿರ್ವಿಕಾರ ಮನದಿಂದ ಅವಳು ನೋಡುತ್ತಲೇ ಇದ್ದಳು. ವಿಮಾನವು ಎಂದೋ ಕಣ್ಮರೆಯಾಗಿ ಹೋಗಿತ್ತು.

ಭವಿಷ್ಯದ ಗರ್ಭದಲ್ಲಿ ಇಣಕಿ ನೋಡಲು ಆಗುತ್ತಿದ್ದರೆ!

*   *   *

## ಭಾಗ : ೨

"ಪ್ರಿಯ ಏನ್ನಾ—"

ಫ್ರಾಂಜ ಮ್ಯುಲರ ಇಷ್ಟು ಸಂಬೋಧನೆಯ ಮಾತು ಬರೆದರು. ಮುಂದೆ ಅವರ ಲೆಕ್ಕಣಿ ತಡೆಯಿತು.

ರಾತ್ರಿಯ ಹೊತ್ತು, ಆಶ್ರಮದಲ್ಲಿ ಒಂದು ಕೋಣೆಯಲ್ಲಿ ಕಾಲು ದೀಪದ ಬೆಳಕಿನಲ್ಲಿ ಫ್ರಾಂಜ ಮ್ಯುಲರ ಇದುರಿಗೆ ಕಾಗದದ ಹಾಳೆ ಇಟ್ಟು ಕೊಂಡು ಕೂತಿದ್ದರು. ತಮ್ಮ ಹೆಂಡತಿಗೆ ಅವರು ಪತ್ರ ಬರೆಯುವವ ರಿದ್ದರು. ಆ ಪತ್ರದಲ್ಲಿ ಯಾವ ಮಜಕೂರ ಬರೆಯ ಬೇಕೆಂಬುದನ್ನು ಅವರು ಮನಸ್ಸಿನಲ್ಲಿ ಗೊತ್ತು ಮಾಡಿಕೊಂಡಿದ್ದರು. ಆದರೆ ಮನದಲ್ಲಿಯ ವಿಚಾರ ಕಾಗದದ ಮೇಲೆ ಇಳಿಯಲೊಲ್ಲವು. ಅವರ ಲೆಕ್ಕಣಿ ತಡೆದು ನಿಂತಿತು.

ತಮ್ಮ ಪ್ರೀತಿಯ ತಂದೆಯ ಅಸ್ಥಿಗಳು ಗಂಗೆಯಲ್ಲಿ ಗೈದ ವಿಸರ್ಜನೆ, ಗಂಗಾತೀರದಲ್ಲಿ ಕಂಡ ವಿವಿಧ ದೃಶ್ಯಗಳು, ಅಲ್ಲಿ ನೋಡಿದ ಕೇಳಿದ ಅಸಂಖ್ಯ ಸಂಗತಿಗಳು, ಗಂಗೆಯ ಧವಲ ಜಲಪ್ರವಾಹದ ಮಹಿಮೆ, ಪ್ರವಾಸದಲ್ಲಿ ಭೆಟ್ಟಿ ಯಾದ ಒಬ್ಬ ಚೆಲುವೆಯಾದ ಹುಡುಗಿಯ ಕಥೆ, ಈ ಪವಿತ್ರ ಆಶ್ರಮದ ಮಾಹಾತ್ಮ್ಯ. ಇಂಥ ಎಷ್ಟೆಷ್ಟೋ ಸಂಗತಿಗಳನ್ನು ಏನ್ನಾಳಿಗೆ ಪತ್ರದಲ್ಲಿ ಅವರು ತಿಳಿಸಲಿದ್ದರು. ಆದರೆ ಈ ಆಶ್ರಮಕ್ಕೆ ಬಂದ ಮೇಲೆ ಅವರು ಕೈಕೊಂಡ ನಿರ್ಣಯವನ್ನು ಏನ್ನಾಳಿಗೆ ತಿಳಿಸುವದು ಅವರಿಗೆ ಸ್ವಾಭಾವಿಕವಾಗಿಯೇ

ಶಕ್ಯವಿದ್ದಿಲ್ಲ ಅವರು ವಿಚಾರ ಪೂರ್ವಕವಾಗಿ ಕೈಗೊಂಡ ನಿರ್ಣಯು ಮತ್ತು ಮನಸಾ ಖಚಿತ ಗೊಳಿಸಿದ ನಿಶ್ಚಯ ಅವಳಿಗೆ ತಿಳಿಸಲೇ ಬೇಕಿತ್ತು. ಆದರೆ ಆ ನಿರ್ಣಯುವನ್ನು ಅವಳಿಗೆ ತಿಳಿಸುವದಾದರೂ ಹೇಗೆ ? ಅವರ ಈ ನಿರ್ಣಯ ತಿಳಿದಾಗ ಅವಳಿಗೆ ಏನೆನಿಸಬಹುದೆಂಬ ಪ್ರಶ್ನೆ ಅವರ ಇದುರಿಗೆ ಇದ್ದೇ ಇಲ್ಲ. ಆದರೆ ಅವರ ನಿರ್ಣಯುವು ಅವಳ ನಿರ್ಣಯುವನ್ನು ಅವಲಂಬಿಸಿ ಇತ್ತು. ಅವಳು ಒಪ್ಪಿಗೆ ಕೊಡದಿದ್ದರೆ ? ಅವರ ನಿರ್ಣಯ ನೀರು ಪಾಲಾಗುತ್ತಿತ್ತು. ಅವರು ಕೈಗೊಂಡ ನಿರ್ಣಯಕ್ಕೆ ಅವಳ ಸಮ್ಮತಿಯು ಬೇಕಿತ್ತು. ಅವಳ ಸಮ್ಮತಿ ಇಲ್ಲದೆ ಅವರು ಒಂದು ಹೆಜ್ಜೆಯನ್ನೂ ಮುಂದಿಡುವಂತೆ ಇದ್ದಿಲ್ಲ. ಆದ್ದರಿಂದಲೆ ಅವರ ಮನಸ್ಸು ಗೊಂದಲಕ್ಕೆ ಸಿಲುಕಿತ್ತು. ಅವರು ತಮ್ಮ ಪತ್ರದ ಆರಂಭಕ್ಕೆ ಬರೆದ "ಪ್ರೀಯ ಏನ್ನಾ"–ಈ ಸಂಬೋಧನೆಯ ಮೇಲೆ ಮತ್ತೆ ಮತ್ತೆ ಕಣ್ಣು ಹಾಯಿಸಿದರು. ಮತ್ತು ಪತ್ರವನ್ನು ಬರೆಯಲು ಆರಂಭಿಸಿದರು.

"ನಿನಗೆ ಹೇಗೆ ಬರೆಯಲಿ, ಏನು ಬರೆಯಲಿ. ಇದೇ ನನಗೆ ತಿಳಿಯದಾಗಿದೆ, ಆದರೆ ಯಾವ ಸಂಗತಿಗಳು ನಿನಗೆ ತಿಳಿದಿರಲೇಬೇಕೋ ಅವನ್ನು ಬರೆದು ತಿಳಿಸುವದು ನನ್ನ ಪಾಲಿಗೆ ಬಿದ್ದಿದೆ. ನಾನು ಕೇವಲ ನಿರುಪಾಯನಾಗಿದ್ದೇನೆ ! ನೋಡು."

ಇಷ್ಟು ಬರೆದು ಅವರು ಮತ್ತೆ ತಡೆದರು. ಏನು ಮಾಡಿದರೂ ಲೆಕ್ಕಣಿಗೆ ಗತಿಯೇ ಬರಲೊಲ್ಲದು. ಅದು ತಡೆದು ನಿಂತಿತು. ಮನಸ್ಸಿನಲ್ಲಿ ವಿಚಾರಗಳ ಓಡಾಟ ನಡೆದಿತ್ತು. ಆದರೆ ಲೆಕ್ಕಣಿ ಕಾಗದದ ಮೇಲೆ ಓಡಲೊಲ್ಲದು. ಅವರು ತೀರ ನಿರುಪಾಯರಾಗಿದ್ದರು.

ಇದುರಿನ ಹಾಳೆಯ ಮೇಲಿನ ಕಣ್ಣು ತೆಗೆದು ಅವರು ಕೂತಲ್ಲಿಂದಲೆ ಬಲಗಡೆಯ ಕಿಟಕಿಯಿಂದ ಹೊರಗೆ ನೋಡಿದರು. ಸಂಕಷ್ಟಿಯ ಚತುರ್ಥಿಯ ಚಂದ್ರ ಬಿಂಬವು ಪೂರ್ವ ಕ್ಷಿತಿಜದಲ್ಲಿ ಆದಾಗಲೆ ಬಂದು ನಿಂತಿತ್ತು, ಮತ್ತು ಚಂದ್ರನ ಶೀತಲ ಕಿರಣ ಶಲಾಕೆಗಳು ಕತ್ತಲೆ ಸುತ್ತಿಕೊಂಡಿದ್ದ ತೆಂಗು–ಅಡಿಕೆ, ಮಾವು ಮುಂತಾದ ಮರಗಳ ನಿಬಿಡವಾದ ವೃಕ್ಷರಾಜಿಯನ್ನು ಹೊಕ್ಕಿದ್ದವು. ಆಕಾಶದ ಮೇಲೆ ಬೆಳ್ಳಿಯ ಪಟವನ್ನು ಹೊದ್ದಿದಂತೆ ಭಾಸ

ವಾಗುತ್ತಿತ್ತು. ಫ್ರಾಂಜ ಮ್ಯುಲರರಿಗೆ- ಆ ದೃಶ್ಯವು ಪ್ರೈಮರೆಯಿಸುವಂತೆ ಕಂಡಿತು. ಹೈಡೆಲ ಬರ್ಗದ ಆಕಾಶದಲ್ಲಿ ಇಂಥ ಬೆಳದಿಂಗಳು ಅರಳಿದ್ದೂ ಅವರು ಎಂದೂ ಕಂಡಿದ್ದಿಲ್ಲ. ಅವರಿಗೆ ಆ ದೃಶ್ಯವೇ ಹೊಸತು. ಮನಸ್ಸಿಗೆ ಮೋಹ ಬೀರುವಂತಹದು. ಫ್ರಾಂಜ ಮ್ಯುಲರ ಮನದಲ್ಲಿಯೆ ಅಂದರು. "ಈ ಪೂರ್ವದ ಕಡೆಯ ಭರತ ಭೂಮಿಯ ಜ್ಞಾನ ಪ್ರಕಾಶವೂ ಪಶ್ಚಿಮದ ರಾಷ್ಟ್ರಗಳ ಅಜ್ಞಾನಾಂಧಕಾರದಲ್ಲಿ ಹೀಗೆಯೇ ಹೊಕ್ಕುತ್ತಿರಬೇಕು.

ಇಂದೇ ಅಲ್ಲ, ಭಾರತದಲ್ಲಿ ಹೆಜ್ಜೆ ಇಟ್ಟಂದಿನಿಂದಲೂ ಬೇರೆ ಬೇರೆ ಪ್ರಸಂಗಗಳಲ್ಲಿ ಅವರ ಮನಸ್ಸಿನಲ್ಲಿ ಇದೇ ವಿಚಾರ ಸುಳಿದು ಹೋಗಿತ್ತು. .... ಈ ಹಿಂದೂ ಭೂಮಿಯಲ್ಲಿ ಸೂರ್ಯ ಚಂದ್ರರ ಮುಕ್ತ ಪ್ರಕಾಶದ ದುಂದು ಚೆಲ್ಲಾಟ ಎಲ್ಲೆಡೆಯಲ್ಲಿಯೂ ಇರುತ್ತದೆ. ಮತ್ತು ಆ ಮೂಲಕವೆ ಈ ಭೂಮಿಯಲ್ಲಿ ಜ್ಞಾನದ ಸಾಮ್ರಾಜ್ಯ ನಿರಂತರವಾಗಿ ನಡೆದಿದೆ–ಎಂಬ ವಿಚಾರ ಫ್ರಾಂಜ ಮ್ಯುಲರ ಮನಸ್ಸಿನಲ್ಲಿ ಬೇರೂರಿತ್ತು. ಬಾಂಕೀಪುರ ದಲ್ಲಿ ಇದ್ದಾಗ, ಒಂದು ಮುಂಜಾನೆ ಇಡಿಯ ಸೃಷ್ಟಿಯು ಚಂದ್ರ ಪ್ರಕಾಶದಲ್ಲಿ ಮಿಂದೆದ್ದಾಗ, ಆ ನಸುಕಿದಲ್ಲಿ ಅವರ ಮನಸ್ಸಿನಲ್ಲಿ ಇದೇ ವಿಚಾರವು ಬಂದಿತ್ತು. ಮುಂದೆ ಕಾಶಿಯಲ್ಲಿ ಇದ್ದಾಗಲೂ ಅವರು ನಡು ಹಗಲಲ್ಲಿ ಸೂರ್ಯ ಪ್ರಕಾಶದ ಚಮತ್ಕಾರವನ್ನು ಬಂದು ನೋಡಿದ್ದರು. ಆ ವೇಳೆಗೂ ಈ ತನಗೆ ಭರತ ಭೂಮಿಯ ಜ್ಞಾನದ ಒಂದು ಗುರುಕೀಲಿ ದೊರಕಿದೆ ಎಂಬ ಕಲ್ಪನೆಯಿಂದ ಅವರು ಮನಸ್ಸಿನಲ್ಲಿಯೇ ಅಂದಿದ್ದರು "ಇದೇ ಚಂದ್ರ ಸೂರ್ಯರ ಪ್ರಕಾಶ ದಿಂದ ಆ ಭೂಮಿಯಲ್ಲಿ ಜ್ಞಾನದ ಪವಿತ್ರ ರಾಜ್ಯವು ನಡೆಯುತ್ತಿದೆ. ಈ ದೃಶ್ಯವು ನಮಗೆ ನಮ್ಮ ತಾಯ್ನಾಡಿನಲ್ಲಿ ವಿಶೇಷವಾಗಿ ಕಾಣ ಸಿಗುವದಿಲ್ಲ."

ಅವರ ಕೈಯೊಳಗಿನ ಲೆಕ್ಕಣಿ ತಡೆಯಿತು. ಮತ್ತು ಭಾರತದಲ್ಲಿ ಕಾಲಿಟ್ಟಂದಿನಿಂದ ಒಂದೊಂದೇ ಘಟನೆಗಳು ನೆನಪಾಗ ಹತ್ತಿದವು.

ಸರಿಯಾಗಿ ಎರಡು ತಿಂಗಳ ಹಿಂದೆ ದಿಲ್ಲಿಯ ಪಾಲಂ ವಿಮಾನ ನಿಲ್ದಾಣ ದಿಂದ ಹೊರಟು ಫ್ರಾಂಜ ಮ್ಯುಲರ ಡಮ್ ಡಮ್ ವಿಮಾನ ನಿಲ್ದಾಣದಲ್ಲಿ ಬಂದು ಇಳಿದರು. ತಾನು ದೇವಭೂಮಿಯನ್ನು ಪ್ರವೇಶಿಸುತ್ತಿದ್ದೇನೆಂಬ ಭಾಸವು

ಅವರಿಗೆ ಆ ಕ್ಷಣದಿಂದಲೆ ಆಗತೊಡಗಿತು. ಎಲ್ಲಿ ತನ್ನ ಅಸ್ಥಿಗಳ ವಿಸರ್ಜನೆ ಆಗಬೇಕೆಂದು ಅವರ ತಂದೆಯು ಕೊನೆಯು ಇಚ್ಛೆ ವ್ಯಕ್ತಮಾಡಿದ್ದರೋ, ಆ ಗಂಗಾ ನದಿಯ ಪ್ರಥಮ ದರ್ಶನವು ಅವರಿಗೆ ಕಲಕತ್ತೆಯಲ್ಲಿ ಆಯಿತು. ಮಧ್ಯಾಹ್ನದಲ್ಲಿ ಫ್ರಾಂಜ ಮ್ಯುಲರ ಗಂಗಾತೀರದಲ್ಲಿ ನಿಂತಿದ್ದರು. ಅತ್ತಿತ್ತ ಎಲ್ಲೆಡೆಗೆ ಹಚ್ಚಹಸಿರು ರತ್ನಗಂಬಳಿಯೇ ಹಾಸಿದ್ದು ಅವರಿಗೆ ಕಾಣುತ್ತಿತ್ತು. ಹುಲ್ಲಿನ ಹಸಿರು, ಕೆಸರಿನ ಕಪ್ಪು, ಗಂಗೆಯ ಬಿಳುಪು ಒಂದರಲ್ಲೊಂದು ಬೆರೆತು ಹೋದಂತೆ ಅನಿಸುತ್ತಿತ್ತು. ಬಲಬದಿಗೆ ಯಾತ್ರಿಕರ ಸ್ನಾನಕ್ಕಾಗಿ ಸಾಲಾಗಿ ಘಾಟಗಳಿದ್ದವು ನಡುನಡುವೆ ಅಗಸರಿಗಾಗಿಯೂ ಪಾವಟಿಗೆಗಳು ಕಂಡು ಬರುತ್ತಿದ್ದವು. ಮಾನವನ ದೇಹವನ್ನೂ, ಆ ದೇಹದ ಬಟ್ಟೆಗಳನ್ನೂ ತೊಳೆದು ಸ್ವಚ್ಛಮಾಡುವ ಕೆಲಸ ಅಲ್ಲಿ ಅಖಂಡವಾಗಿ ನಡೆಯುತ್ತಿತ್ತು. ಆ ಘಾಟಗಳಿಗೆ ತಾಗಿಯೇ ದೇವಾಲಯಗಳ ಶಿಖರಗಳು ತಲೆ ಎತ್ತಿನಿಂತದ್ದು ಕಾಣುತ್ತಿತ್ತು. ನಡುನಡುವೆ ಕೆಂಪು ಕೆಂಪು ಇಟ್ಟಿಗೆಗಳ ಮನೆಗಳು ತೊಡೆ ಯೂರಿ ಕೂತಿದ್ದವು. ಮನೆಗಳ ಗೋಡೆಗಳ ಮೇಲೆ ಹಚ್ಚಹಸಿರು ಬಳ್ಳಿ ಗಳನ್ನು ಹಬ್ಬಿಸಿದ್ದು ಕಾಣುತ್ತಿತ್ತು. ಇಟ್ಟಿಗೆಗಳ ಕೆಂಪು, ಬಳ್ಳಿಗಳ ಹಸಿರು ಸಂಜೆಯ ಹೊಂಬೆಳಕಿನಲ್ಲಿ ಚೆಂದವಾಗಿ ಸಂಗಮವನ್ನು ಸಾಧಿಸಿದ್ದು ಕಂಡು ಬರುತ್ತಿತ್ತು.

ಗಂಗಾತೀರದಲ್ಲಿ ಒಂದು ಬದಿಗೆ ಬಹಳಷ್ಟು ಹಳೆಯ ಬೀಳಲಾದ ಕಟ್ಟಡ ಗಳು ಹೇಗೋ ಜೀವಹಿಡಿದುಕೊಂಡು ಇದ್ದವು. ಆ ಕಟ್ಟಡಗಳತ್ತ ಬೆರಳು ಮಾಡಿ ತೋರಿಸಿ ವೀರೇನಬಾಬೂ ಮುಕರ್ಜಿಗಳು ಅಂದರು. "ಆ ಕುಸಿದು ಬೀಳುವ ಇಮಾರತು ಕಾಣತ್ತವಲ್ಲವೆ? ಅಲ್ಲಿ ಹದಿನಾರನೆಯ ಶತಮಾನ ದಿಂದಲೂ ಯುರೋಪಿಯನ್ ವ್ಯಾಪಾರಿಗಳ ಠಾಣ್ಯವಿದ್ದವು. ೧೫೭೫ ರಲ್ಲಿ ಮೊದಲು ಪೋರ್ತುಗೀಜ ವ್ಯಾಪಾರಿಗಳು ತಳ ಊರಿದರು. ಆಮೇಲೆ ಡಚ್ಚರು ಬಂದರು. ಇಂಗ್ಲಿಷರು ಬಂದರು. ಡೆನಿಶರು ಬಂದರು, ಫ್ರೆಂಚರಂತೂ ೧೬೭೩ ರಲ್ಲಿ ಚಂದ್ರನಗರದಲ್ಲಿ ಒಂದು ಫ್ಯಾಕ್ಟರಿ ಕಟ್ಟಿದರು. ಬಂಕೀಬಾಜಾರ ವೆಂಬಲ್ಲಿ ೧೭೨೩ ರಲ್ಲಿ "ಫ್ಲೆಮಿಶ್ ಅಸ್ಟೆಂಡ" ಕಂಪನಿಯು ಒಂದು ದೊಡ್ಡ ಫ್ಯಾಕ್ಟರಿಯನ್ನು ಕಟ್ಟಿದರು. ಆದರೆ ಅದನ್ನು ಕಟ್ಟಿದ ನಂತರ ಮೀರ ಜಾಫರನು ಅದನ್ನು ನೆಲಸಮ ಮಾಡಿದನು.

ಆದರೆ ಈ ನೀರಸ ಇತಿಹಾಸದಲ್ಲಿ ಫ್ರಾಂಜ ಮ್ಯುಲರರ ಮನಸ್ಸು ಏನೂ ಸ್ವಾರಸ್ಯ ಕಾಣಲಿಲ್ಲ.

ಆಗ ವೀರೇನಬಾಬು ಮುಖರ್ಜಿ ಅವರಿಗೆ ಇನ್ನೂ ಮಾಹಿತಿ ಪೂರೈಸಿದರು. ಅವರೆಂದರು, "ಆಗಿನ ನವಾಬನಿದ್ದನಲ್ಲ, ಆತ ಇಂಗ್ಲೀಷರಿಗೆ ಝಳಝಳ ಹೇಳಿಬಿಟ್ಟ" ಜರ್ಮನ್ ವ್ಯಾಪಾರಿಗಳು ಈ ನಮ್ಮ ಭಾಗದಲ್ಲಿ ಬಂದದ್ದೇ ಆದರೆ, ಅವರು ನಮ್ಮನ್ನೂ ಹೆಚ್ಚಾಗಿ ನಿಮ್ಮನ್ನೂ ತೊಂದರೆಗೀಡು ಮಾಡುವಂತೆ ಆದೀತು. ಹಾಗೇನಾದರೂ ಆದಲ್ಲಿ ನಿಮಗೆ ಪಶ್ಚಾತ್ತಾಪ ಪಡುವ ಪ್ರಸಂಗ ಬರಬಹುದು. ಆಗ ಮಾತ್ರ ನಿಮ್ಮ ವ್ಯಾಪಾರವನ್ನೇ ನಾನು ಪ್ರತಿಬಂಧಿಸ ಬೇಕಾದೀತು. ಆದ್ದರಿಂದ ಜರ್ಮನ್ ಹಡಗಗಳು ಬರದಂತೆ ಜಾಗ್ರತೆ ವಹಿಸಿರಿ. ಆದರೆ ಇಂಗ್ಲಿಷ್ ಕೌನ್ಸಿಲ್ಲಿನ ಪ್ರೆಸಿಡೆಂಟನು ನವಾಬನಿಗೆ ಸ್ಪಷ್ಟ ಹೇಳಿಬಿಟ್ಟನು. 'ಪರಮೇಶ್ವರನ ಕೃಪೆಯಿಂದ ಜರ್ಮನ್ ಹಡಗಗಳು ಈ ನಮ್ಮ ಭಾಗದಲ್ಲಿ ಬರಲಾರವು. ಇನ್ನು ಬಂದದ್ದೇ ಆದರೆ ಅವುಗಳಿಗೆ ಜಲಸಮಾಧಿಯಾದರೂ ಲಭಿಸೀತು ಅಥವಾ ಅವರನ್ನೇ ನಾವು ನಾಶಮಾಡಹುದು,' ಆದ್ದರಿಂದ ನಿಮಗೆ ಈ ನಮ್ಮ ಪ್ರದೇಶದಲ್ಲಿ ಬರಲು ಅವಕಾಶ ಸಿಗಲಿಲ್ಲ."

ಫ್ರಾಂಜ ಮ್ಯುಲರ ನಗುತ್ತ ಅಂದರು. "ಆದ್ದರಿಂದಲೇ ನಾನು ಈಗ ಬಂದಿರುವೆ."

ಆದರೆ ಈ ಮಾತು ಆಡುವಾಗಲೂ ಫ್ರಾಂಜ ಮ್ಯುಲರರ ಲಕ್ಷ್ಯ ವೀರೇನ ಬಾಬುಗಳ ಕಡೆಗೆ ವಿಶೇಷವಿದ್ದಿಲ್ಲ.

ಅವರು ಎದುರಿಗೇ ನೋಡುತ್ತಿದ್ದರು.

ಗಂಗೆಯ ತಡಿಯಲ್ಲಿ ನಿಂತು ಆದರ ಅಖಂಡ ಹರಿಯುವ ಪ್ರವಾಹದತ್ತ ನೋಡುತ್ತಿದ್ದಾಗ ಅವರ ಮನಸ್ಸು ಮುಗ್ಧವಾಯಿತು. 'ಗೀತೆ' ಮತ್ತು 'ಗಂಗೆ' ಇವೆರಡೂ ಹಿಂದೂಗಳಿಗೆ ಅಷ್ಟೊಂದು ಪವಿತ್ರ ಸಂಗತಿಗಳೇಕೆ ಎಂಬುದು ಅವರಿಗೆ ಹೊಳೆಯಿತು. 'ಗಂಗಾ–ಭಾಗೀರಥಿ' ಎಂದು ಘೋಷಿಸುತ್ತ ಪ್ರತಿಯೊಬ್ಬ ಹಿಂದುವು ಆನಂದದಿಂದ ಅನಂತದಲ್ಲಿ ವಿಲೀನನೇಕಾಗುವನೆಂಬುದರ ರಹಸ್ಯವು ಅವರಿಗೆ ಈ ಗಂಗಾತೀರದಲ್ಲಿಯೇ ಆಕಲನವಾಯಿತು.

ಅವರ ತಂದೆ ಮಾನಫ್ರೆಡ್ ಮ್ಯುಲರ ಭಾರತದ ಬಗೆಗೆ ಮಾತನಾಡುವಾಗ ಯಾವಾಗಲೂ ಹೇಳುತ್ತಿದ್ದರು. "ಯಾವ ದೇಶದಲ್ಲಿ ಗೀತೆ, ಗಂಗೆ, ಸೂರ್ಯ ಹಿಮಾಲಯುಗಳಿರುವವೋ ಆ ದೇಶವೇ ಪ್ರಂಪಚದ ಪಾಲನೆ-ಪೋಷಣೆ-ಶಾರೀರಿಕವಾಗಿಯೂ ಮಾನಸಿಕವಾಗಿಯೂ ಮಾಡುವದು ಗಂಗೆಯತ್ತ ಸ್ಥಿರ ದೃಷ್ಟಿಯಿಂದ ನೋಡುವಾಗ ಫ್ರಾಂಜ ಮ್ಯುಲರರಿಗೆ ತಮ್ಮ ತಂದೆಯ ಈ ಮಾತುಗಳು ನೆನಪಾದವು.

ಆ ಪವಿತ್ರ ಗಂಗಾ ಪ್ರವಾಹದತ್ತ ನೋಡುತ್ತಿರುವಾಗ ಫ್ರಾಂಜ ಮ್ಯುಲರರಿಗೆ ತಂದ್ರಿ ಹತ್ತಿದಂತೆ ಆಯಿತು. ಬಹಳ ಹೊತ್ತು ಅವರು ಆ ಪ್ರವಾಹವನ್ನೆ ದಿಟ್ಟಿಸುತ್ತ ಉಳಿದರು. ಆ ಬಿಳಿನರೆ ಬಣ್ಣದ ಪ್ರವಾಹವು ಅವರಿಗೆ ಶಂಕರನ ಭಸ್ಮ ಲೇಪನದ ನೆನಪು ಮಾಡಿ ಕೊಟ್ಟಿತು. ಆ ಪ್ರವಾಹದಾಚೆಗೆ ಕಾಣುವ ನೀಲ ವರ್ಣದ ಆಕಾಶವನ್ನು ನೋಡಿ ಅವರಿಗೆ ಒಂದು ಒಗಟಿನ ಬಗ್ಗೆ ಹರಿಕೆ ಆದಂತೆ ಅನಿಸಿತು. ಈ ಭೂಮಿಗೆ ಪ್ರಿಯವೆನಿಸಿದ ಶ್ರೀ ಕೃಷ್ಣನ ದೇಹ ನೀಲವರ್ಣವೇಕೆ ? ಆ ಒಗಟಿನ ಉತ್ತರ ಅವರಿಗೆ ಅಲ್ಲಿ ಸಿಕ್ಕಿತು. ಎದುರಿಗೆ ಕಾಣುವ ಆ ಗೂಢರಮ್ಯ ಆಕಾಶದ ಬಣ್ಣವೇ ಶ್ರೀ ಕೃಷ್ಣನ ರೂಪದಿಂದ ಈ ಭೂಮಿಯಲ್ಲಿ ಇಳಿದಿರಬೇಕು.— ಇದು ಅವರ ಮನಸ್ಸಿಗೆ ದೃಢವಾಯಿತು. ಹಿಂದೂ ದೇವ ದೇವತೆಗಳ ಮೇಲೆ ಚಾಮರಗಳನ್ನೂ ಬೀಸುವದು ಅವರಿಗೆ ಗೊತ್ತಿತ್ತು. ಶ್ರೀ ಕೃಷ್ಣನ ಕಲ್ಪನೆ ಅವರ ಮನಸ್ಸಿನಲ್ಲಿ ದೃಢವಾದೊಡನೆ ಅವರಿಗೆ ತೆಂಗು ಖರ್ಜೂರಗಳ ಮರಗಳು ಚಾಮರಗಳಂತೆ ಕಂಡುಬಂದವು. ಈ ಚಾಮರಗಳ ಅಡಿಗೆ ಕೆಂಪು ಹಳದಿ ಬಣ್ಣದ ಬನಗಳು ಪಸರಿಸಿದ್ದವು. ಈ ಬನಗಳಲ್ಲಿ ಮಾವು, ಹಲಸು ಮುಂತಾದ ಮರಗಳು ತಮ್ಮ ಕಚ್ಚ ಹಸಿರು ತಳಿರು ಟೊಂಗೆಗಳೊಂದಿಗೆ ತೂಗುತ್ತಿದ್ದವು.

ಈ ಕಿಕ್ಕಿರಿದ ಮರ ಮಟ್ಟುಗಳ ನಡುವಿನಿಂದ ಬಿದಿರ ಮಳೆಗಳು ಆಕಾಶಕ್ಕೆ ಮೋರೆ ಮಾಡಿ ಸ್ಥಿತಪ್ರಜ್ಞರಂತೆ ನಿಂತಿದ್ದವು. ಇದೆಲ್ಲ ದೃಶ್ಯವನ್ನು ಕಂಡು ಫ್ರಾಂಜ ಮ್ಯುಲರ ವಿನಮ್ರ ಭಾವದಿಂದ ತಮ್ಮ ದೃಷ್ಟಿಯನ್ನು ಒಳಗೆ ಹೊರಳಿಸಿದರು. ಅಲ್ಲಿ ಅವರಿಗೆ ಬಣ್ಣಬಣ್ಣದ ಹಾಸುಗಂಬಳಿ ಕಂಡಿತು. ಕ್ಷಿತಿಜದಿಂದ ಆಕಾಶದ ವರೆಗೂ ಅವರಿಗೆ ಸೌಂದರ್ಯದ ಹೊರತು

ಇನ್ನೇನೂ ಕಾಣಲೇ ಇಲ್ಲ ಈ ಸೌಂದರ್ಯದಲ್ಲಿ ವಿವಿಧ ಬಣ್ಣಗಳಿದ್ದವು. ಉನ್ಮತ್ತ ಸುಗಂಧವಿತ್ತು. ಮತ್ತು ಇದೆಲ್ಲ ಸೌಂದರ್ಯಕ್ಕೆ ಸೂರ್ಯ ಪ್ರಕಾಶದ ಸಾಂಗತ್ಯವಿತ್ತು. ಇದಿರು ಕಾಣುವ ಆ ನಾನಾ ಪ್ರಕಾರದ ವರ್ಣ ಸಂಗತಿಯಲ್ಲಿ ಅದೆಂಥ ಜಾದುವಿತ್ತು!

ಫ್ರಾಂಜ ಮ್ಯುಲರ ಮನದಲ್ಲಿಯೇ ಅಂದರು, "ಕೆಂಪು ಕಾಂತಿಯ ಮೋಹಕ್ಕೆ ಬಿದ್ದು ಪತಂಗವು ದೀಪದ ಜ್ಯೋತಿಯ ಮೇಲೆ ಎರಗಿ ಬೀಳುತ್ತದೆ. ಅದೇ ರೀತಿ ಈ ಭೂಮಿಯ ಸೌಂದರ್ಯದ ಮೇಲೆ ತಾನು ಎರಗುತ್ತಿದ್ದೇನೆ. ಆ ಪತಂಗದಂತೆಯೇ ತಾನೂ ನಾಶವಾಗಿ ಹೋಗಬಹುದೇ? ಮತ್ತು ನಾಶವಾದರೆ ಈ ಇದುರಿಗಿದ್ದ ಪವಿತ್ರ ಗಂಗೆಯಲ್ಲಿ ತನ್ನ ಅಸ್ಥಿಗಳು ಮುಳುಗುವವು. ತಾನು ಪವಿತ್ರನಾಗಿ ಬಿಡುವೆನು. ಮುಕ್ತನಾಗಿ ಬಿಡುವೆನು!"

ಅಷ್ಟರಲ್ಲಿ ಅವರ ಕಿವಿಗೆ ಗಂಗಾ ಸ್ತೋತ್ರ ಬಿತ್ತು. ಗಂಗೆಯ ನೀರಿನಲ್ಲಿ ಮುಳುಗ ಹಾಕುವ ಮುನ್ನ ಒಬ್ಬ ಭಾವಿಕ ಭಕ್ತ ಹೇಳುತ್ತಿದ್ದ– ಯತ್ರ ಗಂಗಾ ಚ ಯಮುನಾ ಚ ಯತ್ರ ಪ್ರಾಚೀ ಸರಸ್ವತೀ.

* * * * *

ಕಲಕತ್ತೆಯಲ್ಲಿ ಇಳಿದ ಮೇಲೆ ಮುಂದೆ ಎಲ್ಲಿ ಹೋಗುವದು? ಎಂಬ ಪ್ರಶ್ನೆ ಫ್ರಾಂಜ ಮ್ಯುಲರರ ಮುಂದೆ ಇದ್ದೇ ಇಲ್ಲ. ವಿಮಾನದಲ್ಲಿ ಪ್ರವಾಸ ಮಾಡುವಾಗ ವಿರೇನಬಾಬು ಮುಕರ್ಜಿಯ ಮತ್ತು ಅವರ ಪರಿಚಯ ಚೆನ್ನಾಗಿಯೇ ಆಗಿತ್ತು. ವಿರೇನಬಾಬು ಕಲಕತ್ತೆಯ ಭಾರಿ ದೊಡ್ಡ ವ್ಯಾಪಾರಿ. ಪಾಲಂ ವಿಮಾನ ತಳದಿಂದ ಕಲಕತ್ತೆಯ ಡಂ ಡಂ ವಿಮಾನ ತಳದಲ್ಲಿ ಇಳಿಯುವ ಮುಂಚೆಯೆ ವೀರೇನಬಾಬು ಫ್ರಾಂಜ ಮ್ಯುಲರರಿಗೆ ಅಂದಿದ್ದರು– "ನೀವು ಈಗ ನಮ್ಮ ಮನೆಗೇ ಬರಬೇಕು. ಮೊದಲು ನಮ್ಮ ಆತಿಥ್ಯ ಸ್ವೀಕರಿಸಿ. ಆಮೇಲೆ ನಾನು ನಿಮಗೊಂದು ಸೂಚನೆ ಮಾಡಲಿದ್ದೇನೆ.

ಹೀಗೆಂದು ವಿರೇನಬಾಬು ತಾಸು ತಡೆದರು. ಮಾತಾಡುವಾಗ ಪ್ರತಿಯೊಂದು ಮಾತಿನ ಅಂದಾಜು ಪಡೆದ ಹೊರತು ಒಂದೂ ಶಬ್ದ ಅವರ

ಬಾಯಿಯಿಂದ ಹೊರ ಬೀಳುತ್ತಿದ್ದಿಲ್ಲ. ವ್ಯಾಪಾರದಲ್ಲಿ ಮಾತಾಡುವಾಗ ಅವರು ಹೇಗೆ ಅಳೆದು ತೂಗಿ ಮಾತಾಡುತ್ತಿದ್ದರೋ, ಅದೇ ರೀತಿ ಇತರ ಮಾತುಕತೆಗಳಲ್ಲಿಯೂ ಅವರು ಹಾಗೆಯೇ ಮಾತಾಡುತ್ತಿದ್ದರು— ತಮ್ಮ ಮಾತೆಂದರೆ ಒಂದು ನಾಣ್ಯದ ಬೆಲೆಯದೋ ಎಂಬಂತೆ.

ತಮ್ಮ ಗೋಲೀ ಗುಂಡಿನಂಥ ಕಣ್ಣು ಫ್ರಾಂಜ ಮ್ಯುಲರರ ಮೇಲೆ ನಟ್ಟು ವಿರೇನಬಾಬು ಅಂದರು. "ನೀವು ಜರ್ಮನಿಯಿಂದ ಬಂದವರು. ನಿಮಗೊಂದು ಮಾತು ಸೂಚಿಸುತ್ತೇನೆ. ಇಲ್ಲಿಂದ ಸಮೀಪವೆ, ಬಾಂಕಿಪುರವೆಂಬ ಒಂದು ಚಂದ ಊರಿದೆ, ಅಲ್ಲಿ ೧೭೨೩ ರಲ್ಲಿ ನಿಮ್ಮ ಜರ್ಮನ್ ಕಂಪನಿಯು ತಮ್ಮ ಫ್ಯಾಕ್ಟರಿ ತೆರೆದಿತ್ತು. ಬಂದೇ ಇರುವಿರಿ, ಅಲ್ಲಿಗೂ ಹೋಗಿ ಬನ್ನಿ. ಅಲ್ಲಿ ದಿನೇಶಬಾಬು ಚಟೋಪಾಧ್ಯಾಯರೆಂಬ ನನ್ನ ವ್ಯಾಪಾರಿ ಮಿತ್ರರಿದ್ದಾರೆ. ಅವರಿಗೆ ನಾನು ಪತ್ರ ಕೊಡುತ್ತೇನೆ ಬಹಳ ಒಳ್ಳೆಯ ಜನ ಮತ್ತು ಸಧ್ಯವೇ ನಾನು ಕೇಳಿದೆ. ಅವರ ಮಗಳು ಭಾರತೀ ಏನೋ ಕಾರಣಕ್ಕಾಗಿ ಜರ್ಮನಿಗೆ ಹೋಗಲಿದ್ದಾಳೆ. ಆಗ...."

ಫ್ರಾಂಜ ಮ್ಯುಲರ ನಡುವೆಯೆ ಬಾಯ್ದೆಗೆದರು."ವಾಃ ವಾಃ ! ಭಾರತೀ ಎಂದು ಹೆಸರೇ? ಎಷ್ಟು ಚೆಂದ ಹೆಸರು! ವಾಃ! ಭಾರತೀ–ಭಾರತೀ!"

ಪ್ರೀತಿಯ ಅಚ್ಚುಮೆಚ್ಚಿನ ಹೆಸರನ್ನು ಮತ್ತೆ ಮತ್ತೆ ಉಚ್ಚರಿಸುವಂತೆ ಅವರು ಅವಳ ಹೆಸರನ್ನು ನಾಲಿಗೆಯಲ್ಲಿ ಆಡಿಸಿದರು ಮತ್ತು ಸುಮ್ಮನೆ ಕುಳಿತರು.

* * * *

ಬಾಂಕೀಪುರಕ್ಕೆ ಹೋಗುವಾಗ ಫ್ರಾಂಜ ಮ್ಯುಲರ ಮತ್ತೆ ಮತ್ತೆ ಅನ್ನುತ್ತಿದ್ದರು. "ಈ ಪವಿತ್ರ ದೇಶದಲ್ಲಿ ಇದೇ ಗಂಗಾತೀರದಲ್ಲಿ ನಮ್ಮ ಪೂರ್ವಜರು ಇನ್ನೂರು ವರ್ಷಗಳ ಆಚೆ ವ್ಯಾಪಾರೀ ವಖಾರುಗಳನ್ನು ತೆರೆದಿದ್ದರು. ನಮ್ಮ ಪೂರ್ವಜರು ಅದೆಷ್ಟು ಭಾಗ್ಯವಂತರು! ಆ ವಖಾರಿಯ ಕಟ್ಟಡ ಇಂದಿಗೂ ಇದ್ದಲ್ಲಿಯೆ ಇದೆ. ಅಂದಾಗ ನಾನು ಅದನ್ನು ನೋಡಲೆ ಬೇಕು.!"

ಬಾಂಕೀಪುರದಲ್ಲಿ ಇಳಿದಾಗಿನಿಂದ ಫ್ರಾಂಜ ಮ್ಯುಲರ ಕಂಡವರನ್ನೆ ಕೇಳಿದರು. "ಇಲ್ಲಿ ಹಿಂದೆ ಜರ್ಮನ ಫ್ಯಾಕ್ಟರಿ ಇತ್ತಲ್ಲವೆ? ಈಗ ಇದೆಯೆ ಫ್ಯಾಕ್ಟರಿಯ ಕಟ್ಟಡ? ನಾನು ನೋಡಬೇಕಾಗಿದೆ!"

ಅವರ ಈ ಪ್ರಶ್ನೆಗಳಿಗೆ ಅನೇಕರು ನಕಾರದಲ್ಲಿಯೆ ಉತ್ತರ ವಿತ್ತರು ಅಷ್ಟರಲ್ಲಿ ಒಬ್ಬ ಮುದುಕ ಹತ್ತಿರಕ್ಕೆ ಬಂದು ಅಂದ. "ನನ್ನ ಬಾಲ್ಯದಲ್ಲಿಯ ಆ ಕಟ್ಟಡ ಮುರುಕಲಾಗಿತ್ತು. ಆದರೆ ಮುಂದೆ ನಾನು ಆ ಕಟ್ಟಡ ಅವಶೇಷಗಳನ್ನು ನೋಡಿದ್ದು ನನಗೆ ಚೆನ್ನಾಗಿ ನೆನಪಿನಲ್ಲಿದೆ!"

ಫ್ರಾಂಜ ಮ್ಯುಲರ ಅವನಿಗೆ ತುಂಬ ಆಸ್ಥೆಯಿಂದ ಕೇಳಿದರು. "ಆ ಸ್ಥಳವನ್ನಾದರೂ ಕಾಣಿಸುವಿರಾ?

ಆ ಮುದಕ ಆ ಸ್ಥಳವನ್ನು ಕಾಣಿಸಿದನು.

ಫ್ರಾಂಜ ಮ್ಯುಲರ ಓಡುತ್ತಲೆ ಆ ಸ್ಥಳಕ್ಕೆ ಹೋದರು. ಆ ಸ್ಥಳಕ್ಕೆ ಹೋದೊಡನೆ, ಅವರಿಗೆ ಅಲ್ಲಿ ಅಂಡಾಕೃತಿಯ ಒಂದು ಭವ್ಯ ಇಮಾರತು ಕಣ್ಣಿಗೆ ಬಿತ್ತು. ಆ ಇಮಾರತಿನ ಎತ್ತರ ನೂರು ಅಡಿ ಮಿಕ್ಕ ಇದ್ದಿರಬೇಕು ಆ ಇಮಾರತಿನ ಗೋಡೆಗಳು ಸುಮಾರು ಹನ್ನೆರಡು ಅಡಿ ಅಗಲವಾಗಿರಬೇಕು

ಆ ಇಮಾರತಿನ ಬಗೆಗೆ ಅವರು ಯಾರಿಂದಲೋ ವಿವರಗಳನ್ನು ಕೇಳಿ ಕೊಂಡರು. ಈ ಇಮಾರತು ೧೭೮೬ ರಲ್ಲಿ ಪೂರ್ತಿ ಆಯಿತು. ವಾರನ ಹೆಸ್ಟಿಂಗ್ಸನ ಹೇಳಿಕೆಯಂತೆ ಕ್ಯಾಪ್ಟನ್ ಗಾರಸ್ಟಿನ್ ಎಂಬವನು ಈ ಧಾನ್ಯ ಕೋಠಾರ (ಉಗ್ರಾಣ)ದ ಕಟ್ಟೋಣ ಗೆಲಸ ಕೈಗೊಂಡನು. ಅದು ಎರಡೂವರೆ ವರ್ಷ ನಡೆಯಿತು. ಬರಗಾಲದಲ್ಲಿ ಧಾನ್ಯ ಸಂಗ್ರಹಿಸಿ ಇಡಲು ಈ ಕೋಠಾರ ಉಪಯೋಗವಾಗುತ್ತಿತ್ತು. ಈ ಕೋಠಾರದಲ್ಲಿ ಸುಮಾರು ಒಂದೂವರೆ ಲಕ್ಷ ಟನ್ನು ಧಾನ್ಯ ಹಿಡಿಯುತ್ತಿತ್ತು. ಈ ಕೋಠಾರ ತೆರೆದಿಟ್ಟಾಗ ಅಲ್ಲಿ ಉತ್ತಮ ಪ್ರತಿಧ್ವನಿ ಮೊಳಗುತ್ತಿತ್ತು. 'ಗೋಲ' ಎಂಬ ಹೆಸರಿನಿಂದ ಈ ಕೋಠಾರ ಪ್ರಸಿದ್ಧವಿತ್ತು.

ಫ್ರಾಂಜ ಮ್ಯುಲರ ಮಧ್ಯಾಹ್ನದ ಹೊತ್ತಿಗೆ ಆ ಸ್ಥಳಕ್ಕೆ ಹೋದಾಗ ಎಲ್ಲ ಮಾರ್ಗಗಳು ಎತ್ತಿನ ಬಂಡಿಗಳಿಂದ ಕಿಕ್ಕಿರಿದಿದ್ದವು. ಗಾಡಿಗಳಿಂದ

ಧಾನ್ಯದ ಚೀಲಗಳನ್ನು ಇಳಿಸುತ್ತಿದ್ದರು ಮತ್ತು ಆ ಕೋಠಾರದಲ್ಲಿ ತುಂಬು ತ್ತಿದ್ದರು.

ಈ ಇಷ್ಟು ಎತ್ತರದ ಈ ಕೋಠಾರ ಎಂದು ತುಂಬೀತು ಯಾರಿಗೆ ಗೊತ್ತು –ಈ ವಿಚಾರ ಫ್ರಾಂಜ ಮ್ಯುಲರರ ಮನಸ್ಸಿನಲ್ಲಿ ಬರುವಷ್ಟರಲ್ಲಿ ಒಬ್ಬನು ಅವರಿಗೆ ಹೇಳಿದನು. "ಈ ಕೋಠಾರ ಇಷ್ಟು ಎತ್ತರವಿದೆಯಷ್ಟೇ? ನೋಡಿ, ಎಷ್ಟು ಮೆಟ್ಟಲುಗಳಿವೆ! ಆದರೆ ನೇಪಾಳದ ಜಂಗಬಹಾದ್ದೂರ ದೊರೆ ತಮ್ಮ ಕುದುರೆಯನ್ನು ನೇರವಾಗಿ ಮೇಲ್ಬರೆಗೆ ಒಯ್ದಿದ್ದರು ಮತ್ತು ಹಾಗೆಯೇ ಕೆಳಗೆ ಇಳಿಸಿದ್ದರು."!

ಆ ಮುದುಕ ಹೇಳಿದ ಸ್ಥಾನದಲ್ಲಿ ಫ್ರಾಂಜ ಮ್ಯುಲರ ಮತ್ತೆ ಮತ್ತೆ ನೋಡಿದರು. ಆ ಸ್ಥಳವು ಗಂಗಾ ತೀರದಲ್ಲಿಯೆ ಇತ್ತು. ಅದು ತಗ್ಗು ನಿನ್ನೆಯುಳ್ಳದ್ದಾಗಿ ಕಾಣುತ್ತಿತ್ತು. ದನಗಳ ಸೆಗಣಿ ಅಲ್ಲಿ ಬಿದ್ದಿತ್ತು. ಅಲ್ಲಿಯೆ ದನಗಳು ಮೇಯುತ್ತಿದ್ದವು. ಆ ಸ್ಥಾನವನ್ನು ಫ್ರಾಂಜ ಮ್ಯುಲರ ಕಣ್ತುಂಬ ನೋಡಿಕೊಂಡರು. ಇತ್ತ ಧಾನ್ಯದ ಕಣಜ. ಅತ್ತ ಗಂಗಾನದಿ! ಯಾವ ದೇಶದಲ್ಲಿ ಇಂಥ ಧಾನ್ಯದ ಕಣಜಗಳಿರುವವೋ ಆ ದೇಶ ಎಷ್ಟು ಭಾಗ್ಯಶಾಲಿ! ಈ ಭಾಗ್ಯಶಾಲಿ ದೇಶಕ್ಕೆ ನಮ್ಮ ಪೂರ್ವಜರು ಬಂದು ಧನ್ಯರಾಗಿ ಹೋದರು!" ಈ ವಿಚಾರ ಫ್ರಾಂಜ ಮ್ಯುಲರರ ಮನಸ್ಸಿನಲ್ಲಿ ಮತ್ತೆ ಮತ್ತೆ ಬರುತ್ತಿತ್ತು.

ಆ ಧಾನ್ಯದ ಕೋಠಾರದ ನೆತ್ತಿಯನ್ನೇರಿ ಫ್ರಾಂಜ ಮ್ಯುಲರ ಸುತ್ತಲೂ ನೋಡಿದರು. ದೊಡ್ಡ ಸುತ್ತು ಹಾಕಿ ಗಂಗೆಯು ನಗರದಲ್ಲಿ ಹೊಕ್ಕಿದ್ದಳು. ಅದರ ಪಾತ್ರವು ಸಿದಾನ ಅರ್ಧ ಮೈಲು ಅಗಲವಿರಬೇಕು. ಇದೇ ಪರಿಸರ ದಲ್ಲಿ ಗಂಗೆಗೆ ಘೋಗ್ರಾ, ಮತ್ತು ಶೋಣ ಇವೆರಡು ಶಾಖೆಗಳು ಬಂದು ಸೇರು ತ್ತವೆ. ಗಂಗೆಯಲ್ಲಿ ಬಂದು ಸೇರಿದ ನೀರು ತೀರ್ಥವಾಗಿ ಬಿಡುತ್ತದೆ. ಅದೇ ರೀತಿ ಬಾಂಕೀಪುರದಲ್ಲಿ ಎಲ್ಲ ಕಡೆಗೂ ಗಂಗಾತೀರ್ಥ ಉಂಟಾಗಿದೆ.

ಆ ಧವಲ ಗಂಗಾತೀರ್ಥದಲ್ಲಿ ನೆತ್ತಿಯ ಮೇಲಿನ ಸೂರ್ಯನ ಧವಲ ಕಿರಣಗಳು ಬಿದ್ದಿದ್ದವು. ಆ ಮನೋಹರ ದೃಶ್ಯದ ಮೇಲಿಂದ ದೃಷ್ಟಿಯನ್ನು

ಹಿಂದೆಗೆದು ಕೊಳ್ಳಬೇಕೆಂತಲೂ ಅನಿಸುತ್ತಿದ್ದಿಲ್ಲ. ನೋಡಿದಷ್ಟು ಹೆಚ
ಅದರ ಸೊಬಗು ಬೆಳೆಯುತ್ತಿತ್ತು.

ಬಹಳ ವಿಲಂಬವಾಗಿತ್ತು. ಮಧ್ಯಾಹ್ನ ಪಶ್ಚಿಮಕ್ಕೆ ಒಲಿ
ಹತ್ತಿತ್ತು ನೆತ್ತಿಯ ಮೇಲಿನ ಕಿರಣಗಳು ಈಗ ಡೊಂಕಾಗಿದ್ದವು. ವೀರೇ
ಬಾಬುಗಳು ದಿನೇಶ ಬಾಬುಗಳಿಗೆ ಪತ್ರ ಕೊಟ್ಟಿದ್ದರು. ಆದರೆ ಆ ಕಾಲ
ಅವರ ಮನೆಗೆ ಹೋಗುವದಕ್ಕಿಂತ ಯಾವದೊಂದು ಹಾಟೆಲಿನಲ್ಲಿ ಊ
ಮುಗಿಸಿ ಹೋಗಬೇಕೆಂದು ಆಲೋಚಿಸಿ ಅವರು ಹೆಜ್ಜೆಯನ್ನು ಒಂದು ಫ್ರೆಂ
ಹಾಟೆಲಿನತ್ತ ಹೊರಳಿಸಿದರು.

ಗಂಗಾ ತೀರದ ಆ 'ಲಿಬರ್ಟೀ' ಹಾಟೆಲಿನಲ್ಲಿ ಪ್ರವೇಶ ಮಾಡಿದೊ
ನೆಯೆ ಅವರಿಗೆ ಅಲ್ಲಿಯ ಫ್ರೆಂಚ ವಾತಾವರಣದ ಕಲ್ಪನೆ ಚೆನ್ನಾಗಿಯೆ ಬಂತ
ಫ್ರೆಂಚ ಭಾಷೆಯಲ್ಲಿ 'Liberte' ಈ ಹಾಟೆಲ ಮೇಲಿನ ಹೆಸರು ಪಾ
ಯನ್ನು ಅವರಿಗೆ ಸಹಜ ಓದಲು ಬಂತು. ವಿವಿಧ ರಾಷ್ಟ್ರಗಳ ತತ್ವಜ್ಞಾನ
ಅಭ್ಯಾಸ ಮಾಡುವಾಗ ಫ್ರಾಂಜ ಮ್ಯುಲರರು ಫ್ರೆಂಚ ಭಾಷೆಯ ಅಭ್ಯಾ
ವನ್ನು ಕೆಲಮಟ್ಟಿಗೆ ಮಾಡಬೇಕಾಗಿ ಬಂದಿತ್ತು.

ಹಾಟೆಲಿನಲ್ಲಿ ಒಂದು ಚೆನ್ನಗಿನ ಸ್ಥಳವನ್ನು ನೋಡಿಕೊಂಡು ಅವರ
ಕೂತರು. ಕಲಕತ್ತೆಯ ರಣ ಕಹಳೆಯ ಜೀವನಕ್ಕೆ ಹೇಸಿ ದೊಡ್ಡ ಇಂಗ್ಲಿ
ಜನ ವಾರಾಂತ್ಯದ ರಜೆಯ ದಿನಗಳನ್ನು ಈ ಹಾಟೆಲಿನಲ್ಲಿ ಮಜಾ ಹೊ
ಯುತ್ತ ಕಳೆಯುತ್ತಿದ್ದರು. ಈ ಸಂಗತಿಯ ಕಲ್ಪನೆಯೂ ಫ್ರಾಂಜ ಮ್ಯು
ರರಿಗೆ ಇದ್ದಿಲ್ಲ. ಮದ್ಯಪಾನ ಮತ್ತು ನೃತ್ಯ ಕೇಳಿ ಇವುಗಳಿಂದ ಹಾಟೆಲಿ
ವಾತಾವರಣ ಉನ್ಮತ್ತವಾಗಿ ಬಿಡುತ್ತಿತ್ತು.— ಇದೂ ಅವರಿಗೆ ಗೊತ್ತಿದ್ದಿಲ್ಲ
ಶನಿವಾರ ರಾತ್ರಿಯಂತೂ ವಿಪರೀತ ಉನ್ಮಾದ. ಶನಿವಾರ ಸಂಜೆಯಿಂದಲ
ಷೋಕಿ ಇಂಗ್ಲಿಷ ಜನರು ತಮ್ಮ ಮೆಮಸಾಹೇಬರ ಕೊರಳಲ್ಲಿ ಕೈಯಿಕ್ಕಿ ಅ
ಹಾಟೆಲಿನಲ್ಲಿ ಹಾಜರಾಗುತ್ತಿದ್ದರು. ಸಂಧ್ಯಾಕಾಲದಿಂದಲೆ ಮಂದ ಸ್ವರ
ಸಂಗೀತ ಆರಂಭವಾಗುತ್ತಿತ್ತು. ಗ್ರೀಕ ಅಥವಾ ಬೀಟಹೊವ್ಹನ ಸಂಗೀ
ಸಾಕಾರವಾಗುತ್ತಿತ್ತು. ಆಗ ಮದ್ಯ ಕುಡಿದು ಗುಂಗಿನಲ್ಲಿರುವ ಜೋಡಿಗಳ
ಅನ್ಯೋನ್ಯರ ಮಗ್ಗಲನ್ನು ಸೇರಿ ಸ್ವಚ್ಛಂದವಾಗಿ ಸ್ಥೈರವಾಗಿ ಕುಣಿಯಲು

ಆರಂಭಿಸುತ್ತಿದ್ದರು. ಇರುಳು ಸರಿದರೂ ಮರುಳು ಉಳಿಯುತ್ತಿತ್ತು. ರವಿವಾರದ ಇಡಿಯ ದಿನ ಅಲಸಿಕೆಯಲ್ಲಿ ಕಳೆಯುತ್ತಿತ್ತು. ಆದರೂ ಇಡಿಯ ದಿವಸ ಸಾಹೇಬನ ಮಗ್ಗಲಲ್ಲಿ ಅವನ ಮಡ್ಡಮ್ಮ ವಿಶ್ರಮಿಸಿರುತ್ತಿದ್ದಳು.

ಆದರೆ ಈ ಉನ್ಮತ್ತ ದಿನದ ಕಲ್ಪನೆ ಫ್ರಾಂಜ ಮ್ಯುಲರರಿಗೆ ಎಲ್ಲಿಂದ ಬರಬೇಕು ? ಗಂಗಾ ತೀರದಲ್ಲಿಯೂ ಇಂಥ ಒಂದು ತೀರ್ಥಸ್ಥಾನವಿರಬಹುದು ಈ ಸಂಗತಿಯು ಶಕ್ಯತೆಯೇ ಅವರಿಗೆ ಅನಿಸಿರಲಾರದು. ಮತ್ತೆ ಈಗಂತೂ ಆ ಫ್ರೆಂಚ ಹಾಟೆಲಿನ ರಂಗು-ರೂಪ ಪೂರಾ ಬದಲಾಗಿತ್ತು. ಕಾಲಕ್ಕೆ ತಕ್ಕಂತೆ ಈ ಬದಲಾವಣೆ ಆಗಿತ್ತು. ಕೇವಲ ನೆನಹುಗಳು ಹಿಂದುಳಿದಿದ್ದವು-ಸುಳಿದಾಡುತ್ತ.

ಆ ಬಗ್ಗೆ ಒಬ್ಬ ಇಂಗ್ಲಿಷ ಗೃಹಸ್ಥ ತಕರಾರು ಮಾಡುತ್ತಿದ್ದ. ಆಗ ಅಲ್ಲಿಯ ವೇಟರ ಆ ಆಂಗ್ಲನಿಗೆ ತಗ್ಗಿದ ದನಿಯಲ್ಲಿ ಫ್ರೆಂಚಿನಲ್ಲಿಯೆ, ಅಂದನು. "arranger quelque chose d'assez agreeable et au meme temps discret".

.... ಆ ವೇಟರ ದನಿ ತಗ್ಗಿಸಿ ಆಡಿದರೂ ಫ್ರಾಂಜ ಮ್ಯುಲರರಿಗೆ ಎಲ್ಲ ಮಾತು ಕೇಳಿಬಂತು. ಅವರಿಗೆ ಆ ಮಾತಿಗೆ ನಗೆಯೂ ಬಂತು.

ಆ ವೇಟರ ಆ ಆಂಗ್ಲನಿಗೆ ಹೇಳುತ್ತಿದ್ದ, "ನೀವು ನಿಮ್ಮೊಂದಿಗೆ ಮೆಮ ಸಾಹೇಬರಿಗೆ ತಂದಿಲ್ಲವಾದರೆ ನನಗೆ ಹಾಗೆ ಮುನ್ಸೂಚನೆ ಕೊಡಿ. ನಾನು ಮ್ಮ ಎಲ್ಲ ಸರಬರಾಜು ಮಾಡುತ್ತೇನೆ--ಮದಿರೆ ಮದಿರಾಕ್ಷಿ ಎರಡೆರಡೂ!"

ಹಿಂದೂ ಜನ ಈ ಗಂಗೆಯನ್ನು ಇಷ್ಟು ಪವಿತ್ರವೆಂದು ಭಾವಿಸುತ್ತಾರೆ ರುತ್ತು ಈ ಗಂಗಾ ತೀರದ ಫ್ರೆಂಚ ಹಾಟೆಲಿನಲ್ಲಿ ಇಂಥ ಸಂಗತಿಗಳೂ ನಡೆಯುತ್ತವೆ! ಈ ವಿಸಂಗತಿಯಿಂದ ಫ್ರಾಂಜ ಮ್ಯುಲರರಿಗೆ ಮಹಾ ವಿಷಾದವೆನಿಸಿತು. ಅವರು ಹೇಗೋ ತಮ್ಮ ಊಟ ಮುಗಿಸಿ ಹೊರಬಿದ್ದು ತಿರುಗಿ ಗಂಗೆಯ ಪ್ರವಾಹದ ಕಡೆಗೆ ನೋಡುತ್ತ ನಿಂತರು. ಬಿಸಿಲು ಬಾಡಿತು, ಬಲಿಯಿತು. ಅವರಿಗೆ ಆ ವೇಳೆಯ ಸೊಬಗೆ ಬೇರೆಯಾಗಿ ಕಾಣಹತ್ತಿತು. ಎಷ್ಟೋ ಹೊತ್ತು ಅವರು ಆ ಸ್ಥಳದಲ್ಲಿಯೆ ಗಂಗಾ ಪ್ರವಾಹದತ್ತ ನೋಡುತ್ತ ನಿಂತಿದ್ದರು.

* * *

ದಿನೇಶ ಬಾಬೂ ಚಟೋಪಾಧ್ಯಾಯರ ಪತ್ತೆ ಹಚ್ಚಿ ಛ್ರಾಂಜ ಮ್ಯುಲ
ಅವರ ಮನೆಯನ್ನು ಮುಟ್ಟಿದರು. ಆಗ ದೀಪ ಹಚ್ಚುವ ವೇಳೆ ಆಗಿತ್ತು
ಅವರ ಮನೆ ಸೇರಿದ ಮೇಲೆ ದಿನೇಶಬಾಬುಗಳ ಮಗಳು ಭಾರತೀ ತನ್ನ ಹೆಸ
ನಂತೆಯೇ ಚೆಲುವೆಯೂ ಇದ್ದಾಳೆಂಬುದು ಅವರಿಗೆ ಮನವರಿಕೆ ಆಯಿತ
ದಿನೇಶಬಾಬು ಅವರ ಹೆಂಡತಿ ನಂದಿನೀದೇವಿ ಮತ್ತು ಮಗಳು ಭಾರತೀ—ಇ
ರೆಲ್ಲರೂ ತುಂಬ ಅಗತ್ಯಶೀಲರು ಎಂಬುದೂ ಮನವರಿಕೆ ಆಗಲು ಬಹ
ಹೊತ್ತು ಹಿಡಿಯಲಿಲ್ಲ.

ದಿನೇಶಬಾಬುಗಳದು ಸಣಬಿನದು ದೊಡ್ಡ ವ್ಯಾಪಾರ. ಅದಕ್ಕಾ
ಅವರಿಗೆ ಅನೇಕ ಸಲ ವಿದೇಶ ಯಾತ್ರೆಗಳು ಘಟಿಸುತ್ತಿದ್ದವು. ಈ ಚಟೋ
ಪಾಧ್ಯಾಯ ದಂಪತಿಗೆ ಒಬ್ಬನೇ ಮಗ ಹುಟ್ಟಿದ. ಅವನ ಹೆಸರು ಭರ
ಕುಮಾರ. ಊರಿನ ಒಬ್ಬ ಪ್ರಸಿದ್ಧ ಜ್ಯೋತಿಷಿಯು ಆ ಮಗನ ಜಾತ
ಬರೆದಿದ್ದ. ಆ ಜ್ಯೋತಿಷಿ ಆ ಮಗನಿಗೆ ಹನ್ನೆರಡನೆ ವರ್ಷಕ್ಕೆ ಮೃತ್ಯು
ಯೋಗವಿದೆಯೆಂದು ಹೇಳಿದನು. ಆದರೆ ಮೃತ್ಯುಂಜಯ ಜಪ ಮಾಡಿದ
ಆ ಅರಿಷ್ಟಯೋಗ ತಪ್ಪುವದೆಂದೂ ಹೇಳಿದನು. ಅದಕ್ಕಾಗಿ ಸಾವಿರಾ
ರೂಪಾಯಿ ವೆಚ್ಚ ಮಾಡಬೇಕಿತ್ತು. ನಂದಿನೀದೇವಿ ಬೇಕಾದ್ದು ಮಾ
ಅಷ್ಟು ವೆಚ್ಚ ಮಾಡಲು ಗಂಡನನ್ನು ಆಗ್ರಹಪಡಿಸಿದಳು. ಆದರೆ ದಿನೇ
ಬಾಬು ಆಕಡೆಗೆ ದುರ್ಲಕ್ಷ್ಯ ಮಾಡಿದರು. ಮೊದಲನೆಯದಾಗಿ ಅವರಿ
ಸ್ವತಃ ಜ್ಯೋತಿಷ್ಯದಲ್ಲಿ ಏನೇನೂ ನಂಬಿಕೆ ಇದ್ದಿಲ್ಲ. ಮತ್ತು ಎರಡನೆ
ದಾಗಿ ಮೂಢ ನಂಬಿಕೆಗೆ ಬಲಿಬಿದ್ದು ಸಾವಿರಾರು ರೂಪಾಯಿ ವೆಚ್ಚ ಮಾ
ವಷ್ಟು ಸಾಂಪತ್ತಿಕ ಪರಿಸ್ಥಿತಿ ಆಗ ಅವರಿಗೆ ಇದ್ದಿಲ್ಲ.

ಅವರ ದುರ್ದೈವಕ್ಕೆ ಆ ಜ್ಯೋತಿಷಿಯ ಭವಿಷ್ಯ ನಿಜವಾಯಿತು
ಹನ್ನೆರಡು ವರ್ಷ ವಯಸ್ಸಿಗೇ ಅವರ ಒಬ್ಬನೇ ಒಬ್ಬ ಮಗ ಭರತಕುಮಾ
ಕೆಲವೇ ದಿನಗಳ ಕಾಯಿಲೆಯಿಂದ ಸಾವಿಗೆ ಈಡಾದನು. ಅವನ ಸಾವಿ
ನಂತರ ನಂದಿನೀದೇವಿ ಮಾಡಿದ ಶೋಕ ಯಾವ ಕರುಳನ್ನೂ ಮಿಡಿಯ
ವಂತಿತ್ತು. "ಮೃತ್ಯುಂಜಯದ ಜಪ ಮಾಡಿಸಿದ್ದರೆ, ನನ್ನ ಒಬ್ಬನೇ ಒಬ
ಮಗ ಬದುಕುತ್ತಿದ್ದ. ಕೇವಲ ಸಾವಿರ ಐನೂರು ರೂಪಾಯಿಗಳಿಗಾಗಿ ನ

ಹೊಟ್ಟೆಯ ಕಂದನನ್ನು ಕಳೆದುಕೊಂಡೇ ಬಿಟ್ಟೆ!" ಎಂದು ಅವರು ಮತ್ತೆ ಮತ್ತೆ ಹಲುಬುತ್ತಿದ್ದರು. ಹಾಗೆ ಹೇಳುವಾಗ ಅವರು ಎದೆಬಡಿದುಕೊಳ್ಳುತ್ತಿದ್ದರು. ಕೆಲವು ದಿನ ಅವರು ಅನ್ನ-ನೀರುಗಳನ್ನು ಮುಟ್ಟಲಿಲ್ಲ. ಪುತ್ರ ವಿಯೋಗದ ದುಃಖದಿಂದ ಅವರ ಎದೆಯೊಡೆಯುವಂತೇ ಆಯಿತು. ಆ ದುಃಖದ ಭರದಲ್ಲಿ ಅವರು ಬಾಯಿಗೆ ಬಂದಂತೆ ಹಲಬುತ್ತಿದ್ದರು. ದಿನೇಶ-ಬಾಬು ಅವರ ಆ ಮಾತನ್ನೆಲ್ಲ ತೆಪ್ಪಗೆ ಕೇಳಿಕೊಳ್ಳಬೇಕಾಯಿತು.

ಕೆಲವು ಕಾಲಾವಧಿಯ ನಂತರ ಭಾರತಿಯ ಜನನವಾಯಿತು. ಅವಳ ಹುಟ್ಟಿನ ಭವಿಷ್ಯವನ್ನೂ ಆ ಜ್ಯೋತಿಷಿಯೆ ಗುಣಿಸಿ ಹೇಳಿದ್ದ. ಭಾರತಿಯು ಕಾಲ್ಗುಣದಿಂದ ದಿನೇಶಬಾಬುಗಳ ವ್ಯಾಪಾರ ಒಳ್ಳೇ ಕುದುರುವದು. ಊರ್ಜಿತ ದಶೆ ಬರುವದು. ಅವರ ಮನೆಯಲ್ಲಿ ಅಪಾರ ವೈಭವ ನಲಿದಾಡುವದು. ಈ ಭವಿಷ್ಯವನ್ನು ಅದೇ ಜ್ಯೋತಿಷಿ ತರ್ಕಿಸಿದ್ದನು. ಆತ ಹೇಳಿದ ಭವಿಷ್ಯಗಳೆಲ್ಲ ಅಕ್ಷರಶಃ ಸತ್ಯವಾದವು. ಈ ಮಾತು ದಿನೇಶಬಾಬು ಅಲ್ಲಗಳೆಯಲಾರರು. ಆದ್ದರಿಂದ ಅದೇ ಜ್ಯೋತಿಷಿ ಭಾರತಿಗೆ ವಿದೇಶ ಗಮನದ ಯೋಗವನ್ನು ಹೇಳಿದ್ದ ಅದನ್ನು ನಂಬುವದೂ ಅವರ ಪಾಲಿಗೆ ಬಂದಿತು. ಆದರೆ ಭಾರತಿಯು ವಿದೇಶಕ್ಕೆ ಹೋಗಬಾರದು. ಕೈಯ ಖರ್ಚು ಮಾಡಿ ವಿದೇಶಕ್ಕೆ ಹೋಗಿ ಬರುವದರಲ್ಲಿ ಪ್ರಯೋಜನವೇನು? ಅಲ್ಲದೆ ಮಗನ ಮರಣದ ನಂತರ ಹುಟ್ಟಿದ ಈ ಮುದ್ದಿನ ಮಗಳ ವಿಯೋಗ ಅವರಿಗೆ ಸಹನವಾಗುವಂತೆ ಇದ್ದಿಲ್ಲ. ನಂದಿನೀದೇವಿಯದೂ ಅದೇ ಅಭಿಪ್ರಾಯವಾಗಬಹುದಿತ್ತು. ಆದರೆ, ಆ ಜ್ಯೋತಿಷಿಯು ವಿದೇಶ ಯಾತ್ರೆಯ ಯೋಗವನ್ನು ಹೇಳಿದ್ದ, ಅವಳು ವಿದೇಶ ಯಾತ್ರೆ ಮುಗಿಸಿ ಕ್ಷೇಮದಿಂದ ಮನೆಗೆ ಮರಳುವವಳೇ ಮಾತ್ರವಲ್ಲ, ಮರಳಿ ಬರುವಾಗ ವಿದೇಶದಿಂದ ಬಹು ದೊಡ್ಡ ಹೆಸರು ಗಳಿಸಿ ಬರುವಳು-ಎಂದೂ ಆತ ಸ್ಪಷ್ಟವಾಗಿ ಭವಿಷ್ಯ ಹೇಳಿದ್ದ. ಆದ್ದರಿಂದ ನಂದಿನೀದೇವಿ ಮಗಳ ವಿದೇಶಯಾತ್ರೆಗೆ ಅನುಕೂಲರಾದರು.

ಕಳೆದ ಎಂಟು ದಿನಗಳಿಂದ ಅವರ ಮನೆಯಲ್ಲಿ ಇದೇ ವಿಷಯದ ಕುರಿತು ಚರ್ಚೆ ನಡೆದಿತ್ತು. "ವಿಶ್ವಕುಟುಂಬ" ಎಂಬ ಹೆಸರಿನ ಒಂದು ಸಂಸ್ಥೆ ಕಲಕತ್ತೆಯಲ್ಲಿ ಅದೇ ತಾನೆ ಸ್ಥಾಪಿತವಾಗಿತ್ತು. ಪರಸ್ಪರದ ದೇಶಗಳಿಗೆ

ಹೋಗಿ ಅಲ್ಲಿಯ ಕುಟುಂಬ ವ್ಯವಸ್ಥೆಯ ವಿವರ ವಿದ್ಯಮಾನಗಳನ್ನು ಸಂಗ್ರಹಿಸುವದು, ಅಖಿಲ ಪ್ರಪಂಚದಲ್ಲಿ ಸಾಮರಸ್ಯವನ್ನು ಉಂಟು ಮಾಡಲಿಕ್ಕೆ ಒಂದು ವಿಶ್ವ ಕುಟುಂಬವನ್ನೇ ಸ್ಥಾಪಿಸುವದು, ಇದು ಆ ಸಂಸ್ಥೆಯ ಉದ್ದೇಶವಾಗಿತ್ತು. ಕಲಕತ್ತಾ ವಿಶ್ವವಿದ್ಯಾಲಯದಲ್ಲಿ ಪದವೀ ಪರೀಕ್ಷೆಯಲ್ಲಿ ಪ್ರಥಮ ಸ್ಥಾನಗಳಿಸಿದ ವಿದ್ಯಾರ್ಥಿಯನ್ನು ಈ ಯೋಜನೆಗಾಗಿ ಆಯ್ಕೆ ಮಾಡುವ ಪದ್ಧತಿಯನ್ನು ಇಟ್ಟುಕೊಳ್ಳಲಾಗಿತ್ತು. ಈ ವರ್ಷ ಸಂಸ್ಕೃತ ವಿಷಯವನ್ನು ತೆಗೆದುಕೊಂಡು ಭಾರತೀ, ವಿದ್ಯಾಪೀಠಕ್ಕೆ ಪ್ರಥಮ ಸ್ಥಾನದಲ್ಲಿ ಬಂದಿದ್ದಳು. ಭಾರತೀಯ ವಿದ್ಯೆಗಳ ಕುರಿತು ಜರ್ಮನಿಯ ವಿದ್ವಾಂಸರಿಗೆ ಅಪಾರ ಪ್ರೀತಿಯಾದ್ದರಿಂದ ಭಾರತಿಯು ಮೊದಲು ಜರ್ಮನಿಗೆ ಹೋಗಬೇಕು, ಮತ್ತು ಅಲ್ಲಿಯ ಕಟುಂಬ ವ್ಯವಸ್ಥೆಯ ವಿಷಯವನ್ನು ಸಂಗ್ರಹಿಸಬೇಕು—ಎಂದು ನಿರ್ಣಯವಾಗಿತ್ತು. ಆದರೆ ಈ ವಿದೇಶಯಾತ್ರೆಯ ಎಲ್ಲ ವೆಚ್ಚವನ್ನು 'ವಿಶ್ವ ಕುಟುಂಬ' ಸಂಸ್ಥೆ ಹೊರುವದು ಸಾಧ್ಯವಿದ್ದಿಲ್ಲ. ವೆಚ್ಚದ ಕೆಲ ಪಾಲನ್ನು ದಿನೇಶಬಾಬುಗಳೇ ಹೊರಬೇಕಾಗುತ್ತಿತ್ತು. ಮತ್ತು ಈ ಸಂಗತಿಯೇ ಅವರಿಗೆ ಬೇಡವಾಗಿತ್ತು. ಅವರ ವ್ಯಾಪಾರಿ ವೃತ್ತಿಯ ಲೆಕ್ಕಾಚಾರಕ್ಕೆ ಅದು ಸರಿಗೂಡುತ್ತಿದ್ದಿಲ್ಲ.

ಫ್ರಾಂಜ ಮ್ಯುಲರ ಅವರಲ್ಲಿ ಅತಿಥಿಯಾಗಿ ಬಂದಾಗ ಸ್ವಾಭಾವಿಕವಾಗಿಯೇ ಈ ಪ್ರಶ್ನೆ ಅವರ ಇದುರಿಗೆ ಚರ್ಚೆಗೆ ಬಂದಿತು. ಭಾರತೀ ಅವರ ಬೆನ್ನೇ ಬಿಡಲಿಲ್ಲ. ಅವಳು ಜರ್ಮನಿಯ ಬಗೆಗೆ ಅಲ್ಲಿಯ ಕುಟುಂಬ ಜೀವನದ ಬಗೆಗೆ ಅವರಿಗೆ ಪರಿಪರಿಯ ಪ್ರಶ್ನೆಗಳನ್ನು ಕೇಳಿದಳು. ಅವರೂ ತುಂಬ ಆಸ್ಥೆಯಿಂದ ಅವಳ ಆ ಎಲ್ಲ ಪ್ರಶ್ನೆಗಳಿಗೆ ಉತ್ತರವಿತ್ತಳು. "ನಾನು ನಿಮ್ಮ ದೇಶಕ್ಕೆ ಹೋಗಬೇಕೋ ಬೇಡವೊ? ನಿಮ್ಮ ಮತವೇನು?" ಎಂದು ಭಾರತೀ ಮತ್ತೆ ಮತ್ತೆ ಕೇಳಬೇಕು—ಮತ್ತು "ಇದೆಂಥ ಪ್ರಶ್ನೆ! ನಾನು ಬಂದಿಲ್ಲವೆ ನಿಮ್ಮ ದೇಶಕ್ಕೆ? ಅಂದಾಗ ನೀವು ನಮ್ಮಲ್ಲಿ ಬಂದು ಋಣ ತೀರಿಸ ಬೇಡವೇ?" ಎಂದು ಫ್ರಾಂಜ ಮ್ಯುಲರ ಉತ್ತರ ಕೊಡಬೇಕು—ಹೀಗೆ ಆಗಾಗ್ಗ ನಡೆಯುತ್ತಿತ್ತು.

ತನ್ನ ಮೃತ ತಂದೆಯ ಅಸ್ಥಿಗಳನ್ನೂ ಜತೆಗೆ ತೆಗೆದು ಕೊಂಡು ಅವನ್ನು ಗಂಗೆಯಲ್ಲಿ ವಿಸರ್ಜನೆ ಮಾಡಲಿಕ್ಕೆ ಈ ಜರ್ಮನ್ ಮನುಷ್ಯ ಇಷ್ಟು ದೂರ

ಭಾರತಕ್ಕೆ ಬಂದಿದ್ದಾನೆ—ಈ ಸಂಗತಿಯು ಆಶ್ಚರ್ಯವು ಮಾತ್ರ ದಿನೇಶ ಬಾಬುಗಳ ಮನದಲ್ಲಿ ತಳವೂರಿ ಕೂತು ಬಿಟ್ಟಿತು. ಅವರು ಈ ಕುರಿತು ಫ್ರಾಂಜ ಮ್ಯುಲರರನ್ನೂ ಕೇಳಿದರು. ಆಗ ಅವರೆಂದರು. "ನಿಜವಾಗಿಯೂ ನಿಮ್ಮ ಈ ಗಂಗೆ ಮತ್ತು ಈ ದೇಶ ಪವಿತ್ರವಿದೆ. ಪ್ರಪಂಚದ ಎಲ್ಲ ಪವಿತ್ರ ಸಂಗತಿಗಳನ್ನು ಒಟ್ಟು ಗೂಡಿಸಿ ಈ ಗಂಗೆಯ ಪ್ರವಾಹದಲ್ಲಿ ಹರಿಯಬಿಟ್ಟಂತಿದೆ. ಅಂದಾಗ ಇದರ ದರ್ಶನಕ್ಕಾಗಿ ನಾವು ಏಕೆ ಬರಬಾರದು ? ನನ್ನ ತಂದೆಯವರು ಕೊನೆಯ ಗಳಿಗೆಗೆ ಈ ಗಂಗೆಯ ತೀರ್ಥವನ್ನು ಕುಡಿದೆ ಪ್ರಾಣ ಬಿಟ್ಟರು.

ಭಾರತಿ ನಡುವೆಯೆ ಕೇಳಿದಳು "ಅಲ್ಲಿ ಎಲ್ಲಿ ಗಂಗಾ ತೀರ್ಥ ?"

ಫ್ರಾಂಜ ಮ್ಯುಲರ ಅಂದರು "ನಮ್ಮ ಮನೆಯ ಕೆಳಗಡೆ ಡಿಟಮಾರ ಒಟೊಮನ ಎಂಬ ಒಬ್ಬ ಗೃಹಸ್ಥರಿದ್ದಾರೆ. ಅವರು ಹಳೆಯ ಭಾರತೀಯ ವಸ್ತುಗಳ ಅಂಗಡಿಯೊಂದನ್ನು ಇಟ್ಟಿದ್ದಾರೆ. ನನ್ನ ತಂದೆಯವರು ಅವರಿಂದ ಬೇಕೆಂದು ಗಂಗಾ ತೀರ್ಥವನ್ನು ತರಿಸಿಕೊಂಡರು.—ಭಾರತದಲ್ಲಿಯ ಅವರ ಮಿತ್ರರಿಂದ. ನನ್ನ ತಂದೆಯವರಿಗೆ ಹಿಂದೂ ಧರ್ಮದ ಬಗೆಗೆ ಅಷ್ಟೊಂದು ಅಭಿಮಾನ. ಹಿಂದೂ ಧರ್ಮದ ರೀತಿಯಂತೆಯೆ ತನ್ನನ್ನೂ ದಹನ ಮಾಡಿರಿ, ತನ್ನ ಅಸ್ಥಿಗಳನ್ನು ಗಂಗೆಯಲ್ಲಿ ಹಾಕಿರಿ ಎಂಬುದೆ ಅವರ ಕೊನೆಯ ಇಚ್ಛೆಯಾಗಿತ್ತು. ಈ ಗಂಗಾನದಿಯನ್ನು ನೋಡಿದಾಗ ನನಗೂ ಹಾಗೆಯೇ ಅನಿಸುತ್ತದೆ. ಈ ಗಂಗೆಯ ಉದರದಲ್ಲಿ ಚಿರವಿಶ್ರಾಂತಿ ಪಡೆಯಬೇಕು !"—

ಹೀಗೆ ಅನ್ನುತ್ತಿದ್ದಂತೆ ಫ್ರಾಂಜ ಮ್ಯುಲರ ಗಂಭೀರರಾದರು. ಭಾರತಿ ಅವರನ್ನು ಕೇಳಿದಳು. "ನಿಮ್ಮ ಹೈಡೆಲಬರ್ಗದಲ್ಲಿ ನದಿ ಯಾವದು ?

"ನೇಕರ ? "

"ಅದು ನಿಮಗೆ ಪವಿತ್ರವೆನಿಸುವದಿಲ್ಲವೆ ?"

ಅವಳ ಈ ಪ್ರಶ್ನೆಗೆ ಫ್ರಾಂಜ ಮ್ಯುಲರ ಅಂದರು." ನಮ್ಮ ನೇಕರ ನದಿಯಲ್ಲಿ ನೀರಿದೆ. ನಿಮ್ಮ ಗಂಗೆಯಲ್ಲಿ ತೀರ್ಥವಿದೆ."

ಮತ್ತು ಇಷ್ಟು ಹೇಳಿ ಅವರು ನಗುತ್ತ ಮುಂದರಿದರು." ಅದೇನೇ ಇದ್ದರೂ ನಮ್ಮ ದೇಶವನ್ನು ನೋಡಲು ನೀವು ಅವಶ್ಯ ಬನ್ನಿರಿ. ನಾನು ನಿಮಗೆ ನಮ್ಮ ಮನೆಯವರಿಗೆ ಒಂದು ಪತ್ರವನ್ನು ಕೊಡುತ್ತೇನೆ."

ಭಾರತೀ ಒಮ್ಮೆಲೇ ಕೇಳಿದಳು. "ಮನೆಯಲ್ಲಿ ಯಾರು ಯಾರು ಇದ್ದಾರೆ ?"

ಫ್ರಾಂಜ ಇಷ್ಟೇ ಅಂದರು. "ಹೆಂಡತಿ ಮತ್ತು ಮಗ!"

ಭಾರತೀ ಮತ್ತೆ ಕೇಳಿದಳು. "ಅವರಿಗೂ ನಮ್ಮ ಧರ್ಮ, ನಮ್ಮ ದೇಶ ಮೆಚ್ಚುತ್ತಿರಬೇಕು—ನಿಮ್ಮಂತೆಯೇ ?"

ಫ್ರಾಂಜ ಮ್ಯುಲರ ಸುಮ್ಮನೆ ಕುಳಿತರು. ಅದನ್ನು ನೋಡಿ ಭಾರತೀ ಅಂದಳು. "ಕ್ಷಮಿಸಿ, ನಿಮಗೆ ಬೇಡವಾದ ಪ್ರಶ್ನೆಯನ್ನು ನಾನು ಕೇಳಿದ್ದರೆ."

ಫ್ರಾಂಜ ಮ್ಯುಲರ ಉದಾಸೀನವಾಗಿ ನಕ್ಕರು. ಅಪರಂದರು. "ನಿಮ್ಮ ಧರ್ಮಕ್ಕೆ ನನ್ನ ಹೆಂಡತಿ ಕಡು ವೈರಿ.... ಆದರೆ ಏನು ಮಾಡಲಿ ? ಪ್ರತಿ ಯೊಬ್ಬರೂ ತನ್ನ ಪ್ರವೃತ್ತಿಗೆ ಅನುಸಾರವಾಗಿಯೇ ನಡೆಯುತ್ತಾರೆ. ಅವಳು ಆಕೆಯ ಪ್ರವೃತ್ತಿಯಂತೆ, ನಾನು ನನ್ನಂತೆ. ಯಾರೂ ಯಾರನ್ನೂ ಬದಲಿಸ ಲಾರರು.... ಮಗನು ಮಾತ್ರ ನಮ್ಮದೇ ಪಿಂಡ. ಅವನಿಗೂ ನಿಮ್ಮ ಹಿಂದೂ ಧರ್ಮದ ಬಗೆಗೆ ಅದೆಷ್ಟು ಪ್ರೀತಿ !"

ಭಾರತೀ ನಗುತ್ತ ಕೇಳಿದಳು "ಹಾಗಾದರೆ ಅವನಿಗೂ ನನಗೂ ಸರಿ ಹೋಗಬಹುದು !"

ಆದರೆ ಕೆಲ ಹೊತ್ತು ಕಳೆದು ಆಕೆ ಕೇಳಿದಳು. "ಆದರೆ ನಿಮ್ಮ ಮಗ ಎಷ್ಟು ದೊಡ್ಡವ ? ಅವನ ಹೆಸರೇನು ?

ಫ್ರಾಂಜ ಮ್ಯುಲರ ನಕ್ಕರು. ಮತ್ತು ಅಂದರು. "ನಿಮಗಿಂತ ಆತ ಬಹಳ ದೊಡ್ಡವ. ಅಲ್ಲದೆ ಆತ ಬಹಳ ಬುದ್ಧಿವಂತ. ಎಂಜನಿಯರನಾದ ಮೇಲೆ ಕ್ರಪ ಕಂಪನಿಯಲ್ಲಿ ಅವನಿಗೆ ಭಾರೀ ದೊಡ್ಡ ಕೆಲಸ ಸಿಕ್ಕಿದೆ .... ಅವನ ಅಜ್ಜ ಅವನಿಗೆ ಏನು ಹೆಸರಿಟ್ಟಿದ್ದಾನೆ ಗೊತ್ತೋ? ಗೋಕುಲಾಷ್ಟಮಿಗೆ ಅವನ ಜನನವಾಯಿತು. ಆದ್ದರಿಂದ ಅವರು ಅವನಿಗೆ ಎಷ್ಟೊಂದು ಪ್ರೀತಿ ಯಿಂದ ಮುಕುಂದನೆಂದು ಹೆಸರಿಟ್ಟರು. ಆದರೆ ಅದು ಅವನ ತಾಯಿಗೆ ಏನೇನೂ ಒಪ್ಪಿಗೆ ಆಗಲಿಲ್ಲ ನಿಮ್ಮ ಧರ್ಮದ ಬಗೆಗಂತೂ ಅವಳ ರೋಮ ರೋಮದಲ್ಲಿ ದ್ವೇಷ ತುಂಬಿದೆ. ಅವಳು ಅವನನ್ನು ಹಿಂದೂ ಧರ್ಮದ ಗಾಳಿ

ಸೋಂಕುವಲ್ಲಿಯೂ ನಿಲ್ಲಲು ಬಿಡಲೊಲ್ಲಳು. ಆದರೆ ನಿಮಗೆ ಸುಳ್ಳೆಂದು ಅನಿಸೀತು—ಆತ ಎಷ್ಟೊ ಸಲ ತಾಯಿಯ ಕಣ್ಣು ತಪ್ಪಿಸಿ ಧ್ಯಾನಕ್ಕೆ ಕೂಡ್ರು ತ್ತಾನೆ —ಥೇಟು ನಿಮ್ಮ ಶಂಕರನಂತೆ ! ಅವನ ಅಜ್ಜನಂತೂ ಅವನನ್ನು ಕೊನೆಯ ವರೆಗೂ ಮುಕುಂದನೆಂದೇ ಕರೆಯುತ್ತಿದ್ದರು.

"ಮುಕುಂದ ! ಏನು ಮೋಜು ! ಮುಕುಂದ ! ಎಂದು ಭಾರತೀ ಮನ ಸೋಕ್ತ ನಕ್ಕು ಸಕ್ಕು ಬಿದ್ದಳು.

ಒಂದು ವಿಷಯದ ಇತ್ಯರ್ಥ ಮಾಡುವಂತೆ ಫ್ರಾಂಜ ಮ್ಯುಲರ ಅಂದರು. "ನಮ್ಮ ಹೈಡೆಲಬರ್ಗ ವಿದ್ಯಾಪೀಠವನ್ನು ನೀವು ನೋಡಲೇ ಬೇಕು. ನಿಮ್ಮ ಸಂಸ್ಕೃತದ ಅಧ್ಯಯನ ಅಲ್ಲಿ ಬಲು ದೊಡ್ಡ ಪ್ರಮಾಣದಲ್ಲಿ ಸಾಗಿದೆ. ಸಂಸ್ಕೃತದಲ್ಲಿಯ ಎಲ್ಲ ಗ್ರಂಥಗಳೂ ಅಲ್ಲಿ ಇವೆ. ಅಲ್ಲದೆ 'ಭಾರ ತೀಯ ಸಂಸ್ಕೃತಿ' ಈ ವಿಷಯವನ್ನು ನಾವು ಅಲ್ಲಿ ಕಲಿಸುತ್ತೇವೆ. ನಾನೇ ಆ ವಿಷಯದ ಅಧ್ಯಾಪಕನಿದ್ದೆ. ನೀವು ನಮ್ಮ ದೇಶಕ್ಕೆ ಹೋಗಲೇಬೇಕು, ಹೋಗಲೇ ಬೇಕು."

"ನೀವೆಂದು ಮರಳುವಿರಿ ? "

ಭಾರತೀಯ ಈ ಪ್ರಶ್ನೆಗೆ ಫ್ರಾಂಜ ಮ್ಯುಲರರು ನಗುತ್ತ ಅಂದರು. "ಹೇಗೆ ಯೋಗಾಯೋಗವಿದೆಯೊ ಹಾಗೆಯೇ ಆಗುವದು. ಅದೇನು ನನ್ನ ಕೈಯಲ್ಲಿ ಇದೆಯೇ? ನಾನಂತೂ ಹೀಗೆ ಅನ್ನುತ್ತೇನೆ– ನನ್ನ ಬದಲಾಗಿ ನೀವು ಅಲ್ಲಿಗೆ ಹೋಗಿರಿ. ನಾನು ನಿಮಗೆ ನಮ್ಮಲ್ಲಿಗೆ ಪತ್ರ ಕೊಡುತ್ತೇನೆ.... ಅವ ರಿಗೆ ಹೇಳಿ, ನಾನು ಭಾರತದಲ್ಲಿ ಕುಶಲವಾಗಿದ್ದೇನೆ. ಅಲ್ಲಿ ಬರಲು ನೋಡುವೆನು ಇಲ್ಲವಾದರೆ...."

ಇಷ್ಟೇ ಹೇಳಿ ಅವರು ಸುಮ್ಮನಾದರು.

ಅನಂತರ ಭಾರತೀಯ ಗಮನದ ಕುರಿತು ಅವರ ಮನೆಯಲ್ಲಿ ಬಹಳ ಚರ್ಚೆ ಆಗಲಿಲ್ಲ. ಅವಳು ಮ್ಯುಲರ ಸಾಹೇಬರ ಪರಿಚಯ ಪತ್ರ ಪಡೆದು ಕೊಂಡು ಅಲ್ಲಿಗೆ ಹೋಗಬೇಕು ಮತ್ತು ಕೆಲವು ದಿನ ಅವರ ಮನೆಯಲ್ಲಿಯೆ ಉಳಿಯಬೇಕು—ಎಂದು ತಿರ್ಮಾನವಾಯಿತು.

ಆ ದಿನ ನಸುಕಿಗೆ ಫ್ರಾಂಜ ಮ್ಯುಲರ ಫಕ್ಕನೆ ಎಚ್ಚರಾದರು. ಅಂದು ಮುಂಜಾನೆ ಎದ್ದು ಅವರು ಕಾಶಿಗೆ ಹೋಗಲು ಹೊರಡುವವರು. ನಸುಕಿಗೆ ಅವರಿಗೆ ಎಚ್ಚರಾದಾಗ ಚಂದ್ರನು ಆಕಾಶದ ಮಧ್ಯಕ್ಕೆ ಏರಿದ್ದನು. ಮತ್ತು ಅಡಕೆ - ತೆಂಗುಗಳ ಚೆಂಡೆಗಳು ಆ ಬೆಳ್ಳಿಯ ಬೆಳಕಿನಲ್ಲಿ ಹೊಳೆಯುತ್ತಿದ್ದವು. ಗ್ಯಾಲರಿಯ ಬಳಿಯ ಕಿಟಕಿಯಿಂದ ಅವರ ಕಣ್ಣು ಹೊರಗೆ ಹೊರಳಿತು. ಹೊರಗೆ ಕೆರೆಯ ನೀರಿನಲ್ಲಿ ಚಂದ್ರನ ಧವಲ ಪ್ರತಿಬಿಂಬವು ಸ್ಪಷ್ಟವಾಗಿ ಬಿದ್ದಿತ್ತು. ಆ ಜಲಾಶಯದಿಂದಲೆ ಬೆಳದಿಂಗಳು ಮೇಲೆ ತೂರಿ ಬಂದು ಮರ ಗಳ ನೆತ್ತಿಗಳನ್ನು ಬೆಳಗುತ್ತಿತ್ತೋ- ಎಂಬಂತೆ ತೋರುತ್ತಿತ್ತು. ಅವರು ಮನದಲ್ಲಿಯೇ ಅಂದು ಕೊಂಡರು. "ಹಿಂದುಗಳ ಈ ಭೂಮಿಯಲ್ಲಿ ನಡೆ ಯುತ್ತಿರುವ ಜ್ಞಾನದ ಪವಿತ್ರ ಸಾಮ್ರಾಜ್ಯವು ಇದೆ ಪ್ರಕಾಶದಿಂದಾಗಿರ ಬಹುದೇ? ಪ್ರಕಾಶಕ್ಕೂ ಜ್ಞಾನಕ್ಕೂ ಅನ್ಯೋನ್ಯ ಸಂಬಂಧವಿದ್ದೇ ಇದೆ ಮತ್ತು ಕೊನೆಗೂ ಆ ಜ್ಞಾನದೊಳಗಿಂದಲೆ ನಿಜವಾದ ಜೀವನ ನಿರ್ಮಾಣ ವಾಗುವದು"

* * * * *

ಬಾಂಕೀಪುರದಿಂದ ಫ್ರಾಂಜ ಮ್ಯುಲರ ಕಾಶಿಗೆ ಹೋದರು. ಒಂದು ದಿನ, ಮಧ್ಯಾಹ್ನ ಆ ಅದ್ಭುತ ದೃಶ್ಯವನ್ನು ಕಂಡೊಡನೆ ಅವರು ಇದೇ ಉದ್ಗಾರವನ್ನು ತೆಗೆದರು.

ಆ ದಿನ ಮುಂಜಾನೆ ತಂದೆಯ ಅಸ್ಥಿಗಳನ್ನು ಗಂಗೆಯಲ್ಲಿ ವಿಧಿಪೂರ್ವಕ ವಿಸರ್ಜನೆ ಮಾಡಿದ ಮೇಲೆ ಫ್ರಾಂಜ ಮ್ಯುಲರ ಗಂಗೆಯ ಘಾಟಿನ ಮೇಲೆ ಕುಳಿತಿದ್ದರು. ಮಂಜಿನೊಳಗಿಂದ ಸೂರ್ಯ ಆಗತಾನೆ ತಲೆಹೊರಗೆ ಎತ್ತಿದ್ದ. ಇದುರಿನಿಂದ ಒಂದು ದೋಣಿಯು ನೀರನ್ನು ಸೀಳುತ್ತ ನಡೆದಿತ್ತು. ಆ ದೋಣಿಯ ಹಿಂದೆ ನೀರಿನ ಮೇಲೆ ಎಣ್ಣೆಯ ಪಟಲ ಮೂಡುತ್ತಿತ್ತು. ಆ ದೋಣಿಯಲ್ಲಿ ಬಿಳಿಯ ಶುಭ್ರ ಬಟ್ಟೆಗಳನ್ನು ತೊಟ್ಟ ಹೆಂಗಸರು ಕೂತಿದ್ದು ಆ ಮಂಜಿನ ತೆರೆಯೊಳಗಿಂದ ಅಸ್ಪಷ್ಟವಾಗಿ ಕಾಣುತ್ತಿತ್ತು. ಮಂಜು ಕವಿದು ಆಚೆಯದೇನೂ ಕಾಣುತ್ತಿದ್ದಿಲ್ಲ. ಆದ್ದರಿಂದ ಆ ದೋಣಿ ಅಜ್ಞಾತ ದತ್ತ ಪ್ರಯಾಣ ಬೆಳಿಸಿದಂತೆ ಅನಿಸುತ್ತಿತ್ತು. ಮೆಲ್ಲ ಮೆಲ್ಲನೆ ಮಂಜು

ಮುಸುಕಿನೊಳಗಿಂದ ಸೂರ್ಯನ ಬೆಳಕು ನುಗ್ಗಿ ಬರಹತ್ತಿತು. ಮತ್ತು ಘಾಟಿನ ಹಿಂದೆ ಘಾಟು ಒಂದೊಂದಾಗಿ ಕಣ್ಣತೆಕ್ಕೆಯಲ್ಲಿ ಬರಹತ್ತಿದವು. ನೋಡ ನೋಡುತ್ತ ಮಂಜು ಎಲ್ಲೋ ಮಾಯವಾಗಿ ಬಿಟ್ಟಿತು ಮತ್ತು ಸೂರ್ಯ ಪ್ರಕಾಶದ ಸಾಮ್ರಾಜ್ಯ ಆರಂಭವಾಯಿತು. ಆ ಬೆಳಕಿನಲ್ಲಿ ದೇವಾಲಯಗಳ ಬಂಗಾರದ ಕಳಸಗಳು ಮಿಂಚ ಹತ್ತಿದವು. ಮಶೀದಿಗಳ ಮಿನಾರುಗಳೂ ಹೊಳೆಯ ಹತ್ತಿದವು. ಅಲ್ಲಲ್ಲಿ ಆಶ್ರಮಗಳು, ಇಮಾರತುಗಳು ಒಂಟಿಯಾದರೂ ವೈಶಿಷ್ಟ್ಯಪೂರ್ಣವಾಗಿ ಕಾಣಹತ್ತಿದವು. ಆ ಗಿಡ್ಡ ಇಮಾರತುಗಳ ಹಿನ್ನೆಲೆಗೆ ಇನ್ನೂ ಮಂಜಿನ ರಾಜ್ಯ ಪಸರಿಸಿಯೇ ಇತ್ತು. ಅಜ್ಞಾತದಲ್ಲಿ ವಿಲೀನವಾಗುವುದು ಈ ಆಶ್ರಮಗಳ ಧರ್ಮವೇ ಆಗಿತ್ತು. ದಶಾಶ್ವಮೇಧ ಘಾಟ, ಪಂಚತೀರ್ಥ ಘಾಟ, ಮಣಿಕರ್ಣಿಕಾ ಘಾಟ, ನಾರದ ಘಾಟ ಹೀಗೆ ಎಷ್ಟೋ ಘಾಟುಗಳು ಕಣ್ಣ ಅಂಗಳದಲ್ಲಿ ಬರಹತ್ತಿದವು. ಇದೇ ದಶಾಶ್ವಮೇಧ ಘಾಟಿನಲ್ಲಿ ಬ್ರಹ್ಮದೇವನು ಹತ್ತು ಅಶ್ವಮೇಧಗಳನ್ನು ಮಾಡಿದನು. ಇದೇ ಮಣಿಕರ್ಣಿಕಾ ಘಾಟಿನಲ್ಲಿ ಪಾರ್ವತಿಯ ಕರ್ಣಪುಷ್ಪವು ಕಳಚಿ ಬಿತ್ತು. ಅಲ್ಲಿಯೇ ಒಂದು ಅಮೃತಶಿಲೆಯ ತುಂಡಿನ ಮೇಲೆ ಶ್ರೀವಿಷ್ಣುವಿನ ಪಾದುಕೆಗಳು ಕೊರೆದಿರುವವು. ಅದರ ಮೇಲ್ಗಡೆಗೆ ದುರ್ಗಾದೇವಿಯ ಗುಡಿಯ ಸುವರ್ಣಕಲಶವು ಭಾರಿ ದಿಮಾಕಿನಿಂದ ಮಿರಿಮಿರಿ ಮಿಂಚುತ್ತಿತ್ತು. ಪಂಚಗಂಗಾತೀರ್ಥದ ಕಥೆಯಂತೂ ಇದಕ್ಕೂ ವಿಚಿತ್ರ. ಆ ತೀರ್ಥಸ್ಥಾನದಲ್ಲಿ ಗಂಗೆಗೆ ನಾಲ್ಕು ನದಿಗಳು ಬಂದು ಕೂಡಿದವು; ಆದರೆ ಅವೆಲ್ಲವೂ ಅದೃಶ್ಯ ರೂಪದಲ್ಲಿ ಇದ್ದವು. ಗಂಗೆಯ ಕೆಳಗಡೆಗೆ, ಆ ಬದಿಗೆ ಸೇತುವಿನ ಆಚೆಗೆ ಇರುವ ಆದಿಕೇಶವ ಘಾಟವು ಮಾತ್ರ ಕಣ್ಣತೆಕ್ಕೆಗೆ ಬರುತ್ತಿದ್ದಿಲ್ಲ.

ಇದುರಿಗೆ ಕಾಣುವ ಎಲ್ಲ ಘಾಟುಗಳ ಸಮಾಚಾರ ಫ್ರಾಂಜ ಮ್ಯುಲರ ಕೇಳಿ ತಿಳಿದುಕೊಂಡಿದ್ದರು. ಅವರ ದೃಷ್ಟಿಗೆ ವಿವಿಧ ರೂಪದ ನೋಟಗಳು ಕಂಡು ಬರುತ್ತಿದ್ದವು. ಅವು ಅವರಿಗೆ ತೀರ ಅಪರಿಚಿತವೆಂಬಂತೆ ತೋರುತ್ತಿದ್ದವು. ಅಸಂಖ್ಯ ಭಾವಿಕ ಮಂದಿ ಗಂಗಾಸ್ನಾನಕ್ಕೆ ಬಂದಿದ್ದರು ಕೆಲವರು ಸ್ನಾನ ಮುಗಿಸಿ ದರ್ಶನಕ್ಕಾಗಿ ಹೊರಟಿದ್ದರು. ಮಂದಿ ಸ್ನಾನಕ್ಕಾಗಿ ಇಳಿಯುವ, ಸ್ನಾನಮುಗಿಸಿ ಮೇಲೇರಿ ಬರುವ ಘಾಟಿನ ಪಾವಟಿಗೆಗಳು ಎಷ್ಟೊಂದು

ಸವೆದು ಹೋಗಿದ್ದವು, ಕೆಲವೆಡೆಗೆ ಒಡೆದೂ ಹೋಗಿದ್ದವು. ಕಳೆದ ಅಸಂಖ್ಯ ವರ್ಷ ಲಕ್ಷಾವಧಿ ಭಾವಿಕ ಭಕ್ತರ ಮತ್ತು ತ್ಯಾಗಿತಪಸ್ವಿಗಳ ಪಾದ ಈ ಪಾವಟಿಗೆಗಳನ್ನೂ ಸ್ಪರ್ಶಿಸಿ ಹೋಗಿದ್ದವು. ಆದ್ದರಿಂದ ಆ ಪಾವಟಿಗಳ ಸ್ಥಿತಿ ಹೀಗಾಗಿತ್ತು. ಈ ಲೋಕಯಾತ್ರೆ ಇನ್ನು ಮುಂದೆಯೂ ಹೀಗೆಯೇ ನಡೆಯಲಿತ್ತು. ಘಾಟಿನ ಸುತ್ತಲೆಲ್ಲ ದೃಷ್ಟಿ ಬೀರಿದಾಗ ಕಿಕ್ಕಿರಿದು ನಿಂತ ಮನೆಗಳು ಕಾಣುತ್ತಿದ್ದವು. ಆ ಮನೆಗಳ ರೀತಿಗಳಾದರೂ ಎಷ್ಟು ವಿಚಿತ್ರ. ಉತ್ತುಂಗ ಅರಮನೆಗಳಿಂದ ನೆಲ ಹಿಡಿದು ನಿಂತ ಕುಳ್ಳ ಮನೆಗಳ ವರೆಗೆ ! ಅವುಗಳ ನಡುವೆ ಧರ್ಮಶಾಲೆಗಳ ಭವ್ಯ ಇಮಾರತುಗಳು ತಮ್ಮ ತಲೆಗಳನ್ನು ಎತ್ತರಿಸಿ ಭಾವಿಕರಿಗೆ ಆಶ್ರಯದ ಆಹ್ವಾನ ಕೊಡುತ್ತ ನಿಂತದ್ದು ಕಾಣುತ್ತಿತ್ತು.

ಫ್ರಾಂಜ ಮ್ಯುಲರರ ಕಣ್ಣು ಹಿಂದಿನ ಓಣಿಯ ರಸ್ತೆಯತ್ತ ಹೊರಳಿತು. ಮೈಗೆಲ್ಲ ಭಸ್ಮ ಬಳಿದುಕೊಂಡ ಜಟಾಧಾರಿಯೊಬ್ಬ ಆ ರಸ್ತೆಯಲ್ಲಿ ಹೊರಳುತ್ತ ಉರುಳುತ್ತ ನಡೆದಿದ್ದ. ಅವರು ವಿಚಾರಿಸಿದಾಗ ಗೊತ್ತಾಯಿತು. ಆತ ಏನೋ ಹರಕೆ ತೀರಿಸುವದಕ್ಕಾಗಿ ೪೦೦ ಮೈಲು ದೂರದಿಂದ ಹೀಗೆ ಹೊರಳುತ್ತ ಉರುಳುತ್ತ ವಿಶ್ವೇಶ್ವರನ ಲಿಂಗದಿದಿರು ತಲೆಯನ್ನು ಇಡಲಿಕ್ಕೆ ನಡೆದಿದ್ದಾನೆ. ತನ್ನದೇನೊ ಅಭೀಷ್ಟ ಸಿದ್ಧಿಯಾದರೆ ವಿಶ್ವೇಶ್ವರನ ಪಾದದ ತನಕ ಉರುಳತ್ತ ಬರುವೆನೆಂದು ಅನೇಕ ಮಂದಿ ಹರಕೆ ಹೊತ್ತು ಅದನ್ನು ತೀರಿಸಲಿಕ್ಕೆ ಇಲ್ಲಿಗೆ ಬರುತ್ತಾರೆ. ಈ ಮನುಷ್ಯ ಕಳೆದ ಎಂಟು ತಿಂಗಳು ರಸ್ತೆಯಲ್ಲಿ ಹೀಗೆ ಉರುಳುತ್ತ ಬರುತ್ತಿದ್ದ. ೪೦೦ ಮೈಲು ಅಂತರ ಕಡಿದು ಆ ದಿನ ಆತ ಈ ಪುಣ್ಯ ಕ್ಷೇತ್ರದಲ್ಲಿ ಬಂದು ತಲುಪಿದ್ದ.

ಈ ದೃಶ್ಯವನ್ನು ಕಂಡು ಫ್ರಾಂಜ ಮ್ಯುಲರ ಕೇವಲ ಚಕಿತರಾಗಿ ಬಿಟ್ಟರು. ಇದೊಂದು ಹುಚ್ಚಾಗಿದ್ದರೆ ಅದು ಶ್ರದ್ಧೆಯ ಹುಚ್ಚು. ಈ ಭರತ ಭೂಮಿಯಲ್ಲಿ ಮೂರ್ತಿಮತ್ತಾಗಿ ಶ್ರದ್ಧೆಯು ನಲಿಯುತ್ತಿದೆ; ಆದ್ದರಿಂದಲೇ ಈ ಭೂಮಿಗೆ ಇಷ್ಟು ಪಾವಿತ್ರ್ಯ ಪ್ರಾಪ್ತವಾಗಿದೆ— ಎಂದು ಅವರಿಗೆ ಮನಸ್ಸಿನಲ್ಲಿಯೇ ಅನಿಸಿತು.

ಕಾಶಿಗೆ ಬಂದಂದಿನಿಂದ ಅವರು ಅನೇಕ ಉದ್ವೇಗ ಜನಕ ನೋಟ ಗಳನ್ನು ನೋಡಿದ್ದರು. ಅವರು ಇಳಿದ ದೊಡ್ಡ ಹೊಟಲು ತೀರ ದರಿದ್ರ ವಿತ್ತು. ಅಲ್ಲಿಯ ಫರ್ನಿಚರುಗಳಿಗೆ ಕೆಟ್ಟ ಕಳೆಯೇರಿತ್ತು. ಅಲ್ಲಿಯ ಊಟ ಅವರಿಗೆ ರುಚಿಯಾಗಲಿಲ್ಲ. ಅತಿಥಿಗಳ ಸರಬರಾಜು ಇರುವದರಲ್ಲಿ ಯಾರೂ ತತ್ಪರರಿದ್ದಿಲ್ಲ. ಅಲ್ಲಿಂದ ಹೊರಬಿದ್ದಾಗ ಅವರಿಗೆ ಒಂದು ರಿಕ್ಷಾ ಕಂಡಿತು. ಆ ರಿಕ್ಷಾ ಒಬ್ಬ ಆಳು ಎಳೆಯುತ್ತಿದ್ದ. ಆ ಆಳು ಬಿಪೆತು ಮುದ್ದೆ ಚಿಂಬೆ ಆಗಿದ್ದ. ಆದರೆ ಒಳಗೆ ಕೂತ ಡೊಳ್ಳು ಹೊಟ್ಟೆಯ ದಾಂಡಿಗನಿಗೆ ಅದರ ಯಾವ ಪರಿವೆಯೂ ಇದ್ದಿಲ್ಲ. ಮನುಷ್ಯ ಮನುಷ್ಯನನ್ನು ದನದಂತೆ ಎಳೆಯು ತ್ತಿದ್ದ. ಅದೇ ರಸ್ತೆಯಿಂದ ನಡೆದ ಒಂದು ಎತ್ತಿನ ಬಂಡಿ ತುಂಬ ದೊಡ್ಡ ದೊಡ್ಡ ಮರದ ತೊಲೆ, ಧಾನ್ಯದ ಚೀಲ, ಬೆಲ್ಲದ ಪೇಟೆ ಇಷ್ಟೆಲ್ಲ ಮಾಲು ಜಡಿದು ಹೇರಿತ್ತು. ಆ ಎತ್ತು ಆ ಬಂಡಿಯನ್ನು ಎಳೆಯಲಾರವು. ಎತ್ತು ಹೇಗೋ ದರದರನೆ ನಡೆದಿದ್ದವು. ರಿಕ್ಷಾ ಎಳೆಯುವ ಆಳು ಹಾಗೆಯೇ ದರ ದರ ಎಳೆಯುತ್ತ ಸಾಗಿದ್ದ. ಪಶುವಿನಲ್ಲಿಯೂ ದೇವರನ್ನು ಕಾಣುವ ಈ ಭಾರತೀಯ, ಮನುಷ್ಯರಲ್ಲಿಯ ಪಶುವು ಇನ್ನೂ ತೊಲಗಿದ್ದಿಲ್ಲ. ಎಂಬ ವಿಚಾರ ಫ್ರಾಂಜ ಮ್ಯುಲರರ ಎದೆಗೆ ಝಲ್ಲೆಂದು ತಟ್ಟಿ ಹೋಯಿತು. ಈ ದೇವಭೂಮಿಯಲ್ಲಿ ಇದೇಕೆ–ಹೀಗೆ ನಡೆಯಬೇಕು ? ಎಂದು ಅವರು ತಮ್ಮ ಮನಸ್ಸಿಗೆ ಮತ್ತೆ ಮತ್ತೆ ಪ್ರಶ್ನೆ ಹಾಕಿದರು. ಈ ಜನ ದಾರಿದ್ರ್ಯದಿಂದ ಪೀಡಿತರು, ಆದ್ದರಿಂದಲೇ ಹೀಗೆ ನಡೆಯುವದೇ ? ಈ ದೇವಭೂಮಿ ಯಲ್ಲಿ ಈ ದಾರಿದ್ರ್ಯವನ್ನು ಯಾರು ಉಂಟು ಮಾಡಿದರು ? ಇದು ಯಾರ ಕೃತ್ಯ ?

ಈ ವಿಚಾರವು ಈಗಲೂ ಅವರ ಮನಸ್ಸಿನಲ್ಲಿ ಮೂಡಿತು. ಇದೇ ವೇಳೆಗೆ ಭಾವಿಕತೆಯ, ಶ್ರದ್ಧೆಯ ಇನ್ನೊಂದು ದೃಶ್ಯವೂ ಅವರ ಕಣ್ಣಿಗೆ ಬಿತ್ತು. ಕುರುಡ ಕುಂಟ, ಕಂಗಾಲ ತಿರುಕರ ಭಾರಿ ದೊಡ್ಡ ತಂಡವೊಂದು ಆ ರಸ್ತೆ ಯಲ್ಲಿ ಬಿಕ್ಕೆ ಬೇಡುತ್ತ ನಡೆದಿತ್ತು. ತಾಲ–ಸ್ವರ ಹಿಡಿದು ಅವರು ಹಾಡು ತ್ತಿದ್ದರು. “ಹರಿ ತುಮ್ ಬಹುತ ಅನುಗ್ರಹ ಕೀನ್ಹೋ !ಸಾಧನ ಧಾಮ ವಿಬುಧ ದುರಲಭ ತನು ಮೋಹಿ ಕೃಪಾ ಕರ ದೀನ್ಹೋ ! ಕೋಟಿಹುಂಮುಖ

ಕಹಿ ಜಾತನ ಪ್ರಭು:ಕೆ, ಏಕ ಏಕ ಉಪಕಾರ" ("ಹರಿಯೇ ನೀನು ನನ್ನ ಮೇಲೆ ಬಹಳ ಅನುಗ್ರಹ ಮಾಡಿರುವಿ, ಸಾಧನದ ಮನೆಯಾದ ಈ ದೇವರಿಗೂ ದುರ್ಲಭವಾದ ನರದೇಹವನ್ನು ನನಗೆ ಕೊಟ್ಟಿರುವಿ, ಇದೇ ನಿನ್ನ ಕೃಪೆ. ನಿನ್ನ ಒಂದೊಂದು ಉಪಕಾರವನ್ನು ಕೋಟಿ ಮುಖಗಳಿಂದಲೂ ಬಣ್ಣಿಸಲು ಸಾಧ್ಯವಿಲ್ಲ, ಹೇ ಪ್ರಭು !")

ಒಬ್ಬ ಗೃಹಸ್ಥ ಫ್ರಾಂಜರಿಗೆ ಈ ಭಜನೆಯ ಅರ್ಥವನ್ನು ವಿವರಿಸಿ ಹೇಳಿದನು. ಆಗ ಅವರು ಮನದಲ್ಲಿಯೆ ಅಂದರು. "ಇವರೆಲ್ಲ ತಿರುಕರು ಕುರುಡರು, ಕುಂಟರು, ಊನಾಂಗರು. ನಿಜವಾಗಿಯೂ ಇವರನ್ನು ಈ ರೀತಿ ನಿರ್ಮಿಸಿದ ಪರಮೇಶ್ವರನ ಹೆಸರನ್ನು ಈ ತಿರುಕರು ಭಕ್ತಿಭಾವದಿಂದ ಹೇಳುತ್ತಿದ್ದಾರೆ, ಅವನನ್ನು ಸ್ತುತಿಸುತ್ತಿದ್ದಾರೆ, ಅವನ ಕೃಪೆಯನ್ನು ಕೋರುತ್ತಿದ್ದಾರೆ. ಇಂಥ ಭಕ್ತಿಭಾವ, ಇಂಥ ಶ್ರದ್ಧೆ ಈ ಭೂಮಿಯಲ್ಲಿ ಅಲ್ಲದೆ ಬೇರೆ ಎಲ್ಲಿ ಕಂಡು ಬರುವದು ? "

ಫ್ರಾಂಜ ಮ್ಯುಲರರಿಗೆ ತಡೆಯಲಾಗಲಿಲ್ಲ. ಎದ್ದು ಆ ತಿರುಕನನ್ನು ತಡೆದು ಕೇಳಿದರು. "ದೇವರು ನಿಮ್ಮನ್ನು ಕುರುಡನಾಗಿ ಹುಟ್ಟಿಸಿದ್ದಾನೆ, ಕೆಲವರಿಗೆ ಕುರುಡು ಕೆಲವರಿಗೆ ಹೇಳವರಾಗಿ ನಿರ್ಮಿಸಿದ್ದಾನೆ. ಆದಾಗ್ಯೂ ನೀವು ಈ ಪರಮೇಶ್ವರನ ವರ್ಣನೆ ಮಾಡುವಿರಾ ? ಅವನ ಹೆಸರನ್ನು ಭಕ್ತಿಭಾವದಿಂದ ಹಾಡುವಿರಾ ? ಅವನನ್ನು ಕೊಂಡಾಡುವಿರಾ ? ನಿಜವಾಗಿಯೂ ಯಾರು ನಿಮ್ಮ ಅವಸ್ಥೆ ಈ ರೀತಿ ಮಾಡಿದನೋ ಅಂಥ ಆ ಪರಮೇಶ್ವರನ ಬಗೆಗೆ ನಿಮ್ಮಲ್ಲಿ ಸಿಟ್ಟು ಉಂಟಾಗಬೇಕಿತ್ತು, ದ್ವೇಷ ಹುಟ್ಟಬೇಕಿತ್ತು !"

ತಂಡದೊಳಗಿನ ಒಬ್ಬ ಮುದಿ ತಿರುಕನು ದಿಗ್ಗನೆ ಮುನ್ನುಗ್ಗಿ ಬಂದನು. ಅವನ ಕಣ್ಣಿನ ಕಳೆಗೆಟ್ಟ ಗೊಂಬೆಗಳು ತತ್ತರಿಸಿದವು. ಆತ ಕಳವಳದಿಂದ ಅಂದನು. ಸಾಹೇಬರೇ, ಹಾಗನ್ನ ಬೇಡಿ, ಇದು ನಮ್ಮ ಹಿಂದಿನ ಜನ್ಮದ ಪಾಪಗಳ ಫಲವನ್ನು ಹೇಗೆ ಉಂಡು ತೀರಿಸುತ್ತಿದ್ದೇವೆ. ಅದಕ್ಕಾಗಿ ಪರಮೇಶ್ವರನಿಗೆ ದೋಷ ಕೊಡುವದೇಕೆ ? ಅವನ ಭಕ್ತಿ ಮಾಡಲು ಆ ದೇವ ದುರ್ಲಭ ನರದೇಹವನ್ನು ಅವನು ಕೊಟ್ಟನು. ಈ ಜನ್ಮದಲ್ಲಿ ಅವನ ಭಕ್ತಿ

ಮಾಡಿದರೆ ಮುಂದಿನ ಜನ್ಮದಲ್ಲಿ ಆತ ನಮ್ಮನ್ನು ಸುಖಿಯಾಗಿ ಮಾಡುವನು."

ಭಾವಿಕ ಶ್ರದ್ಧೆಯ ಈ ವಿವಿಧ ರೂಪಗಳನ್ನು ನೋಡಿ ಫ್ರಾಂಜ ಮ್ಯುಲರ ನಿಜವಾಗಿಯೂ ಮರುಳಾದರು. ಈ ಭರತ ಭೂಮಿಯ ಬಗೆಗಿನ ಅವರ ಆಕರ್ಷಣ ಹೆಚ್ಚುತ್ತ ಹೋಯಿತು. ಕಾಶೀ ವಿಶ್ವೇಶರನ ದರ್ಶನಕ್ಕೆ ಹೊರಟ ಅಪಾರ ಜನಸಮುದಾಯ ಅವರ ಕಣ್ಣಿಗೆ ಬಿತ್ತು. ಅನಾದಿ-ಕಾಲದಿಂದಲೂ ಈ ದಿಕ್ಕಿನಲ್ಲಿ ನುಗ್ಗುವ ಈ ಜನಸಮೂಹ ಅವರ ಕಣ್ಣೆದುರು ನಿಂತಿತು. ಹಾಗೆಯೇ ಅನಂತಕಾಲದ ವರೆಗೂ ಈ ದಿಕ್ಕಿನಲ್ಲಿ ಸಾಗಲಿರುವ ಜನ ಸಮ್ಮರ್ದವೂ ಅವರಿಗೆ ಕಂಡಿತು. ಒಂದು ಕ್ಷಣಕಾಲ ಅವರು ಕಂಗೆಟ್ಟರು. ಕಣ್ಣೆದುರು ಕಾಣುವ ಈ ಜನಸಾಗರ ಮತ್ತು ಮುಂದೆ ಪ್ರತ್ಯಕ್ಷ್ಯದಲ್ಲಿ ಕಾಣುವ ಗಂಗಾಸಾಗರ ಇವೆರಡೂ ಒಂದರಲ್ಲೊಂದು ಬೆರೆತು ಹೋದಂತೆ ಅವರಿಗೆ ಕಂಡಿತು. ಪಾವಿತ್ರ್ಯದ ವಿಶಾಲತೆಯದೇ ವಿಶ್ವರೂಪ ದರ್ಶನ ಅವರಿಗೆ ಆಯಿತು. ತನ್ನ ಅಂತಃಕರಣದಿಂದ ಆನಂದ ಲಹರಿಯ ಸ್ಫುರಣ ಒಂದೇ ಸವನೆ ನಡೆದಿದೆ, ಮತ್ತು ಅದು ಇನ್ನು ಕಲ್ಪಾಂತದವರೆಗೂ ನಿಲ್ಲಲಾರದು-ಎಂಬ ಒಂದು ಸ್ಪಷ್ಟವಾದ ಭಾಸವು ಅವರಿಗೆ ಆಗಹತ್ತಿತ್ತು.

ಅಷ್ಟರಲ್ಲಿ ಆಚೆಯ ಕಡೆಯ ಘಾಟಿನಲ್ಲಿ ಜನಸಂದಣಿ ವರ್ತುಲಾಕಾರವಾಗಿ ನಿಂತದ್ದು ಕಂಡಿತು. ಸೂರ್ಯ ತೀರ ನೆತ್ತಿಯ ಮೇಲೆ ಬಂದಿದ್ದ. ಅಂಥ ಉರಿಯುವ ಬಿಸಿಲಿನಲ್ಲಿಯೂ ಅಸಂಖ್ಯ ಜನ ಅಲ್ಲಿ ಸುತ್ತು ಹಾಕಿ ನಿಂತಿತ್ತು. ಫ್ರಾಂಜ ಮ್ಯುಲರ ಆ ಸ್ಥಳಕ್ಕೆ ಹೋದರು. ಮತ್ತು ಆ ಜನ ಸಂದಣಿಯನ್ನು ಸೇರಿದರು.

ಆ ಗೋಲಾಕಾರವಾದ ನೆರವಿಯ ಮಧ್ಯ ಭಾಗದಲ್ಲಿ ಒಬ್ಬ ಜಟಾಧಾರಿ ವ್ಯಕ್ತಿ ನಿಂತಿತ್ತು. ಆತ ಅವರಿಗೆಲ್ಲ ಏನೋ ತಿಳಿಸಿ ಹೇಳುತ್ತಿದ್ದ. ಅವನ ಪಾದದ ಹತ್ತಿರ ಒಂದು ಗುಬ್ಬಿಯು ಸತ್ತು ಬಿದ್ದಿತ್ತು. ಆತ ಜನಸಂದಣಿಯಲ್ಲಿಯ ಜನಕ್ಕೆ ಕೂಗಿ ಹೇಳುತ್ತಿದ್ದ. "ಈ ಗುಬ್ಬಿಯು ಸತ್ತಿದೆಯೋ ಇಲ್ಲವೋ ಖಾತ್ರಿ ಮಾಡಿಕೊಳ್ಳಿರಿ. ಈ ಹಕ್ಕಿಯನ್ನು ನಾನು ತಿರುಗಿ ಜೀವಂತ ಮಾಡಿ ನಿಮಗೆ ತೋರಿಸುವವನಿದ್ದೇನೆ."

ಸುತ್ತಲಿನ ಜನವೆಲ್ಲ ಕಣ್ಣಲ್ಲಿ ಪ್ರಾಣ ಒಟ್ಟಾಗಿಸಿ ಈ ದೃಶ್ಯವನ್ನು ನೋಡುತ್ತಿದ್ದರು ಅದೇ ಹೊತ್ತಿಗೆ ಫ್ರಾಂಜ ಮ್ಯುಲರ ಅಲ್ಲಿ ಬಂದು ಮುಟ್ಟಿದರು. ನಡೆಯುತ್ತಿರುವ ಪ್ರಕಾರವೆಲ್ಲ ಗೊತ್ತಾದ ಮೇಲೆ ಅವರೂ ಆ ದೃಶ್ಯವನ್ನು ನೋಡುವದರಲ್ಲಿ ತನ್ಮಯರಾದರು.

ಆಮೇಲೆ ಆ ಜಟಾಧಾರಿ ತನ್ನ ಕೈಯಲ್ಲಿ ಒಂದು ಸಣ್ಣ ರಾಹು ಗನ್ನಡಿಯ ಹರಳನ್ನು ಹಿಡಿದು ಆ ಗುಬ್ಬಿಯ ಪುಟ್ಟ ಮೈಮೇಲೆ ಸೂರ್ಯನ ಬೆಳಕನ್ನು ಕೇಂದ್ರೀಕರಿಸಿದನು. ಎಲ್ಲರ ಕಣ್ಣು ಆ ಗುಬ್ಬಿಯ ಮೇಲೆ ಸ್ಥಿರ ವಾದವು. ಎರಡೋ ಮೂರೋ ಮಿನಿಟು ಕಳೆದಿರಬೇಕು. ಮೆಲ್ಲಗೆ ಆ ಸತ್ತ ಗುಬ್ಬಿಯ ಮೈಯಲ್ಲಿ ಚೇತನೆ ಬರಹತ್ತಿತು. ಮತ್ತು ನೋಡುತ್ತಿದ್ದಂತೆ ಆ ಗುಬ್ಬಿ ಗರಿಗೆದರಿ ಭುರ್‍ರನೆ ಹಾರಿ ಹೋಯಿತು. ಆದರೆ ಕೆಲವು ಅಂತರ ಹಾರಿದ ಮೇಲೆ ಅದು ಮತ್ತೆ ಸತ್ತು ಬಿದ್ದಿತು.

ಏನೇ ಇರಲಿ ಆ ಸತ್ತ ಗುಬ್ಬಿಯನ್ನು ಕೆಲ ಹೊತ್ತಾದರೂ ಆ ಜಟಾ ಧಾರಿಯು ತಿರುಗಿ ಜೀವತರಿಸಿ ಕಾಣಿಸಿದ್ದ. ಅದರಲ್ಲಿ ಯಾವದೇ ಕೈಚಳಕ, ಕಣ್ಣುಕಟ್ಟು ಇದ್ದಿಲ್ಲ, ಏನೂ ಜಾದು ಇದ್ದಿಲ್ಲ. ಗುಬ್ಬಿ ಸತ್ತಿತ್ತು- ಎಂಬ ಬಗೆಗೆ ಎಲ್ಲರೂ ಮನವರಿಕೆ ಮಾಡಿಕೊಂಡಿದ್ದರು. ಮತ್ತು ಕನ್ನಡಿ ಹರಳಿ ನಿಂದ ಬಿದ್ದ ಕಿರಣಗಳಿಂದ ಅದು ಮತ್ತೆ ಜೀವಂತವಾಗಿತ್ತು. ಈ ದೃಶ್ಯ ವನ್ನು ಎಲ್ಲರೂ ನೋಡಿದ್ದರು. ಆಮೇಲೆ ಆ ಜಟಾಧಾರಿಯು ಆ ಗುಂಪಿ ನಲ್ಲಿ ಅನೇಕರ ಕರವಸ್ತ್ರಗಳಿಗೆ ಬೇಕಾದ ಅತ್ತರಿನ ವಾಸನೆ ಬರುವಂತೆ ಮಾಡಿ ದನು. ಸ್ವತಃ ಫ್ರಾಂಜ ಮ್ಯುಲರರ-ಕರವಸ್ತ್ರವೇ 'ಗಾರ್ಡಿನಿಯಾ' ಸೆಂಟಿನ ಪರಿಮಳ ಸೂಸಹತ್ತಿತ್ತು. ಆದರೆ ಈ ಸುವಾಸನೆಗಿಂತ ಗುಬ್ಬಿಯ ಸಜೀವ ಚಮತ್ಕಾರದಿಂದ ಅವರು ಚಕಿತರಾಗಿ ಹೋದರು. ಕುತೂಹಲದಿಂದ ಅಸ್ವ ಸ್ಥರಾದರು. ಆ ಭರತಭೂಮಿಯ ಪ್ರಕಾಶದಲ್ಲಿ ಸತ್ತವರಿಗ ಸಂಜೀವಿನಿ ಯನ್ನು ಕೊಡುವ ಏನೋ ಶಕ್ತಿಯಿದೆ-ಎಂದು ಅವರಿಗೆ ಮತ್ತೆ ಮತ್ತೆ ಅನಿ ಸುತ್ತಲೇ ಇತ್ತು.

ಬನಾರಸ ವಿಶ್ವವಿದ್ಯಾಲಯದ ಡಾ. ಮಾಲವೀಯರು ಅವರನ್ನು ತಮ್ಮ ಮನೆಯಲ್ಲಿ ಇರಲು ಕರೆದರು. ಡಾ. ಮಾಲವೀಯ ತತ್ವಜ್ಞಾನದ ಪ್ರಾಧ್ಯಾ

ಪಕರು. ಸಹಜವಾಗಿಯೆ ಫ್ರಾಂಜ ಮ್ಯುಲರರಿಗೆ ಮಾಲವೀಯರ ಆಮಂತ್ರಣ ಬರುವದು ಮತ್ತು ಇವರು ಅವರ ಆತಿಥ್ಯ ಸ್ವೀಕರಿಸುವರು– ಎಂಬುದು ನಿಶ್ಚಿತವಾದಂತೆಯೇ ಇತ್ತು.

ಡಾ. ಮಾಲವೀಯರ ಮನೆಯಲ್ಲಿ ಫ್ರಾಂಜ ಮ್ಯುಲರ ಹೋಗಿ ಉಪಸ್ಥಿತರಾದಾಗಲೂ ಅವರ ಮನಸ್ಸಿನಲ್ಲಿ ಇವೇ ವಿಚಾರಗಳು ಸುಳಿದಿದ್ದವು. "ಈ ಭರತಭೂಮಿಯ ಪ್ರಕಾಶದಲ್ಲಿ ಅದ್ಭುತ ಶಕ್ತಿ ಇದೆ, ಪಾವಿತ್ರ್ಯವಿದೆ, ಪರಮೇಶ್ವರನ ಪ್ರೇರಣೆ ಇದೆ."

ಈ ವಿಚಾರವನ್ನು ಅವರು ಡಾ. ಮಾಲವೀಯರಿಗೆ ಆಡಿ ತೋರಿಸಿದಾಗ ಅವರೆಂದರು. "ನಮ್ಮ ಮನಸ್ಸಿನಲ್ಲಿ ಮಾತ್ರ ಈ ವಿಚಾರ ಎಂದೂ ಹೊಳೆದಿದ್ದಿಲ್ಲ. ನಾವು ಆ ದೃಷ್ಟಿಯಿಂದ ಎಂದೂ ವಿಚಾರ ಮಾಡಿದ್ದೇ ಇಲ್ಲ. ಬಹುಶಃ ನಿಮ್ಮ ಈ ಕಲ್ಪನೆ ಸರಿಯೇ ಇರಬಹುದು. ಆದರೆ ನಮ್ಮ ಸಂಸ್ಕೃತಿಗೆ ಒಂದು ಪುರಾತನ ಪರಂಪರೆ ಇದೆ. ಈ ಮಾತು ಮಾತ್ರ ಸತ್ಯ. ನಮ್ಮ ಸಂಸ್ಕೃತಿ ಪುರಾತನವಿದ್ದಷ್ಟೇ ಉಜ್ವಲವೂ ಆಗಿದೆ".

ಇದಕ್ಕೆ ಮ್ಯುಲರ ಅಂದರು, "ನಿಮ್ಮ ಸ್ವಾಮಿ ವಿವೇಕಾನಂದರು ಯಾವಾಗಲೂ ಹೇಳುತ್ತಿದ್ದರು. ಇಡೀ ಪ್ರಪಂಚದ ಅಧ್ಯಾತ್ಮಿಕ ಸೂತ್ರಗಳು ಪೂರ್ವದ ಕಡೆಯ ದೇಶಗಳ ಕೈಯಲ್ಲಿಯೇ ಉಳಿಯುವವು. ಏಕಂದರೆ ಸೂರ್ಯನ ಬೆಳಕು ಯಾವಾಗಲೂ ಪೂರ್ವದಿಂದ ಪಶ್ಚಿಮಕ್ಕೆ ಹೋಗುವದು. ಆದ್ದರಿಂದಲೆ ನನಗನಿಸೊದು; ಈ ನಿಮ್ಮ ಭೂಮಿಯ ಮೇಲಿನ ಪ್ರಕಾಶದಲ್ಲಿ ಏನೋ ಒಂದು ಜಾದುವಿದೆ, ನಿಜ."

ಪ್ರಾಧ್ಯಾಪಕ ಮಹಾಶಯರು ಇದಕ್ಕೆ ಇಷ್ಟೇ ಅಂದರು. "ಇರಲೂ ಬಹುದು. ಈ ನಮ್ಮ ಭೂಮಿಯಲ್ಲಿ ಒಂದು ಚಮತ್ಕಾರವಿದೆ. ಇಲ್ಲಿ ನಿಮಗೆ ಅನೇಕ ನಡೆದಾಡುವ ಮಾತಾಡುವ ಚಮತ್ಕರಗಳು ಕಂಡುಬರುವವು!

ಫ್ರಾಂಜ ಮ್ಯುಲರ ಅವರತ್ತ ಪ್ರಶ್ನಾರ್ಥಕ ಮುದ್ರೆಯಿಂದ ನೋಡಿದರು. ಆಗ ಅವರೆಂದರು. "ಈ ನಮ್ಮ ದೇಶದಲ್ಲಿ ಅನೇಕ ಸಾಧು–ಸಂತ

ರಿರುತ್ತಾರೆ. ಹಿಮಾಲಯದಲ್ಲಿಯಂತೂ ಅವರ ಗಣಿಯೇ ಇದೆ. ಅಲ್ಲಿಯ ಅನೇಕ ಸಾಧು ಸಂತರು ಆಕಾಶದಲ್ಲಿ ಸಂಚರಿಸುವರು. ನಿಮಗೆ ಇದು ನಿಜ ವೆಂದೇ ಕಾಣಲಿಕ್ಕಿಲ್ಲ. ಆದರೆ ನನಗೆ ಪಕ್ಕಾ ಗೊತ್ತು. ಹಿಮಾಲಯದ ಪರಿ ಸರದಲ್ಲಿ ಸಾಧುಗಳ ಒಂದು ತಂಡವಿದೆ. ಡೇರಾ ದಂಡಾ ಉಠಾವ!' ಎಂದೊಡನೆ ಆ ತಂಡಕ್ಕೆ ತಂಡವೆ ತಳಕಿತ್ತು ಅದೃಶ್ಯರೂಪದಲ್ಲಿ ಆಕಾಶ ಗಮನ ಆರಂಭಿಸುವದು. ಇದು ನಿಜ ಅನಿಸೀತೇ ಯಾರಿಗಾದರು?"

ಡಾ. ಮಾಲವೀಯರು ಮಾತಾಡುತ್ತಿದ್ದಾಗ ಫ್ರಾಂಜ ಮ್ಯುಲರ ಅವರ ಕಡೆಗೆ ಚಕಿತವಾದ ಆದರೆ ಭಾವಿಕ ಮುದ್ರೆಯಿಂದ ನೋಡುತ್ತಿದ್ದರು.

ಡಾ. ಮಾಲವೀಯ ಮುಂದರಿದರು. "ಹಿಮಾಲಯವೇಕೆ ? ನೀವು ದಕ್ಷಿಣಕ್ಕೆ ತಿರುಪತಿಗೆ ಹೋಗಿರಿ, ಅಲ್ಲಿ ವೆಂಕಟೇಶನ ಪ್ರಾಚೀನ ದೇವಾಲಯ ವಿದೆ. ತಿರುಪತಿಯಲ್ಲಿ ನಿಸರ್ಗ ಸೌಂದರ್ಯ ಮತ್ತು ಆಧುನಿಕ ವೈಭವ ಇವೆ ರಡೂ ತುಂಬಿ ತುಳುಕುತ್ತವೆ. ಆದರೆ ಅಲ್ಲಿಯೂ ಕೆಲ ಸಾಧು ಸಂತರಿದ್ದಾರೆ, ಯೋಗಿ ತಪಸ್ವಿಗಳಿದ್ದಾರೆ. ಅವರ ಒಂದೊಂದು ಚಮತ್ಕಾರ ನೋಡಿ ನೀವು ದಂಗು ಬಡಿದು ನಿಲ್ಲುವಿರಿ. ಇನ್ನೂ ಒಂದು ಮಹಾ ಪವಿತ್ರ ಸ್ಥಾನವಿದೆ. ಹೇಳಲೇ ? .... ದಕ್ಷಿಣದಲ್ಲಿಯೇ ಅರುಣಾಚಲಂ ಎಂಬಲ್ಲಿ ರಮಣ ಮಹರ್ಷಿ ಗಳು ಇರುತ್ತಾರೆ. ಅವರ ದರ್ಶನ ಪಡೆದು ಬನ್ನಿರಿ. ಅವರೊಂದು ಪ್ರತ್ಯಕ್ಷ ನಡೆ ನುಡಿಯುವ ಚಮತ್ಕಾರ !"

ಫ್ರಾಂಜ ಮ್ಯುಲರ ಅಂದರು, "ನಾನು ಅವರ ಬಗೆಗೆ ಬಹಳ ಬಹಳ ಕೇಳಿ ದ್ದೇನೆ. ಮತ್ತು ಪಾಲ ಬ್ರಂಟನ್‌ರ ಗ್ರಂಥಗಳಲ್ಲಿಯಂತೂ ಅವರ ಕುರಿತ ಬಹಳೇ ವೃತ್ತಾಂತಗಳನ್ನು ಓದಿರುತ್ತೇನೆ ನಾನು ಅವರ ದರ್ಶನಕ್ಕೆ ಹೋಗ ಬೇಕೆಂದೇ ಇದ್ದೇನೆ."

* * * *

ಅದೇ ದಿನ ಕಾಶೀ ವಿಶ್ವೇಶ್ವರನ ದರ್ಶನ ಪಡೆದುಕೊಂಡ ಮೇಲೆ ಫ್ರಾಂಜ ಮ್ಯುಲರರು ಅರುಣಾಚಲಂಕ್ಕೆ ಹೋಗುವ ತಮ್ಮ ಯೋಜನೆ ಯನ್ನು ನಿರ್ಧಾರಕ್ಕೆ ತಂದರು. ಆ ಯೋಜನೆ ಅವರ ಮನಸ್ಸಿನಲ್ಲಿ ನಡೆದಾ

ಅವರ ಮನಸ್ಸು ಆಶ್ಚರ್ಯಕರವಾಗಿ ಅತ್ಯಂತ ಏಕಾಗ್ರವಾಗ ತೊಡಗಿತ್ತು. ಇಡಿಯ ಭೂಮಿ ಕತ್ತಲೆಯಲ್ಲಿ ಮುಳುಗುತ್ತಿತ್ತು. ಆ ಘಾಟು ಮತ್ತು ಅದರ ಸುತ್ತಲಿನ ಆ ದೇವಾಲಯಗಳು ಒಂದು ಬಗೆಯ ಆಧ್ಯಾತ್ಮಿಕ ಶಾಂತಿಯಲ್ಲಿ ವಿಲೀನವಾದ ಭಾಸವಾಗಹತ್ತಿತು. ಮಿರಿಮಿರಿ ಮಿನುಗುವ ಚಿಕ್ಕೆಗಳಿಂದ ಆಕಾಶವು ಕಿಕ್ಕಿರಿದು ತುಂಬಿತ್ತು. ಮತ್ತು ಗಂಗೆಯ ನೀರಿನಲ್ಲಿ ಅದರ ಪ್ರತಿಬಿಂಬ ಬಿದ್ದಿತ್ತು. ಆದರೆ ಫ್ರಾಂಜ ಮ್ಯುಲರರಿಗೆ ಆ ದೃಶ್ಯವು ಚಿತ್ರಕಾರನು ಕ್ಯಾನವ್ಹಾಸಿನ ಮೇಲೆ ಬರೆದಿಟ್ಟಂತೆ ಕಂಡಿತು. ಆಕಾಶದಲ್ಲಿಯ ವಿವಿಧ ವರ್ಣಗಳ ಛಾಯೆಗಳೂ ಅದರಲ್ಲಿ ಸೇರಿದವು. ಅನೇಕ ದೇವಾಲಯಗಳಲ್ಲಿ ಬಾರಿಸುತ್ತಿರುವ ಪ್ರದೋಷ ಕಾಲದ ಆರತಿಯ ಗಂಟೆಗಳನ್ನು ತಾನು ಕನಸಿನಲ್ಲಿಯೆ ಕೇಳುತ್ತಿದ್ದೇನೆ. ಎಂಬ ಭಾಸ ಅವರಿಗೆ ಆಯಿತು. ತನ್ನ ಕರ್ಣೇಂದ್ರಿಯದೊಳಗೆ ಅನಾಹತ ಧ್ವನಿಯು ಮೊಳಗುತ್ತಿದೆಯೆಂಬಂತೆ ಅವರಿಗೆ ಅನಿಸಿತು. ಅದೇ ದಿನ ಮುಂಜಾನೆ ಅವರು ತನ್ನ ಪ್ರೀತಿಯ ತಂದೆಯ ಅಸ್ಥಿ ವಿಸರ್ಜನೆಯನ್ನು ಆಚೆಯ ಘಾಟಿನಲ್ಲಿ ವಿಧಿಪೂರ್ವಕವಾಗಿ ಮಾಡಿದ್ದರು. ಆದರೆ ಆ ವಿಚಾರವೂ ಅವರ ಮರವಿನಲ್ಲಿ ಮರೆಯಾಯಿತು. ತನ್ನ ಅಸ್ತಿತ್ವವನ್ನೇ ಅವರು ಮರೆತರು. ಆದರೆ ಅರುಣಾಚಲಂಕ್ಕೆ ಹೋಗಿ ರಮಣ ಮಹರ್ಷಿಗಳ ದರ್ಶನ ಪಡೆಯುವ ಅವರ ಹಂಬಲವು ಮಾತ್ರ ಅವರಿಗೆ ಸ್ಮರಿಸುತ್ತಿತ್ತು. ತನ್ನ ಆಯುಷ್ಯದಲ್ಲಿ ಅದೊಂದೆ ಸತ್ಯ ಸಂಕಲ್ಪ ಉಳಿದಿದೆ. ಎಂಬುದೊಂದೇ ಅರಿವು ಅವರಿಗೆ ಉಳಿಯಿತು. ಅದೊಂದೇ ಸಂಕಲ್ಪದಲ್ಲಿ ಅವರು ಒಳ ಹೊರಗೂ ಮುಳುಗಿ ಹೋದರು.

* * * *

ಅರುಣಾಚಲಂದಲ್ಲಿ ರಮಣ ಮಹರ್ಷಿಗಳ ಆಶ್ರಮವು ಸಮೀಪಿಸಿದಂತೆ ಫ್ರಾಂಜ ಮ್ಯುಲರರ ಅಂತಃಕರಣವು ಆನಂದದಿಂದ ಉಕ್ಕೇರಿ ಬಂತು. ತನ್ನ ದೇಹ ಮತ್ತು ಮನಸ್ಸು ಇನ್ನೂ ಇದೇ ಪವಿತ್ರ ಭೂಮಿಯ ಸ್ವಾಮಿತ್ವಕ್ಕೆ ಒಳಪಡಹತ್ತಿದೆ–ಎಂದು ಅವರಿಗೆ ಅನಿಸತೊಡಗಿತು. ನಸುಕಿನ ವೇಳೆ; ಎತ್ತಿನ ಬಂಡೆಯಲ್ಲಿ ಅವರು ಆಶ್ರಮಕ್ಕೆ ಹೊರಟಿದ್ದರು. ಮೆಲ್ಲ ಮೆಲ್ಲನೆ ಕತ್ತಲೆ ಸರಿಯುತ್ತಿತ್ತು. ಬಾನು ಕೆಂಪೂಡೆಯುತ್ತಿತ್ತು. ನರೆ ಬಣ್ಣದ ಆಕಾಶದ

ಹಿನ್ನೆಲೆಗೆ ಅರುಣಾಚಲಂ ಗುಡ್ಡದ ರೇಖಾಕೃತಿಯು ಮಸುಮಸುಕ್ಕಾಗಿ ಕಾಣಹತ್ತಿತ್ತು. ಆ ಗುಡ್ಡದ ಬುಡದ ಭಾಗ ಮೆಲ್ಲಮೆಲ್ಲನೆ ಸ್ಪಷ್ಟವಾಗ ಹತ್ತಿತ್ತು. ಆದರೆ ಗುಡ್ಡದ ನೆತ್ತಿಯು ಮಾತ್ರ ಇನ್ನೂ ನಸುಕಿನ ಮಂಜಿನಿಂದ ಮುಸುಕಿತ್ತು. ತುಸುವೆ ಹೊತ್ತಿನಲ್ಲಿ ಮೂಡಣ ದಿಗಂತದಲ್ಲಿ ಕೆಂಪು ಕೆಂಪು ಸೂರ್ಯ ಬಿಂಬವು ಏರಿ ಬರಹತ್ತಿತು. ಸೂರ್ಯನ ಸ್ವಾಗತಕ್ಕೆ ದಶದಿಕ್ಕುಗಳು ನಗೆಮೊಗದಿಂದ ಇದಿರುಗೊಂಡವು. ಹೆಮ್ಮರಗಳ ರೆಂಬೆಕೊಂಬೆಗಳ ವಿಸ್ತಾರ ದಿಂದ ಹಕ್ಕಿಗಳ ಇಂಚರದ ಚಿಲಿಪಿಲಿ ಸುರುವಾಯಿತು. ಕಾಡು ಹೂಗಳ ಮಂದ ಸುಗಂಧ ಸೂಸ ಹತ್ತಿತು.

ರಸ್ತೆಯಲ್ಲಿ ಇನ್ನೂ ಜನಸಂಚಾರ ವಿಶೇಷ ಸುರುವಾಗಿದ್ದಿಲ್ಲ. ಒಬ್ಬ ಒಕ್ಕಲಿಗ ತನ್ನ ಎತ್ತುಗಳನ್ನು ಜತೆಗೆ ತೆಗೆದುಕೊಂಡು ಹೊಲಕ್ಕೆ ಹೊರಟಿ ದ್ದನು. ಪ್ರಾಯಕ್ಕೆ ಬಂದ ಒಬ್ಬ ದೊಡ್ಡ ಮೈಕಟ್ಟಿನ ಹುಡುಗಿ ತಲೆಯ ಮೇಲೆ ಕೊಡವಿಟ್ಟುಕೊಂಡು ನೀರು ತರಲು ನಡೆದಿದ್ದಳು. ಮರ್ಯಾದೆ ಮುಚ್ಚಿಕೊಳ್ಳುವ ಮಟ್ಟಿಗೆ ಮಾತ್ರ ಅವಳ ಮೈಮೇಲೆ ಬಟ್ಟೆ ಇತ್ತು. ಆದರೆ ಅವಳ ಯೌವನ ತುಂಬುಬ್ಬಿ ಬಂದಿತ್ತು. ಆ ಬಟ್ಟೆ ಅವಳ ಮರ್ಯಾದೆ ಮುಚ್ಚಲು ಏನೂ ಸಾಲುತ್ತಿದ್ದಿಲ್ಲ; ನಡೆಯುವಾಗ ಅವಳ ಬಟ್ಟೆ ಹೊದ್ದದ ಉಬ್ಬಿದೆದೆ ಮೇಲೆ ಕೆಳಗೆ ಆಗುತ್ತಿತ್ತು. ಆದರೆ ಆ ನೋಟವನ್ನು ನೋಡಲಿಕ್ಕೆ ಅಲ್ಲಿ ಯಾರೂ ಇದ್ದಿಲ್ಲ. ಫ್ರಾಂಜ ಮ್ಯುಲರರಿಗೆ ಅವಳ ಬಡತನದ ಬಗೆಗ ಮರುಕ ಉಂಟಾಯಿತು. ಈ ಭೂಮಿಯಲ್ಲಿ ಇಂಥ ಬಡತನವನ್ನು ಉಂಟು ಮಾಡಿದವರು ಯಾರು ? ಈ ಪ್ರಶ್ನೆ ಅವರ ಮನಸ್ಸಿನ ಮುಂದೆ ನಿಂತಿತು ಇಂಥ ಪವಿತ್ರ ಆಧ್ಯಾತ್ಮಿಕ ಭೂಮಿಯಲ್ಲಿ ಇಂಥ ದಾರಿದ್ರ್ಯ ನೆಲೆಸಿದ್ದು ಕಂಡು ಅವರಿಗೆ ವಿಷಾದವಾಯಿತು. ಆದಾಗ್ಯೂ ಆ ದ್ರಾವಿಡ ಕನ್ನೆಯ ಮಿರಿ ಮಿರಿ ಮಿಂಚುವ ಕರ್‍ರಗಿನ ಕಾಂತಿಯೊಳಗಿಂದಲೂ ಅವಳ ನಿರಾಗಸವೂ ಮುಗ್ಧವೂ ಆದ ಚೆಲುವು ಒಡೆದೆದ್ದು ಕಾಣುತ್ತಿತ್ತು. ತಮ್ಮ ಸೀಮೆಯಲ್ಲಿ ಒಬ್ಬ ಬಿಳಿಯ ಅಭ್ಯಾಗತ ಬಂದದ್ದು ಕಂಡು ಆ ಹುಡುಗಿಯು ತುಸು ತಡೆದು ಅವರ ಕಡೆ ನೋಡಿದಳು, ತುಸು ನಾಚಿದಂತೆ ಮಾಡಿದಳು, ಮುಂದೆ ಸಾಗಿ ಮತ್ತೆ ತಿರು ಕತ್ತು ಹೊರಳಿಸಿದಳು. ಅಗ ಫ್ರಾಂಜ ಮ್ಯುಲರ ಮತ್ತು ಆ ಹುಡುಗಿಯ

ಕಣ್ಣುಗಳು ಕೂಡಿದವು. ಫ್ರಾಂಜ ಮ್ಯುಲರ ಅವಳ ಕಡೆಗೆ ನೋಡಿ ನಸು ನಕ್ಕರು. ಆಕೆ ಇನ್ನಿಷ್ಟು ನಾಚಿದಳು. ಆ ವೇಳೆಗೆ ಅವಳ ಉನ್ನತ ಉರೋಭಾಗವು ಅವರ ಕಣ್ಣಿಗೆ ಇನ್ನಿಷ್ಟೂ ತುಂಬಿತು.

ರಮಣ ಮಹರ್ಷಿಗಳ ಆಶ್ರಮ ತೀರ ಸಮೀಪ ಬಂದಿತು. ಆಗ ಅವರಿಗೆ ಕೂತಂತೆ ಇರುವ ಕಟ್ಟಡಗಳು ಅತಿ ಎತ್ತರವಾಗಿ ನಿಂತ ದೀಪಸ್ಥಂಭವೂ ಕಾಣ ಹತ್ತಿದವು. ದೇವಾಲಯಗಳ ಇದುರಿನ ದೀಪಸ್ತಂಭ ಈ ವಿಭಾಗದ ವೈಶಿಷ್ಟ್ಯ. ಅದು ಅವರ ದೃಷ್ಟಿಯಲ್ಲಿ ವಿಶೇಷವಾಗಿ ತುಂಬಿತು. ಇನ್ನು ತುಸು ಅಂತರ ಆಕ್ರಮಿಸುವದಿತ್ತು. ಎತ್ತಿನ ಕೊರಳೊಳಗಿನ ಗಂಟೆಗಳು ಕಿಂಕಿಣಿಸುತ್ತಿದ್ದವು. ಮುಂಜಾವಿನ ಹೊತ್ತು ಆ ಸದ್ದು ಕಿವಿಗೆ ಇಂಪಾಗಿ ಸೊಗಯಿಸಿತು. ಅದರಲ್ಲಿ ಹಕ್ಕಿಗಳ ಚಿಲಿಪಿಲಿಯೂ ದನಿಗೂಡಿಸಿತ್ತು. ಮತ್ತು ಆ ಸಮ್ಮಿಶ್ರ ನಾದವು ಬಹಳ ಇಂಪೆನಿಸಿತು. ಕಣ್ಣು ಮುಚ್ಚಿ ಫ್ರಾಂಜ ಮ್ಯುಲರ ಆ ಸದ್ದನ್ನು ಕೇಳುವದರಲ್ಲಿ ಮಗ್ನರಾದರು.

"ಅರುಣಾಚಲಂ! ಬಂದೇ ಬಿಟ್ಟಿತು ನಿಮ್ಮ ಸ್ಥಳ"

"ಗಾಡಿಯವನ ಈ ಶಬ್ದ ಕೇಳುತ್ತಲಿ ಅವರ ತಂದ್ರಾವಸ್ಥೆಯು ಭಂಗಗೊಂಡಿತು. ಗಾಡಿಯವ ಹೇಳುತ್ತಿದ್ದ" ಇದೇ ಆ ತಾಮ್ರ ಬಣ್ಣದ ಪವಿತ್ರ ಗುಡ್ಡ!

"ಈ ಗುಡ್ಡದ ಮೇಲೆ ಗುಡಿ ಇದೆಯೆ"?

ಫ್ರಾಂಜ ಮ್ಯುಲರರ ಪ್ರಶ್ನೆಗೆ ಗಾಡಿಯವ ಉತ್ತರವಿತ್ತನು "ವ್ಹಾ! ಗುಡಿಯಿರದೇನು? ವರ್ಷದಲ್ಲಿ ಒಮ್ಮೆ ಅಲ್ಲಿ ದೊಡ್ಡ ಉತ್ಸವ ನಡೆಯುತ್ತದೆ. ಆ ಗುಡ್ಡದ ಮೇಲೆ ಯಜ್ಞ ನಡೆಯುತ್ತದೆ. ಭಾರಿ ದೊಡ್ಡ ಯಜ್ಞ ಕುಂಡ ಉರಿಯುತ್ತದೆ. ಅದರ ಜ್ವಾಲೆ ಎಷ್ಟೋ ದೂರದಿಂದ ಕಾಣುತ್ತದೆ. ಭಾರೀ ದೊಡ್ಡ ಜಾತ್ರೆ ಪರಿಷಾ ಅಲ್ಲಿ ಕೂಡುತ್ತದೆ."

ಇಷ್ಟೇ ಹೇಳಿ ಆ ಗಾಡಿಕಾರ ನಿಲ್ಲಲಿಲ್ಲ. ಆ ಗುಡ್ಡಕ್ಕೆ ಒಂದು ನಮಸ್ಕಾರ ಹಾಕಿ ಆತ ಮುಂದರಿದ, "ಇದೇನು ನಮ್ಮದೊಂದೇ ದೇವರಲ್ಲ! ಇಡಿ

ಜಗತ್ತಿಗೇ ಇದು ದೇವರು. ಹೌದು, ನಿಮಗೂ ಸರಿ! ಇಲ್ಲಿಂದಲೆ ಸಕಲ ಲೋಕದ ಮೇಲೆ ಈ ದೇವರ ಅಧಿಕಾರ ನಡೆಯುತ್ತದೆ."

ಪರಂಪರಾಗತ ತಿಳುವಳಿಕೆಯಿಂದ ಆ ಗಾಡಿಯುವ ಮಾತಾಡುತ್ತಿದ್ದ. "ಆವನ ಆ ಶ್ರದ್ಧೆಯನ್ನು ಕಂಡು, ಫ್ರಾಂಜ ಮ್ಯುಲರ ಏನೂ ಮರುಮಾತಾಡದೆ ಆ ಗುಡ್ಡದ ದೇವರಿಗೆ ತಾವೂ ನಮಸ್ಕಾರ ಮಾಡಿದರು. ಗಾಡಿಯವನಿಗೆ ಅಷ್ಟೇ ಒಂದು ಸಮಾಧಾನವೆನಿಸಿತು.

ಇದೇ ಗುಡ್ಡದ ಬುಡಕ್ಕೆ ರಮಣ ಮಹರ್ಷಿಗಳ ಆಶ್ರಮವಿತ್ತು. ಆಶ್ರಮದ ಸುತ್ತಲು ಅಡಿಕೆ-ತೆಂಗುಗಳ ನಿಬಿಡವಾದ ಜನವಿತ್ತು. ಅಲ್ಲದೆ ತರತರದ ಮರಗಳು ಆ ಆಶ್ರಮವನ್ನು ಸುತ್ತುವರಿದಿದ್ದವು. ಪಾಪಭ್ರಷ್ಟ ಪ್ರಪಂಚದ ಸ್ಪರ್ಶವೇ ಈ ಆಶ್ರಮಕ್ಕೆ ಆಗಬಾರದೆಂದು ನಿಸರ್ಗವೆ ಮರಗಳ ಈ ಕಾವಲುಗಾರರನ್ನು ಆಶ್ರಮದ ಸುತ್ತಲು ನಿಲ್ಲಿಸಿದಂತೆ ಇತ್ತು. ಆ ದೃಶ್ಯವನ್ನು ನೋಡಿ ಫ್ರಾಂಜ ಮ್ಯುಲರರಿಗೆ ಹಚ್ಚಹಸಿರು ಮರಬಳ್ಳಿಗಳಿಂದ ಮುತ್ತಿದ ಸೆಂಟ ಪೀಟರ ಚರ್ಚಿನ ನೆನಪು ಆಯಿತು. ಮತ್ತು ಅವರು ತನಗೆ ತಾನೇ ನಕ್ಕರು. ನಿಸರ್ಗ ಸೌಂದರ್ಯದಲ್ಲಿಯೂ ಅವರಿಗೆ ಅದೆಷ್ಟು ವ್ಯತ್ಯಾಸವೆನಿಸಿತು! ಈ ಭಾರತ ದೇಶದ ಮೇಲೆ ನಿಸರ್ಗವು ತನ್ನ ಎಲ್ಲ ಅಲಂಕಾರಗಳನ್ನು ಬಿಚ್ಚುಗೈಯಿಂದ ಪರಿಸಿದಂತೆ ಅನಿಸಿತು ಅವರಿಗೆ. ಈ ಘನನಿಬಿಡ ಬನದಲ್ಲಿ ಪ್ರವೇಶಿಸಿದಾಗ ಆಶ್ರಮವು ಕಣ್ಣಿಗೆ ಬಿದ್ದೊಡನೆ ಅವರು ಕೈ ಜೋಡಿಸಿ ಆಶ್ರಮಕ್ಕೆ ಮನವಾರೆ ವಂದಿಸಿದರು.

* * * * *

ರಮಣ ಮಹರ್ಷಿಗಳ ದರ್ಶನವಾಗುವದು ನಿಜವಾಗಿಯೂ ದೇವದುರ್ಲಭವಾದ ಸಂಗತಿ. ಆದರೆ ಸುದೈವದಿಂದ ಅದೇ ದಿನ ಮಧ್ಯಾಹ್ನ ಫ್ರಾಂಜ ಮ್ಯುಲರರಿಗೆ ಮಹರ್ಷಿಗಳ ದರ್ಶನ ಘಟಿಸಿತು. ಪ್ರಶಸ್ತವಾದ ದಿವಾಣಖಾನೆಯಲ್ಲಿ ಒಂದು ಮೂಲೆಗೆ ಕಿಟಕಿಯ ಕೆಳಗೆ ಒಂದು ದೊಡ್ಡ ಮಂಚವಿಟ್ಟಿತ್ತು. ಅದರ ಮೇಲೆ ರಮಣ ಮಹರ್ಷಿಗಳು ವಿರಾಜಮಾನರಾಗಿದ್ದರು. ಅವರ ಕಣ್ಣು ನೆಲಕ್ಕೆ ನಟ್ಟಿತ್ತು. ನಡುವೆ ನಡುವೆ ಅವರು ತಮ್ಮ ಎರಡೂ ಅಂಗೈಗಳನ್ನು ಮೋರೆಯ ಮೇಲಿಂದ ಆಡಿಸುತ್ತಿದ್ದರು ಮತ್ತೆ

ಕೆಳಗೆ ನೋಡುತ್ತಿದ್ದರು. ಅವರ ಮುದ್ರೆಯ ಮೇಲೆ ಕಿಟಕಿಯ ಕಿಂಡಿಯಿಂದ ತೂರಿ ಬರುವ ಬೆಳಕು ಚೆಲ್ಲಿತ್ತು. ಆದ್ದರಿಂದ ಅವರ ಮುಖಮುದ್ರೆ ಸ್ಪಷ್ಟವಾಗಿ ಕಾಣುತ್ತಿತ್ತು. ಫ್ರಾಂಜ ಮ್ಯುಲರ ಅವರ ಹತ್ತಿರಕ್ಕೆ ಹೋಗಿ ದರ್ಶನ ತೆಗೆದು ಕೊಂಡರು. ಮತ್ತು ಅವರ ಇದಿರು ಫಲಗಳನ್ನು ಇಟ್ಟರು. ಅವರು ಫ್ರಾಂಜ ಮ್ಯುಲರರ ಕಡೆಗೆ ನೋಡಲೆ ಇಲ್ಲ. ತನ್ನ ಸ್ಥಳದಲ್ಲಿ ಹೋಗಿ ಕೂಡ್ರುವಾಗ ಮ್ಯುಲರರಿಗೆ ಊದುಬತ್ತಿಗಳ ಸುವಾಸ ಹೆಚ್ಚಾಗಿಯೇ ಅನಿಸಹತ್ತಿತು.

ರಮಣ ಮಹರ್ಷಿಗಳ ಮೈಮೇಲೆ ಬಟ್ಟೆಗಳು ಇದ್ದೇ ಇಲ್ಲವೆನ್ನಬಹುದು. ಕೇವಲ ಅವರ ಸೊಂಟದ ಸುತ್ತು ಒಂದು ಬಟ್ಟೆ ಸುತ್ತಿತ್ತು! ರಮಣ ಮಹರ್ಷಿಗಳ ಮೈಬಣ್ಣ ಕೆಂಪೆಂದೆನ್ನುವಂತಿದ್ದಿಲ್ಲ. ಆದರೆ ಅವರ ಮುಖ ಚರ್ಯೆಯಲ್ಲಿಯ ಕೆಂಪನ್ನ ಛಾಯೆ ಮಾತ್ರ ಬಹಳ ತೇಜಸ್ವಿಯಾಗಿ ತೋರುತ್ತಿತ್ತು. ಅವರ ಎತ್ತರವೂ ಚೆನ್ನಾಗಿಯೇ ಇದ್ದಿರಬೇಕು. ಇದನ್ನು ಫ್ರಾಂಜ ಮ್ಯುಲರ ಕೂತಲ್ಲಿಂದಲೇ ಊಹಿಸಿದರು. ಅವರ ವಿಶಾಲವಾದ ಹಣೆ ಅವರಲ್ಲಿಯ ಎಲ್ಲ ದೈವೀ ಗುಣಗಳ ಪೂರ್ತಿ ಸಾಕ್ಷಿಯನ್ನು ನೀಡುವಂತಿತ್ತು.

ಬಹಳ ಹೊತ್ತು ಕಳೆಯಿತು. ಆದರೂ ಮಹರ್ಷಿಗಳು ಮ್ಯುಲರ ಸಾಹೇಬರರನ್ನು ಗಮನಿಸಿದಂತೆ ಏನೂ ತೋರಲಿಲ್ಲ. ಗಾದಿಗೆ ಆನಿಸಿಕೊಂಡು ಅವರು ಒಂದು ನಿಶ್ಚಲ ಪ್ರತಿಮೆಯಂತೆ ಕೆಳಗೆ ನೋಡುತ್ತ ಕೂತಿದ್ದರು. ಆದ್ದರಿಂದ ಅವರ ಕಣ್ಣೊಳಗಿನ ತೇಜವಿನ್ನೂ ಕಂಡು ಬರಲಿತ್ತು.

ಫ್ರಾಂಜ ಮ್ಯುಲರ ಅವರಿಗೆ ಬಹಳಷ್ಟು ಪ್ರಶ್ನೆಗಳನ್ನು ಕೇಳಲಿದ್ದರು. ಅವರ ಮನಸ್ಸಿನಲ್ಲಿ ಪ್ರಶ್ನೆಗಳು ಕಿಕ್ಕಿರಿದು ಎದ್ದಿದ್ದವು. ಮತ್ತು ಬಾಯಿಯಿಂದ ಅವು ಹೊರ ಬೀಳಲು ತವಕ ಪಡುತ್ತಿದ್ದವು. ಹಿಂದೂ ಧರ್ಮದ ಕುರಿತು ಅವರಲ್ಲಿ ಇದ್ದ ಆಂತರಿಕ ಸೆಳೆತ ಮತ್ತು ಅದಕ್ಕಾಗಿ ಅವರು ಮಾಡಲೇ ಬೇಕಾದ ತ್ಯಾಗದ ಕಠೋರ ಸತ್ಯ ಇವೆರಡರ ನಡುವಿನ ಸಂಘರ್ಷ ಅವರ ಮನಸ್ಸಿನಲ್ಲಿ ನಡೆದಿತ್ತು. ತನ್ನ ಮನದಲ್ಲಿಯ ನಾನಾ ಶಂಕೆ ಕುಶಂಕೆಗಳನ್ನು

ಅವರು ಮಹರ್ಷಿಗಳ ಮುಂದೆ ಇಡಲಿದ್ದರು. ವ್ಯಕ್ತಿಗತ ಐಹಿಕ ಸಂಸಾರದ ವಿಷಯವಾಗಿ ಅವರ ಮನಸ್ಸಿನಲ್ಲಿ ಎಷ್ಟೋ ಪ್ರಶ್ನೆಗಳು ಹುಟ್ಟಿದ್ದವು.

ರಮಣ ಮಹರ್ಷಿಗಳತ್ತ ಕಣ್ಣಿಟ್ಟು ನೋಡುತ್ತಿರುವಾಗ ತನ್ನ ಈ ಪ್ರಶ್ನೆಗಳ ಜೋಡಣೆಯಲ್ಲಿ ಮ್ಯುಲರರು ಮಗ್ನರಾಗಿದ್ದರು. ಅಷ್ಟರಲ್ಲಿ ರಮಣ ಮಹರ್ಷಿಗಳು ತಮ್ಮ ದೃಷ್ಟಿಯನ್ನು ಮೇಲೆತ್ತಿದರು ಮತ್ತು ಅವರತ್ತ ನೋಡಿದರು. ದೃಷ್ಟಿಯಲ್ಲಿ ದೃಷ್ಟಿ ನಟ್ಟಿತು. ಮತ್ತು ಯಜ್ಞ ಕುಂಡದಲ್ಲಿ ಪಟಪಟನೆ ಸಮಿಧೆಗಳು ಬಿದ್ದು ಅವು ಉರಿದು ಭಸ್ಮವಾಗುವಂತೆ ಮ್ಯುಲರ ಸಾಹೇಬರ ಎಲ್ಲ ಪ್ರಶ್ನೆಗಳು ಆ ತೇಜಸ್ವಿಯಾದ ದೃಷ್ಟಿಯ ಇದಿರು ಭರಭರನೆ ಜಾರಿ ಬಿದ್ದವು. ಅವರ ಮನಸ್ಸಿನಲ್ಲಿಯ ಶಂಕೆ ಕುಶಂಕೆಗಳು ಒಮ್ಮಿಂದೊಮ್ಮೆ ಲೋಪವಾದವು. ಅವರ ನಿಃಶಂಕರಾದರು. ಎಲ್ಲಿವೆ ಪ್ರಶ್ನೆ ? ಎಲ್ಲಿವೆ ಉತ್ತರ ? ಪ್ರಶ್ನೆಗಳಲ್ಲಿಯೇ ತಂತಾನೆ ಉತ್ತರಗಳು ಸೇರಿ ಬೆರೆದು ಅರಗಿ ಹೋದವು. ಮತ್ತು ಆ ಪ್ರಶ್ನೆಗಳ ಅಸ್ತಿತ್ವವೇ ಮುಗಿಯಿತು. ರಮಣ ಮಹರ್ಷಿಗಳ ದೃಷ್ಟಿಯ ತೇಜಸ್ಸಿನ್ನೆದುರು ಅವರ ಮನಸ್ಸಿನಲ್ಲಿಯ ಎಲ್ಲ ಶಂಕೆಗಳು ಮಂಜಿನಂತೆ ಕರಗಿ ಮಾಯವಾದವು. ಕೆಳಗೆ ತಳಕ್ಕೆ ಉಳಿದದ್ದು ಕೇವಲ ಅಂತಃಕರಣದ ಶಾಂತಿ! ಬಂದು ನಿರ್ವಾತ ಸ್ಥಳದಲ್ಲಿ ದೀಪದ ಜ್ಯೋತಿಯು ನಿಶ್ಚಲವಾಗಿ ನಿಲ್ಲುವಂತೆ ಅವರ ಅಂತಃಕರಣದೊಳಗಿನ ಶಾಂತಿಯು ಆ ನಿಃಶಂಕ ಅವಸ್ಥೆಯಲ್ಲಿ ಸ್ಥಿರವಾಯಿತು. ಈಗ ಅವರ ಮನಸ್ಸಿನಲ್ಲಿ ಯಾವದೇ ಪ್ರಶ್ನೆ ಉಳಿದಿದ್ದಿಲ್ಲ. ಅಥವಾ ಯಾವದೆ ಶಂಕೆಗಳು ಉಳಿದಿದ್ದಿಲ್ಲ. ಪರಿಮಳದ ಹೂವಿನಿಂದ ಪರಿಮಳವು ಹೊರ ಸೂಸುವಂತೆ ರಮಣ ಮಹರ್ಷಿಗಳ ಸಾನಿಧ್ಯದಿಂದ ಶಾಂತಿಯು ಹೊರಸೂಸುತ್ತಿತ್ತು. ಮತ್ತು ಆ ಶಾಂತಿಯ ಗಂಗೆಯಲ್ಲಿ ಮ್ಯುಲರರ ಮೈಮನಗಳು ಮುಳುಗಿ ಹೋಗಿದ್ದವು.

ಮಧ್ಯಾಹ್ನದ ಊಟ ಮುಗಿದ ಮೇಲೆ ಅದೆ ಸದರಿನಲ್ಲಿ ಮತ್ತೆ ಎಲ್ಲರೂ ಕೂಡಿ ಕುಳಿತರು. ರಮಣ ಮಹರ್ಷಿಗಳು ಫ್ರಾಂಜ ಮ್ಯುಲರರಿಗೆ ಸಹಜವಾಗಿ ಪ್ರಶ್ನಿಸಿದರು. "ಏನು ? ನಮ್ಮ ಆಶ್ರಮದ ಊಟ ಮೆಚ್ಚಿಗೆ ಆಯಿತೇ ?"

ಅದಕ್ಕೆ ಫ್ರಾಂಜ ಉತ್ತರಿಸಿದರು. "ನಿಜ ಹೇಳುವದಾದರೆ ನನ್ನ ಲಕ್ಷ್ಯ ಊಟದ ಮೇಲೆ ಇದ್ದೇ ಇಲ್ಲ. ನನ್ನ ಮನಸ್ಸಿಗೆ ಮಾತ್ರ ಸಂತತ ಸಂತರ್ಪಣೆ ನಡೆದಿತ್ತು. ಅದಕ್ಕಾಗಿಯೇ ನಾನು ಇಲ್ಲಿ ಬಂದದ್ದು."

ರಮಣ ಮಹರ್ಷಿಗಳು ನಗುತ್ತ ಅಂದರು. ವಾ! ವಾ! ಚೆನ್ನಾಯಿತು.

ಅನಂತರ ಅಭಾವಿಕವಾಗಿಯೇ ಸಂಭಾಷಣೆ ಸುರುವಾಯಿತು. ಫ್ರಾಂಜ ಮ್ಯುಲರ ಅಂದರು. "ನಾನು ಪಾಶ್ಚಾತ್ಯ ತತ್ವಜ್ಞಾನವನ್ನು ಅಭ್ಯಾಸ ಮಾಡಿದವನು. ಅದೇ ರೀತಿ ಪಾಶ್ಚಾತ್ಯ ವಿಜ್ಞಾನದ ಪರಿಚಯವನ್ನು ಮಾಡಿಕೊಂಡಿರುವೆ. ನಮ್ಮ ಪಾಶ್ಚಾತ್ಯ ದೇಶಗಳಲ್ಲಿ ನನಗೆ ಭೆಟ್ಟಿಯಾದ ಹಲಕೆಲವು ಸಾಧು ಸಂತರೊಂದಿಗೆ ನಾನು ಬಹಳ ಚರ್ಚೆ ಮಾಡಿದ್ದೇನೆ. ಅಂತರಂಗದ ಶಾಂತಿಗಾಗಿ ಇಡಿಯ ಪಶ್ಚಿಮವನ್ನೆ ಸುತ್ತಾಡಿದೆ. ಈಗ ಪೂರ್ವಕ್ಕೆ ಹೊರಳಿದ್ದೇನೆ. ನನಗೆ ಮನಃಶಾಂತಿ ಬೇಕು. ಅದು ನನಗೆ ಇಲ್ಲಿಯೇ ಸಿಗುವದೆಂದು ಭರವಸೆ ತೋರುತ್ತಿದೆ."

ರಮಣ ಮಹರ್ಷಿಗಳು ಬರೆ ತನ್ನ ಗೋಣು ಅಲ್ಲಾಡಿಸಿದರು. ಮತ್ತು ಕಣ್ಣನ್ನು ಕೆಳಗೆ ನೆಲದತ್ತ ಹೊರಳಿಸಿದರು.

ಫ್ರಾಂಜ ಮ್ಯುಲರ ಮುಂದರಿದರು. "ಪಾಶ್ಚಾತ್ಯ ತತ್ವಜ್ಞ ಮತ್ತು ಲೇಖಕರು ಮಂಡಿಸಿದ ಮತಗಳನ್ನು ನಾನು ಓದಿದ್ದೇನೆ. ಹೇಳಿದ ಸಿದ್ಧಾಂತಗಳನ್ನು ಕೇಳಿದ್ದೇನೆ. ಆದರೆ ಈ ಐಹಿಕ ಅನುಭವಗಳ ಆಚೆಗೆ ಏನಾದರೂ ಸಂಗತಿಗಳು ಅಡಗಿವೆಯೋ ? ಅವು ಮಾನವನಿಗೆ ಅಜ್ಞಾತವಾಗಿಯೇ ಉಳಿಯುವವೋ ? ಹಾಗೆ ಅಲ್ಲವಾದರೆ ಅವುಗಳ ಅನುಭವ ನನಗೆ ಆಗಬಲ್ಲದೊ ?"

ಫ್ರಾಂಜ ಮ್ಯುಲರರ ಈ ಮಾತಿಗೆ ರಮಣ ಮಹರ್ಷಿಗಳು ಸುಮ್ಮನೆ ಉಳಿದರು. ಅವರ ಮುದ್ರೆ ಶಾಂತವಾಗಿ ತೋರುತ್ತಿತ್ತು. ಆದರೆ ಅವರು ಯಾವದೋ ವಿಚಾರದಲ್ಲಿ ಮುಳುಗಿದಂತೆ ಅನಿಸುತ್ತಿತ್ತು.

ಫ್ರಾಂಜ ಮ್ಯುಲರ ಮತ್ತೆ ಮಾತಾಡ ಹತ್ತಿದರು. "ನಮ್ಮ ಪಾಶ್ಚಾತ್ಯ ತತ್ವಜ್ಞಾನಿಗಳಾಗಲಿ. ಮಹಾಪುರುಷರಾಗಲಿ, ವೈಜ್ಞಾನಿಗಳಾಗಲಿ– ಅವರೆಲ್ಲ ತಮ್ಮ ವಿದ್ವತ್ತೆಗಾಗಿಯೇ ವಿಖ್ಯಾತರು. ಅಖಿಲ ಜಗತ್ತೆ ಅವರನ್ನು ಆ ಬಗೆಗೆ ಮನ್ನಿಸಿದೆ. ಆದರೆ ಆ ಜನರೂ ಹೇಳುವದೇನೆಂದರೆ, ಈ ವಿಶ್ವದ ಬುಡಕ್ಕೆ

ಇರುವ ಅಜ್ಞಾತದ ಶೋಧ ಇನ್ನೂ ಹತ್ತೇ ಇಲ್ಲ. ಆದರೆ ತಮ್ಮ ಈ ದೇಶದಲ್ಲಿ ಆ ಅಜ್ಞಾತದ ಶೋಧ ಹಚ್ಚಿದ ಅನೇಕ ವಿಭೂತಿಗಳು ನಿರ್ಮಾಣರಾಗಿದ್ದಾರೆ, ತಮ್ಮ ಕೀರ್ತಿಯನ್ನು ಕೇಳಿ ನಾನು ಇಲ್ಲಿಗೆ ಬಂದೆ ನನಗೆ ಆ ಅಜ್ಞಾತದ ವಿಳಾಸ ಹೇಳಿರಿ ನನಗೆ ಮಾರ್ಗದರ್ಶನ ಮಾಡಿರಿ."

ಫ್ರಾಂಜ ಮ್ಯುಲರರ ಭಾಷಣ ನಿಂತಿತು. ರಮಣ ಮಹರ್ಷಿಗಳಿಂದ ಏನಾದರೂ ಕೇಳಬೇಕೆಂಬ ಅಪೇಕ್ಷೆಯಿಂದ ಅವರು ಸುಮ್ಮನಾದರು. ರಮಣ ಮಹರ್ಷಿಗಳೂ ಸುಮ್ಮನೇ ಕುಳಿತಿದ್ದರು. ಆದರೆ ಆ ವೇಳೆಗೆ ವಿಚಾರದಲ್ಲಿ ವ್ಯಗ್ರವಾದ ತಮ್ಮ ಮುಖವನ್ನು ಎತ್ತಿ ಅವರು ಫ್ರಾಂಜ ಮ್ಯುಲರರತ್ತ ನೋಡಿದರು ಮತ್ತು ನಿಧಾನವಾಗಿ ಮಾತಾಡ ತೊಡಗಿದರು.

ಮಹರ್ಷಿಗಳು ಅಂದರು. "ನನಗೆ ಅಜ್ಞಾತದ ವಿಳಾಸ ಹೇಳಿರಿ. ನನಗೆ ಮಾರ್ಗದರ್ಶನ ಮಾಡಿರಿ, ಎನ್ನುವಿರಿ ಈ 'ನನಗೆ' ಅಂದರೆ ಯಾರಿಗೆ ? ಈ 'ನಾನು' ಯಾರು ?"

ಅವರ ಈ ಪ್ರಶ್ನೆಯು ನೇರವಾದದ್ದಿದ್ದು ಮ್ಯುಲರರಿಗೆ ಹೊಳೆಯಲಿಲ್ಲ. ಅವರೆಂದರು "ಸ್ವಾಮಿ, ತಮ್ಮ ಪ್ರಶ್ನೆ ನನಗೆ ತಿಳಿಯಲಿಲ್ಲ !"

"ನನ್ನ ಪ್ರಶ್ನೆ ಸರಳವಾಗಿದೆ. ಮತ್ತೊಮ್ಮೆ ನನ್ನ ಪ್ರಶ್ನೆಯ ಕುರಿತು ಆಲೋಚನೆ ಮಾಡಿರಿ."

ಇದಕ್ಕೆ ಫ್ರಾಂಜ ಮ್ಯುಲರ ತನ್ನ ಕಡೆಗೆ ಬೆರಳು ಮಾಡಿ ತೋರಿಸುತ್ತ ಅಂದರು. "ಇದು ನಾನು, ನನ್ನ ಹೆಸರು ಫ್ರಾಂಜ ಮ್ಯುಲರ !"

ನಿಮಗೆ ಈ ಫ್ರಾಂಜ ಮ್ಯುಲರರ ಪರಿಚಯವಿದೆಯೋ ?"

"ಹೌದು ತೀರ ಮೊದಲಿನಿಂದಲೂ"

ಇಷ್ಟು ಹೇಳಿ ಫ್ರಾಂಜ ಮ್ಯುಲರ ನಕ್ಕರು. ಆಗ ಮಹರ್ಷಿಗಳು ಅಂದರು. "ಆದರೆ ಇದು ನಿಮ್ಮ ದೇಹ, ನಾನು ನಿಮಗೆ ಮಾತ್ರ ಕೇಳುತ್ತೇನೆ. ನಿಮ್ಮೊಳಗಿನ ಈ 'ನಾನು' ಯಾರು"?

ಫ್ರಾಂಜ ಮ್ಯುಲರ ಉತ್ತರ ಕೊಡದಾದರು. ಆಗ ಮತ್ತೆ ರಮಣ ಮಹರ್ಷಿಗಳೆಂದರು. "ನಿಮ್ಮಲ್ಲಿಯ 'ನಾನು' ಯಾರೆಂಬುದರ ಪರಿಚಯ

ಮೊದಲು ಮಾಡಿಕೊಳ್ಳಿ, ಮತ್ತು ಆಮೇಲೆ ನಿಮ್ಮ ಕೈಗೆ ಸತ್ಯವು ಸಿಗಬಹುದು.

ಫ್ರಾಂಜ ಮ್ಯುಲರರಿಗೆ ಈ ಮಾತು ಅರ್ಥವಾಗಲಿಲ್ಲ. ಆಗ ತಮ್ಮ ಮಾತನ್ನು ಇನ್ನೂ ಸ್ಪಷ್ಟವಾಗಿಸಿ ಹೇಳುತ್ತ ಮಹರ್ಷಿಗಳು ಅಂದರು. "ಒಂದು ಕೆಲಸ ಮಾಡಿ. ನೀವು ನಿಮ್ಮ ಅಂತಃಕರಣದಲ್ಲಿ ಇಣಕಿ ನೋಡಿ. ನಿಮ್ಮನ್ನೇ ನೀವು ಗುರುತಿಸಲು ಅರಿತು ಕೊಳ್ಳಲು ಕಲಿಯಿರಿ. ಪದ್ಧತಿಶುದ್ಧವಾಗಿ ಹಾಗೆ ಮಾಡಲು ಕಲಿಯಿರಿ. ನಿಮ್ಮ ಎಲ್ಲ ಪ್ರಶ್ನೆಗಳ ಉತ್ತರ ನಿಮಗೆ ತಾನಾಗಿ ದೊರೆಯುಬಹುದು."

ಫ್ರಾಂಜ ಮ್ಯುಲರ ನೊಂದುಕೊಂಡರು. "ಅದಕ್ಕಾಗಿ ಏನು ಮಾಡಬೇಕಾಗುವದು? ಯಾವ ಮಾರ್ಗದಿಂದ ಹೋಗಬೇಕು"?

"ಅಂತರ್ಮುಖರಾಗಿ ಅದಕ್ಕಾಗಿ ಏಕಾಗ್ರ ಚಿತ್ತದಿಂದ ಧ್ಯಾನ ಮಾಡಬೇಕಾಗುವದು. ಹಾಗೆ ಮಾಡುತ್ತ ಹೋದರೆ ಒಂದು ದಿನ ಖಂಡಿತವಾಗಿ ಬೆಳಕು ಕಾಣುವದು."

"ನಾನು ಹಾಗೆ ಪ್ರಯತ್ನ ಮಾಡಿ ನೋಡಿದ್ದೇನೆ. ಸ್ವಾಮೀ ವಿವೇಕಾನಂದರು ನನ್ನ ತಂದೆಗೆ ಧ್ಯಾನಸ್ಥ ಶಂಕರನ ಒಂದು ಮೂರ್ತಿಯನ್ನು ಕಾಣಿಕೆಯಾಗಿ ಕೊಟ್ಟಿದ್ದರು. ಆ ಮೂರ್ತಿಯ ಇದುರಿಗೆ ನಾನು ಅನೇಕ ಬಾರಿ ಏಕಾಗ್ರ ಚಿತ್ತನಾಗಿ ಕೂತದ್ದುಂಟು. ಆದರೆ ಇನ್ನೂ ನನ್ನ ಪ್ರಗತಿ ಆದಿಲ್ಲ."

"ನಿಮ್ಮ ಪ್ರಗತಿ ಆಗಿಲ್ಲವೆಂದು ಭಾವಿಸಲಿಕ್ಕಾದರೂ ಏನಾದರೂ ಆಧಾರವಿದೆಯೋ? ಅಧ್ಯಾತ್ಮಿಕ ಮಾರ್ಗದಲ್ಲಿ ಪ್ರಗತಿಯನ್ನು ತಿಳಿದು ಕೊಳ್ಳುವದು ಅನಿಸುವಷ್ಟು ಸಲಿಸ ಸಂಗತಿ ಅಲ್ಲ."

"ಈ ಪ್ರಗತಿ ಸಾಧಿಸಲಿಕ್ಕೆ ಗುರುವಿನ ಅಗತ್ಯ ಉಂಟೇ". ?

"ಇರಲೂ ಬಹುದು.".

"ಗುರುವಿನ ಸಹಾಯದಿಂದ ತಾವು ಹೇಳುವ ಆ 'ನಾ'ನಿನ ಪರಿಚಯ ಉಂಟಾಗುವದೊ ?"

"ಗುರು ಮಾರ್ಗ ದರ್ಶಕ. ಕೊನೆಗೂ ಅವರವರ ಅನುಭವವೇ ಅವರವರಿಗೆ ಸತ್ಯ."

"ಗುರುವು ದೊರೆತರೂ ಎಷ್ಟು ದಿನಗಳಲ್ಲಿ ಪ್ರಗತಿ ಆಗಬಹುದು ?"

"ಅದು ಶಿಷ್ಯನ ಅರ್ಹತೆಯನ್ನವಲಂಬಿಸಿ ಇರುವ ಮಾತು. ಮದ್ದು ಗುಂಡುಗಳ ಕೊಠಡಿಗಳ ಮೇಲೆ ಒಂದು ಕಿಡಿ ಬಿದ್ದರೆ ಸಾಕು, ಅದು ಸ್ಫೋಟ ವಾಗುವದು. ಆದರೆ ಒಂದು ಕಿಡಿಯಿಂದ ಇದ್ದಲಿಯೇನು ಉರಿಯುವದಿಲ್ಲ"

'ನಾನು' ಎಂಬುದರ ಪರಿಚಯವಾದೊಡನೆ ಮನುಷ್ಯನಿಗೆ ಆನಂದದ ಪ್ರಾಪ್ತಿ ಆಗುವದೇ ?"

"ಆನಂದವೆಂದರೇನು ? ಧನ ಸಂಪತ್ತು ಸಿಕ್ಕ ಮಾತ್ರಕ್ಕೊ ಮನುಷ್ಯ ನಿಗೆ ಆನಂದವಾಗುತ್ತದೆಂಬ ನೇಮವಿಲ್ಲ. ಬಯಸಿದ್ದು ಬೇಕಾದದ್ದು ಸಿಕ್ಕರೂ ಆನಂದ ಲಭಿಸುವದಿಲ್ಲ. ಆನಂದವು ಅವರವರ ವೃತ್ತಿಯ ಧರ್ಮವಾಗಿದೆ. ಮನುಷ್ಯ ಆಸಕ್ತಿ ಹಿಡಿದರೆ ಆ ಆಸಕ್ತಿಯ ಬೆನ್ನಿಗೆ ದುಃಖವು ಬಂದದ್ದೇ. ಆದ್ದ ರಿಂದ ಸಂತೋಷ ವೃತ್ತಿಯಲ್ಲಿಯೇ ಸಮಾಧಾನವಿದೆ, ಆನಂದವಿದೆ. ಆನಂದವು ಎಂದೂ ಬಾಹ್ಯ ಉಪಾಧಿಗಳಿಂದ ದೊರೆಯುವದಿಲ್ಲ. ಆನಂದದ ಗೊತ್ತು ಪತ್ತೆ ಅಂತಃಕರಣದಲ್ಲಿ, ಎಲ್ಲ ಆನಂದವೂ ತನ್ನಲ್ಲಿಯೇ ಇರುವಾಗ ಮನುಷ್ಯ ಅದಕ್ಕಾಗಿ ಬಿರಿಬಿರಿ ಓಡಾಡುತ್ತಿರುತ್ತಾನೆ. ಮತ್ತು ಬರೆ ದುಃಖವನ್ನು ಉಡಿ ಯಲ್ಲಿ ಹಾಕಿಕೊಳ್ಳುತ್ತಾನೆ."

ಸ್ವಂತದ ವಿಷಯದ ಈ ಪ್ರಶ್ನೆಗಳು ಮುಗಿದ ಮೇಲೆ ಫ್ರಾಂಜ ಮ್ಯುಲರ ಮಹರ್ಷಿಗಳಿಗೆ ಜಗತ್ತಿನ ಕುರಿತು ಕೆಲವು ಪ್ರಶ್ನೆಗಳನ್ನು ಮಾಡಿದರು. "ತಮ್ಮ ಅಭಿಪ್ರಾಯದಲ್ಲಿ ಈ ಜಗತ್ತಿನ ಭವಿತವ್ಯವೇನಿದೆ ?"

ರಮಣ ಮಹರ್ಷಿಗಳು ಚಟ್ಟನೆ ಉತ್ತರವಿತ್ತರು. "ನಿಮಗೆ ಜಗತ್ತಿನ ಭವಿತವ್ಯದ ಈ ಉಸಾಬರಿ ಏಕೆ ಬೇಕು? ನಿಮಗೆ ಜಗತ್ತಿನ ವರ್ತಮಾನ ಕಾಲವಾದರೂ ತಿಳಿದಿದೆಯೇ? ಅಂದಾಗ ಭವಿಷ್ಯ ಕಾಲದ ಮಾತೇಕೆ? ನೀವು ಮೊದಲು ವರ್ತಮಾನವನ್ನು ತಿಳಿದುಕೊಳ್ಳಿರಿ. ಆಗ ಭವಿಷ್ಯವು ನಿಮಗೆ ತಾನಾಗೆ ತಿಳಿದು ಬರುವದು."

ಆಗ ಫ್ರಾಂಜ ಮ್ಯುಲರ ತಿರುಗಿ ಪ್ರಶ್ನಿಸಿದರು."ಈ ಪ್ರಪಂಚದಲ್ಲಿ ಶಾಂತಿ ನೆಲಸಿ ಮೈತ್ರಿಯು ನಲಿಯುವದೋ ಅಥವಾ ಯುದ್ಧವು ಇನ್ನೂ ಹೆಚ್ಚು ಭುಗಿಲೇಳುವದೋ?"

ಇದು ನಿಮ್ಮ ಪ್ರಶ್ನೆ ಅಲ್ಲ. ಈ ಜಗತ್ತಿನ ಮೇಲೆ ಯಾರ ಸತ್ತೆ ನಡೆಯುವದೋ ಅವನದು ಈ ಪ್ರಶ್ನೆ. ಆತನೇ ಆ ಜಗತ್ತಿನ ನೊಗವನ್ನು ತನ್ನ ಹೆಗಲಿಗೆ ಹೊತ್ತಿದ್ದಾನೆ ಮತ್ತೊಂದು ಮಾತು ನೆನಪಿಟ್ಟುಕೊಳ್ಳಿ. ನೀವು ಯಾವರೀತಿ ಇರುವಿರೋ ಆ ರೀತಿ ಈ ಜಗತ್ತು ನಿಮಗೆ ಕಾಣುವದು. ನೀವು ಮೊದಲು ನಿಮ್ಮನ್ನೆ ಕಂಡುಕೊಳ್ಳಲು, ಗುರುತಿಸಿಕೊಳ್ಳಲು ಕಲಿಯಿರಿ. ಆಗ ನಿಮಗೆ ಜಗತ್ತಿನ ಪರಿಚಯ ಪರಿಜ್ಞಾನ ತಾನಾಗಿಯೆ ಆಗುವದು. ಜನ ಮೊದಲು ತನ್ನನ್ನು ಅರಿತುಕೊಳ್ಳದೆ ಜಗತ್ತನ್ನು ಅರಿತುಕೊಳ್ಳಲು ಹೊರಡುತ್ತಾರೆ. ನೀವು ಈ ವಿಶ್ವದ ಬುಡಕ್ಕೆ ಇದ್ದ ಸತ್ಯವನ್ನು ಹುಡುಕಿ ತೆಗೆಯುವದಿದ್ದರೆ, ಮೊದಲು ಅಂತರ್ಮುಖಿರಾಗಿರಿ. ತನ್ನನ್ನು ಗುರುತಿಸಿಕೊಳ್ಳಲು ಕಲಿಯಿರಿ. ಆಗ ಸತ್ಯದ ಗುರುಕೀಲಿ ನಿಮ್ಮ ಕೈಗೆ ಸಹಜವಾಗಿಯೇ ಸಿಗುವದು. ಓಂ ಶಾಂತಿಃ ಶಾಂತಿಃ ಶಾಂತಿಃ!"

ರಮಣ ಮಹರ್ಷಿಗಳು ಮೂರು ಸಲ 'ಶಾಂತಿ' ಯ ಉಚ್ಚಾರ ಮಾಡಿದರು. ಆಗ ಆ ಸಭಾಭವನದೊಳಗಿನ ಎಲ್ಲ ಜನರು ಎದ್ದರು. ತಮ್ಮ ಭಾಷಣವನ್ನು ಮುಗಿಸುವ ಅವರ ಪದ್ಧತಿ ಹಾಗೆ ಇದ್ದಂತೆ ತೋರಿತು.

ಈಗ ಫ್ರಾಂಜ ಮ್ಯುಲರರೂ ತಮ್ಮ ಸ್ಥಳದಿಂದ ಎದ್ದರು ಮತ್ತು ಸಭಾಭವನದ ಹೊರಗೆ ಹೋಗಲು ಹತ್ತಿದರು. ಹೊರಗೆ ಬಿದ್ದೊಡನೆ ಅವರಿಗೆ ತಮ್ಮ ಎದೆಯ ಭಾರ ಪೂರ್ತಿ ಹಗುರಾದಂತೆ ಅನಿಸಿತು. ಮಹರ್ಷಿಗಳ ಆ ಮೂರು ಸಲದ ಶಾಂತಿಯುಚ್ಚಾರದಿಂದ ಅವರ ಅಂತಃಕರಣದಲ್ಲಿ ಶಾಂತಿಯು ಪ್ರವೇಶವಾಯಿತೆಂದು ಅವರಿಗೆ ಅನಿಸಿತು. ಅವರು ಹೊರಗೆ, ಎಲ್ಲ ಕಡೆಗೆ ಕಣ್ಣು ಹಾಯಿಸಿದರು. ಮುಂಜಾನೆಯ ಹೊತ್ತು ಮೀರಿ ಹೋಗಿತ್ತು. ಕತ್ತಲೆ ಬೆಳೆಯುತ್ತಿತ್ತು. ಇದುರಿಗೆ ಕಾಣುವ ಅರುಣಾಚಲಂ ಗುಡ್ಡ, ಆ ದಟ್ಟ ತೋಪು, ಅಡಿಕೆ-ತೆಂಗುಗಳ ಎತ್ತರದ ಅಸಂಖ್ಯ ಮರಗಳು-ಅದೆಲ್ಲವೂ ಮೆಲ್ಲ ಮೆಲ್ಲನೆ ಕತ್ತಲೆಯಲ್ಲಿ ಮುಳುಗ ಹತ್ತಿತ್ತು. ಅವರ ಕಿವಿಗೆ ಎಲ್ಲಿಂದಲೋ ಒಂದು ಬಗೆಯ ಅನಾಹತ ನಾದವು ಬಂದು ಬೀಳುತ್ತಿತ್ತು ಅಷ್ಟೇ. ಬಾಕಿ ಅವರ ಅಂತರ್ಬಾಹ್ಯ ಅವಸ್ಥೆ ಶಾಂತಿಮಯವಾಗಿತ್ತು. ನಾನು-ನೀನು ಎಂಬ ಬಹಿರ್ಮುಖ ಊರ್ಮಿಯು ಇಳಿದು ಇಲ್ಲ

ವಾಗಿತ್ತು. ಈ ತನಕ ಅಂತಃ ಕರಣದಲ್ಲಿ ಅವಿತುಕೊಂಡ ಆ ಆತ್ಮತತ್ವವನ್ನು ಶೋಧಿಸುವ ಒಂದೇ ಒಂದು ಇಚ್ಛೆ ಅವರ ಮನಸ್ಸಿನಲ್ಲಿ ಉದಯ ಹೊಂದಿತು. ಫ್ರಾಂಜ ಮ್ಯುಲರ ಒಳ ಹೊರಗೆ ಪೂರ್ತಿ ಪರಿವರ್ತನೆ ಹೊಂದಿ ಬಿಟ್ಟರು.

ಆ ದಿವಸದಿಂದ ಆತ್ಮತತ್ವವನ್ನು ಶೋಧಿಸುವ ಅವರ ಇಚ್ಛೆ ಬೆಳೆ ಯುತ್ತಲೇ ಹೋಯಿತು. ಅವರು ಅಂತರ್ಮುಖರಾದರು. ಮತ್ತು ಆ 'ನಾ'ನಿನ ಶೋಧಕ್ಕೆ ಹತ್ತಿದರು. ಅವರು ಧ್ಯಾನಧಾರಣೆ ಮಾಡಹತ್ತಿದರು. ರಮಣ ಮಹರ್ಷಿಗಳ ಒಬ್ಬ ಪ್ರಮುಖ ಶಿಷ್ಯ ವಿದ್ಯಾನಂದ ಸ್ವಾಮಿಗಳನ್ನು ಅವರು ತನ್ನ ಗುರುವಾಗಿ ಮಾಡಿಕೊಂಡರು; ಮತ್ತು ಅಧ್ಯಾತ್ಮಿಕ ಮಾರ್ಗ ದಲ್ಲಿ ಭರಭರನೆ ಪ್ರವಾಸ ಮಾಡತೊಡಗಿದರು. ಆ ಆತ್ಮ ತತ್ವದ ಶೋಧ ಹತ್ತುವತನಕ ಅವರು ನಿಲ್ಲುವವರಿದ್ದಿಲ್ಲ.

ಒಂದು ದಿನ ಅವರು ವಿದ್ಯಾನಂದ ಸ್ವಾಮಿಗಳಿಗೆ ಕೇಳಿದರು. "ನನಗೆ ಈಗ ಯಾವದೇ ಬಂಧನ ಬೇಡವೆನಿಸುತ್ತದೆ. ನನ್ನ ವೃತ್ತಿ ವಿರಕ್ತವಾಗುತ್ತ ನಡದಿದೆ. ಸಂಸಾರವೇ ಬೇಡವೆಂದೆನಿಸುತ್ತಿದೆ. ಸಂಸಾರದ ಪಾಶದಿಂದ ಮುಕ್ತನಾಗಬೇಕೆಂದು ಬಯಕೆ ಆಗಿದೆ. ನಾನು ಈಗ 'ಇಲ್ಲಿ'ಯವರಲ್ಲಿ ಯಾರೊಬ್ಬನವನೂ ಅಲ್ಲ.

"ನಾನು ಕೇವಲ ಆತ್ಮತತ್ವದವನಾಗಿದ್ದೇನೆ–ಎಂದು ನನಗೆ ಅನಿಸ ಹತ್ತಿದೆ. ಇಂಥ ಸ್ಥಿತಿಯಲ್ಲಿ ಸನ್ಯಾಸ ತೆಗೆದುಕೊಂಡರೆ ಏನು ಅಡ್ಡಿ? ನನಗೆ ತಾವು ಸನ್ಯಾಸ ದೀಕ್ಷೆ ಕೊಡುವಿರಾ? ನನ್ನನ್ನು ಈ ಎಲ್ಲ ಬಂಧನ ಗಳಿಂದ ಬಿಡುಗಡೆ ಮಾಡುವಿರಲ್ಲವೇ ?"

ಇದಕ್ಕೆ ವಿದ್ಯಾನಂದ ಸ್ವಾಮಿಗಳು ಅಂದರು. "ಸಾಧಕನು ಯಾವ ಸಂಗತಿಯನ್ನಾದರೂ ವಿಚಾರ ಪೂರ್ವಕವಾಗಿ ಮಾಡಬೇಕು. ಹೆಜ್ಜೆ ಎತ್ತುವಾಗ ಹತ್ತುಸಲ ವಿಚಾರ ಮಾಡಬೇಕು. ಮತ್ತು...."

ಅವರ ಮಾತು ಮುಗಿಯುವ ಮುಂಚೆಯೇ ಫ್ರಾಂಜ ಮ್ಯುಲರ ಅಂದರು. "ನಾನು ಎಲ್ಲ-ಎಲ್ಲವನ್ನು ಆಲೋಚಿಸಿದ್ದೇನೆ, ನನಗೆ ತಾವು ಸನ್ಯಾಸದೀಕ್ಷೆ ಕೊಡಿ, ನನಗೆ ಆ ಆತ್ಮ ತತ್ವದ ಶೋಧವನ್ನು ಮಾಡಗೊಡಿ!"

ವಿದ್ಯಾನಂದ ಸ್ವಾಮಿಗಳೆಂದರು. "ಆ ಸಂಗತಿ ಕೇವಲ ನಿಮ್ಮೊಬ್ಬರ ಕೈಯಲ್ಲಿಲ್ಲ. ನೀವು ಗೃಹಸ್ಥಾಶ್ರಮಿಗಳು. ನಿಮಗೆ ಹೆಂಡತಿ ಇದ್ದಾಳೆ, ಮಗನಿದ್ದಾನೆ. ಹೆಂಡತಿಯ ಅನುಮತಿಯ ಹೊರತು ನಿಮಗೆ ಸಂನ್ಯಾಸ-ದೀಕ್ಷೆ ಪಡೆದುಕೊಳ್ಳುವದು ಸಾಧ್ಯವಿಲ್ಲ, ಹಾಗೆ ಶಾಸ್ತ್ರವೇ ಇದೆ."

ಕೆಲ ಹೊತ್ತು ತಡೆದು ವಿದ್ಯಾನಂದ ಸ್ವಾಮಿಗಳು ಮುಂದರಿದರು." ಸನ್ಯಾಸ ಸ್ವೀಕರಿಸುವ ಮಾತು ಆಡುವದು ಸುಲಭದ ಸಂಗತಿಯಲ್ಲ. ಸನ್ಯಾಸ ಧರ್ಮದಷ್ಟು ಕಠಿಣಧರ್ಮ ಬೇರೆಯಾವದೂ ಇಲ್ಲ. ಈ ಸನ್ಯಾಸ ಧರ್ಮದ ಪಾಲನೆ ಮಾಡುತ್ತಿರುವಾಗ ಕಾಲು ಜಾರಿತೆಂದರೆ, ಮನುಷ್ಯ ಒಮ್ಮೆಲೆ ಎತ್ತರದ ಶಿಖರದಿಂದ ಕೆಳಗೆ ಆಳವಾದ ಕಂದಕದಲ್ಲಿ ಗಡಗಡ ಉರುಳಿ ಬೀಳುವನು!"

ಇದಕ್ಕೆ ಫ್ರಾಂಜ ಮ್ಯುಲರ ಅಂದರು." ನನ್ನ ಮನಸ್ಸಿನ ಸಿದ್ಧತೆ ಪೂರ್ತಿ ಆಗಿ ಬಿಟ್ಟಿದೆ. ಮತ್ತು...."

ವಿದ್ಯಾನಂದರು ನಡುವೆ ಅಂದರು. "ಮನಸ್ಸಿನ ಸಿದ್ಧತೆ ಮಾಡುವದು ಬೇರೆ; ಮತ್ತು ಪ್ರತ್ಯಕ್ಷವಾಗಿ ಸನ್ಯಾಸ ಧರ್ಮವನ್ನು ಪಾಲಿಸುವದು ಬೇರೆ! ನಮ್ಮ ವಿವೇಕಾನಂದರನ್ನು ನೀವು ಬಲ್ಲಿರಿ. ಸನ್ಯಾಸ ಧರ್ಮದ ಕುರಿತು ಅವರು ಏನು ಹೇಳಿಟ್ಟಿರುವರು ಗೊತ್ತೇ? ಸನ್ಯಾಸಿಯಾಗುವವನು ತನ್ನ ಸರ್ವಸ್ವವನ್ನು ತ್ಯಾಗ ಮಾಡಬೇಕು. ಸ್ವಂತದ ಸುಖದ ಕಲ್ಪನೆಯೂ ಸನ್ಯಾಸಿಯ ಮನಸ್ಸಿಗೆ ಸೋಂಕಲಾಗದು, ಸನ್ಯಾಸಿಗೆ ಹೆಣ್ಣು ಮತ್ತು ಹೊನ್ನು ವಿಷದಂತೆ ವರ್ಜ್ಯ!"

"ನಾನು ಪೂರ್ತಿಯಾಗಿ ಮಾಡಿದ್ದೇನೆ ಆ ಆಲೋಚನೆ, ಸ್ವಾಮೀಜೀ!"

ಫ್ರಾಂಜ ಮ್ಯುಲರರ ಈ ಮಾತಿಗೆ ವಿದ್ಯಾನಂದ ಸ್ವಾಮಿಗಳು ಮುಂದೆ ಅಂದರು." ಸರಿ ಹಾಗಾದರೆ ಮ್ಯುಲರ ಸಾಹೇಬರೇ! ಆದರೆ ಒಂದು ಮಾತು ಲಕ್ಷ್ಯದಲ್ಲಿ ಇಡಿರಿ. ಈ ಲೋಕದಲ್ಲಿ ಸನ್ಯಾಸಿಯ ಜನ್ಮ ಕೇವಲ ತನ್ನ ಮುಕ್ತಿಯ ಸಲುವಾಗಿ ಇರುವದಿಲ್ಲ. ಸ್ವಂತದ ಮುಕ್ತಿಯನ್ನು ಸಾಧಿಸಿ ಸನ್ಯಾಸಿಯು ಇತರರನ್ನು ಸುಖಿಯಾಗಿ ಮಾಡುವದಿರುತ್ತದೆ. ಅದಕ್ಕಾಗಿ ತನ್ನನ್ನೇ ಬಲಿ ಕೊಡಬೇಕಾಗುತ್ತದೆ. ಅದಕ್ಕೆ ಸಿದ್ಧನಾಗಬೇಕಾಗುತ್ತದೆ.

ತಪ್ಪು ಆಕ್ರೋಶದಿಂದ ಕೊರಗಿನ ಕೂಗಿನಿಂದ ದಶದಿಕ್ಕುಗಳನ್ನು ತುಂಬಿ ಬಿಡುವ ದುಃಖಕಷ್ಟಗಳಲ್ಲಿ ನರಳುವ ಪ್ರಾಣಿಗಳ ದುಃಖದ ಶಮನಕ್ಕಾ ಸನ್ಯಾಸಿಯು ಹೆಣಗಬೇಕು. ಗಂಡನಿಗಾಗಿ ವಿಲಾಪಮಾಡುವ ವಿಧವೆಯ ಕಂಬನಿ ಒರಿಸಲಿಕ್ಕೆ, ಮಗನಿಗಾಗಿ ಶೋಕ ಮಾಡುವ ತಾಯಿಯ ಸಾಂತ್ವನೆಗೆ, ಅಜ್ಞ ಹಿಂದುಳಿದ ಜನರಿಗೆ ಸುಖದ ಹಾದಿಕಾಣಿಸಲಿಕ್ಕೆ–ಹೀಗೆ ಒಂದಲ್ಲ ಎರ ಡಲ್ಲ, ಅನೇಕ ಕೆಲಸಗಳಿಗೆ ಸನ್ಯಾಸಿ ಅಣಿಯಾಗಬೇಕು. ಪ್ರಸಂಗ ಬಿದ್ದರೆ ತನ್ನ ಸ್ವಂತದ ಸುಖದ ಮೇಲೆ ಉರಿಯುವ ಇಂಗಾಳವಿಟ್ಟು!....ಮತ್ತು ಇದೆಲ್ಲ ಮಾಡಲಿಕ್ಕೆ ಮೊದಲು ತನ್ನ ಬಾಳ ಸಂಗಾತಿಯ, ಸಹಧರ್ಮಿಣಿಯ, ಸಮ್ಮತಿ ಪಡೆಯ ಬೇಕಾಗುತ್ತದೆ. ಅದಿಲ್ಲವಾದರೆ ಎಲ್ಲವೂ ವ್ಯರ್ಥ. ಮ್ಯುಲರ ಸಾಹೇಬರೇ!"

ಫ್ರಾಂಜ ಮ್ಯುಲರ ಸಂನ್ಯಾಸ ದೀಕ್ಷೆ ಸ್ವೀಕರಿಸುವ ನಿರ್ಧಾರವನ್ನು ದೃಢ ಮಾಡಿದರು. ಅದಕ್ಕಾಗಿ ಶಾಸ್ತ್ರದಂತೆ ಅವರು ತನ್ನ ಹೆಂಡತಿಯ ಅನುಜ್ಞೆ ಪಡೆಯಬೇಕು. ಆ ಕ್ಷಣದಿಂದಲೆ ಅವರಿಗೆ ತನ್ನ ಹೆಂಡತಿಯ ಅನುಮತಿ ಪಡೆದುಕೊಳ್ಳುವದರ ಬಗ್ಗೆ ಒಂದು ಗೀಳೇ ಅಂಟಿಕೊಂಡಿತು. ಅವರಿಗೆ ಅನಿ ಸಿತು. ತನಗೀಗ ಅರವತ್ತು ದಾಟಿದೆ. ಕುಟುಂಬದ ಎಲ್ಲ ಕರ್ತವ್ಯಗಳನ್ನು ಪೂರೈಸಿ ಆಗಿದೆ. ಈಗ ಸಂಸಾರದಲ್ಲಿ ಉಳಿದರೇನು, ಅಥವಾ ಸನ್ಯಾಸ ದೀಕ್ಷೆ ಪಡೆದುಸಂಸಾರದಿಂದ ದೂರ ಸರಿದರೇನು, ಎಲ್ಲ ಒಂದೇ. ತಾನೇನು ಏರು ಹರಯದಲ್ಲಿ ಸಂಸಾರ ಬಿಟ್ಟು ಹೊರಟಿರುವದಿಲ್ಲವಲ್ಲ ?

ಸನ್ಯಾಸ ದೀಕ್ಷೆ ಪಡೆಯುವ ಮುಂಚೆ ಅವರು ತನ್ನ ಪತ್ನಿಯ ಅನು ಮತಿ ಪಡೆಯಲೇ ಬೇಕಿತ್ತು. ಅದಕ್ಕಾಗಿ ಅವಳಿಗೆ ಪತ್ರ ಬರೆಯುವ ನಿರ್ಧಾ ರಕ್ಕೆ ಅವರು ಬಂದರು. ರಾತ್ರಿಯ ಹೊತ್ತು ಆಶ್ರಮದಲ್ಲಿಯ ಒಂದು ಕೋಣೆ ಯಲ್ಲಿ ಕಾಲುದೀಪದ ಬೆಳಕಿನಲ್ಲಿ ಫ್ರಾಂಜ ಮ್ಯುಲರ ಕಾಗದವನ್ನು ಮುಂದಿರಿಸಿ ಕೊಂಡು ಕೂತಿದ್ದರು. "ಪ್ರಿಯ ಏರ್ನಾ" ಇಷ್ಟು ಸಂಬೋಧನೆ ಬರೆದರು; ಮತ್ತು ಮುಂದೆ ಅವರ ಲೆಕ್ಕಣಿಕೆ ನಿಂತಿತು. ಮನಸ್ಸಿನಲ್ಲಿಯ ವಿಚಾರಗಳು ಸಾಸಿಯಲ್ಲಿ ಮೂಡಲೊಲ್ಲವು, ಫ್ರಾಂಕಫರ್ಟ ವಿಮಾನ ನಿಲ್ದಾಣವನ್ನು ಬಿಟ್ಟು ಹೊರಟಾಗಿನಿಂದ ಈತನಕದ ಎಲ್ಲ ಸಂಗತಿಗಳೂ ಅವರಿಗೆ ನೆನಪಾದವು.

ಫ್ರಾಂಕಫುರ್ಟ ವಿಮಾನ ನಿಲ್ದಾಣದಲ್ಲಿ ಅವರನ್ನು ಬೀಳ್ಕೊಡುವಾಗ ಏರ್ನಾ ಹೇಳಿದ್ದಳು. "ಇದು ನಿಮ್ಮ ಕೊನೆಯ ಹುಚ್ಚೆಂದು ತಿಳಿಯಿರಿ.– ಗಂಗೆಯಲ್ಲಿ ಎಲುಬು ಹಾಕುವದಂತೆ! ಇನ್ನು ಮುಂದೆ ನಮ್ಮ ಮನೆಯಲ್ಲಿ ಇಂಥ ಪ್ರಕಾರ ನಾನು ನಡೆಯಲು ಕೊಡಲಿಕ್ಕಿಲ್ಲ."

ಮತ್ತು ಏರ್ನಾಳ ದೃಷ್ಟಿಯಿಂದ ಹುಚ್ಚು ಹುಚ್ಚಾದ ಈ ಪ್ರಕಾರಗಳನ್ನು ನಿಲ್ಲಿಸುವದಕ್ಕಾಗಿ ಫ್ರಾಂಜ ಮ್ಯುಲರ ಈಗ ಅದೇ ಮನೆಗೆ ಕೊನೆಯ ಶರಣು ಹೊಡೆಯಲಿದ್ದರು. ಹಾಗೆ ಅವರ ದೃಢ ನಿರ್ಧಾರವಾಗಿ ಬಿಟ್ಟಿತ್ತು. ಆತ್ಮ ತತ್ವದ ಶೋಧದ ಪರಮಾವಧಿಯ ಜಿಜ್ಞಾಸೆ ಅವರ ಅಂತಃಕರಣಕ್ಕೆ ತಾಗಿತ್ತು. ಅದಕ್ಕಾಗಿ ಸಂಸಾರದ ಸಕಲ ಪಾಶಗಳನ್ನು ಹರಿದೊಗೆಯಲು ಅವರು ಸಿದ್ಧರಾಗಿದ್ದರು. ಸಂನ್ಯಾಸ ದೀಕ್ಷೆ ಸ್ವೀಕರಿಸಲಿದ್ದರು. ಈಗ ಆ ಮಾರ್ಗದಿಂದ ಅವರು ಹಿಂದೆಗೆಯುವ ಭಾಷೆಯೇ ಅವರ ಬಳಿಯಲ್ಲಿ ಇದ್ದಿಲ್ಲ. ಅವರ ದೃಷ್ಟಿಯಲ್ಲಿ ಅವರ ಎಲ್ಲ ಸಂಸಾರ ಭೂತಕಾಲಕ್ಕೆ ಒಳಪಟ್ಟಿತ್ತು. ಈಗ ಅವರು ಆಧ್ಯಾತ್ಮಿಕ ಸಂಸಾರವನ್ನು ಹೂಡಬೇಕು. ಆ ಸಂಸಾರದಲ್ಲಿ ಜೀವ–ಶಿವರ ಭೆಟ್ಟಿ ಆಗಲಿತ್ತು. ಅದಕ್ಕೆ ಮುಕ್ತಿಯ ಫಲ ಸಿಗುವದಿತ್ತು. ಈಗ ಅವರಿಗೆ ಬರೆ ತನ್ನ ಹೆಂಡತಿಯ ಅನುಮತಿಯ ಅವಶ್ಯಕತೆ ಇತ್ತು. ಆ ಹೊರತು ಅವರು ಸನ್ಯಾಸ ದೀಕ್ಷೆ ಪರಿಗ್ರಹಿಸುವಂತೆ ಇದ್ದಿಲ್ಲ. ಎಂಥ ಮಾನಸಿಕ ಪ್ರವಾಸವನ್ನು ಅವರು ಮಾಡಿದ್ದರು !

ಫ್ರಾಂಜ ಮ್ಯುಲರ ಹೆಂಡತಿಗೆ ಪತ್ರ ಬರೆಯಲು ಆರಂಭಿಸಿದರು. "ಪ್ರಿಯ ಏರ್ನಾ" ಎಂದು ಸಂಬೋಧನೆ ಬರೆದು ಅವರು ಲೆಕ್ಕಣಿಕೆ ತಡೆದಿದ್ದರು. ಅವರು ಮತ್ತೆ ಆ ಸಂಬೋಧನೆಯನ್ನೇ ಗೀರಿ ಭರಭರನೆ ಪತ್ರ ಬರೆದು ಮುಗಿಸಿದರು.

"ಪ್ರಿಯ ಏರ್ನಾ,

ಹೇಗೆ ಬರೆಯಲಿ, ಏನು ಬರೆಯಲಿ ಎನಿಸುತ್ತಿತ್ತು. ಆದರೆ ನಾನೀಗ ಮನಸ್ಸಿನ ಪೂರ್ತಿ ನಿರ್ಧಾರ ಮಾಡಿದ್ದೇನೆ. ನಾನು ಮನಸ್ಸಿನಲ್ಲಿ ನಿರ್ಧರಿಸಿದ್ದನ್ನೆಲ್ಲ ನಿನಗೆ ಮನಬಿಚ್ಚಿ ಬರೆದು ತಿಳಿಸುತ್ತಿದ್ದೇನೆ. ಆಮೇಲೆ ನಿನಗೆ ಏನನಿಸುವದೋ ಅನಿಸಲಿ,

ಯಾವ ಆತ್ಮತತ್ವದ ಶೋಧದಲ್ಲಿ ನನ್ನ ಮನಸ್ಸು ಜೀವಮಾನವೆಲ್ಲ ತೊಡಗಿತ್ತೋ, ಆ ಸತ್ಯ ಕೈಗೆ ಎಟಕುವಂಥ ಸಮಯ ಬಂದಿದೆ. ತಂದೆಯವರ ಅಸ್ಥಿಗಳ ವಿಸರ್ಜನೆ ಗಂಗೆಯಲ್ಲಿ ಮಾಡಿದಂದಿನಿಂದ ನಾನು ನಿಜವಾಗಿಯೂ ಅಂತರ್ಮುಖಿಯಾಗಿದ್ದೇನೆ. ನನ್ನ ಅಂತಃಕರಣಕ್ಕೆ ಯಾತರದೋ ಧ್ಯಾಸ ಅಪರಂಪಾರವಾಗಿ ಹತ್ತಿದೆ ನಾನು ಯಾತರದೋ ಶೋಧ ಮಾಡುತ್ತಿದ್ದೇನೆ. ನನಗೆ ಏನೋ ಬೇಕಾಗಿದೆ. ಆದರೆ ಅದು ನನ್ನ ಕೈಗೆ ಸಿಗುತ್ತಿಲ್ಲವೆಂದು ನನಗೆ ಒಂದೇ ಸವನೆ ಅನಿಸುತ್ತಿತ್ತು. ಒಂದು ಸಂಜೆ ನಾನು ಗಂಗಾ ತೀರದಲ್ಲಿ ನಿಂತಿದ್ದೆ. ಆದಿನ ನೋಡಿದ ಎಲ್ಲ ದೃಶ್ಯಗಳನ್ನು ನೆನೆದು ನಾನು ಒಳಗೂ-ಹೊರಗೂ ಪರವಶನಾಗಿ ಬಿಟ್ಟೆ. ನನಗೆ ಏನೋ ಒಂದು ಶೋಧ ಮಾಡುವ ದಿತ್ತು. ಆ ಶೋಧ ಮಾಡುತ್ತ ನಾನು ಅರುಣಾಚಲಂ ಎಂಬ ರಮಣ ಮಹರ್ಷಿಗಳ ಈ ಪವಿತ್ರ ಆಶ್ರಮಕ್ಕೆ ಬಂದೆನು. ಮಹರ್ಷಿಗಳ ದರ್ಶನ ದಲ್ಲಿ ನನಗೆ ಬೇಕಾದದ್ದು ಲಭಿಸಿತು. ನನ್ನ ಮನಸ್ಸು ಶಾಂತವಾಯಿತು ಯಾವ ಅಜ್ಞಾತದ ಶೋಧ ಹಚ್ಚಲು ನಾನು ಹೊರಟಿದ್ದೇನೋ ಆ ಶೋಧ ಈಗ ನನ್ನ ಕಣ್ಣೆತಕ್ಕೆಯಲ್ಲಿ ಬಂದಿದೆಯೆಂದು ಅನಿಸುತ್ತಿದೆ.

ಮನುಷ್ಯನಿಗೆ ಕೊನೆಗೂ ಯಾವ ಅನಂತ ಸುಖವು ಬೇಕೇಸಿಸುವದೋ ಅದು ಈಗ ನನಗೆ ಸಿಗಲಿದೆ. ಆಶ್ರಮದಲ್ಲಿ ಮಧ್ಯಾಹ್ನದ ವೇಳೆಗೆ ಎಲ್ಲ ಸಾಧಕರೂ ಏನಾದರೂ ಆಧ್ಯಾತ್ಮಿಕ ವಾಚನ ಮಾಡುತ್ತಿರುತ್ತಾರೆ. ನನ ಒಂದೆಡೆಗೆ ಎಂಥ ಸುಂದರ ವಿಚಾರಗಳು ಓದಲು ಸಿಕ್ಕವೆನ್ನುವಿ! ಮನುಷ್ಯನ ಅನಂತ ಸುಖದ ಪ್ರಾಪ್ತಿಯನ್ನೂ ಮಾಡಿಕೊಳ್ಳುವದಿದ್ದರೆ ಯಾವ ಮ ಮರ್ಯಾದೆಗಳು, ಗಡಿಸೀಮೆಗಳು ಅವನ ಸುಖಕ್ಕೆ ಪರಿಮಿತಿ ಹಾಕುವವೋ ಈ ಮರ್ಯಾದೆ-ಸೀಮೆಗಳನ್ನು ಮನುಷ್ಯ ಬಿಡಬೇಕು, ಸೀಮೋಲ್ಲಂಘನ ಮಾಡಬೇಕು. ಈ ಕಲ್ಪನೆಯನ್ನು ಹೇಳುವಾಗ ಎಂಥ ಸುಂದರ ದೃಷ್ಟಾಂ ಕೊಟ್ಟಿದ್ದಾರೆ ನೋಡು! ಕಡಲಲ್ಲಿ ಬಿಟ್ಟ ಕೊಡದೊಳಗಿನ ನೀರಿಗೆ ತಾನ ಕಡಲಾಗಬೇಕೆಂದು ಇಚ್ಛೆ ಇದ್ದರೆ, ಆ ನೀರು ಆ ಕೊಡದಿಂದ ಹೊರ ಬೀ ಬೇಕು. ಅದೇ ಪ್ರಕಾರ ಪ್ರತಿಯೊಂದು ಅಲ್ಪ ಸಂಗತಿಯೂ ಪೂರ್ಣವಾ ಲಿಕ್ಕೆ ತನಗೆ ಮರ್ಯಾದೆ ಹಾಕುವಂಥ ಸೀಮೆಗಳನ್ನು ನಾಶ ಮಾಡಬೇಕು ಆ ಸೀಮೆಗಳು ನಾಶ ಹೊಂದಿದ ಮೇಲೆ ಆ ಮರ್ಯಾದೆಗಳು ಹೇಗೆ ಉಳಿಯ

ವವು ? ಅದನ್ನು ಮರ್ಯಾದಿತವಾಗಿ ಮಾಡುವದಾದರೂ ಯಾವದು ? ಆಗ ಅದು ತಾನೇ ತಾನಾಗಿ ಅಪರಿಮಿತ ಅಮರ್ಯಾದಿತವಾಗುವದು. ಅನಂತ ವಾಗುವದು. ಅತ್ತಿಯ ಹಣ್ಣಿನಲ್ಲಿ ಜಂತುಗಳಿರುತ್ತವೆ. ಅವುಗಳಿಗೆ ಆ ಸಣ್ಣ ಪೊಳ್ಳಿನಲ್ಲಿ ಸುತ್ತಾಡಿ ಬೇಸರ ಬರುತ್ತದೆ. ಆಗ ಅವು ಆ ಹಣ್ಣಿನ ಪೊಳ್ಳನ್ನು ತ್ಯಾಗ ಮಾಡುತ್ತವೆ. ಅತ್ತಿಯ ಹಣ್ಣನ್ನು ಒಡೆದು ಹೊರ ಬೀಳುತ್ತವೆ. ಮರ್ಯಾದೆ ಯಾವಾಗಲೂ ಅನಂತದಲ್ಲಿ ಅಲ್ಪತ್ವವನ್ನು ಉಂಟುಮಾಡುತ್ತದೆ. ಅನಂತತ್ವದಲ್ಲಿ ಪ್ರವೇಶಿಸಲು ಇಚ್ಛಿಸುವವನು ಈ ಅಲ್ಪತ್ವದ ಕವಚದಿಂದ ಹೊರಗೆ ಬೀಳಲಿಬೇಕು.

ನನಗೂ ಅನಂತದ ಧ್ಯಾಸ ಹತ್ತಿದೆ. ಗೀಳು ಹತ್ತಿದೆ. ನನಗೂ ನಮ್ಮ ಲೌಕಿಕ ಸಂಸಾರದ ಕವಚದಿಂದ ಹೊರಬರಬೇಕಾಗಿದೆ. ಆದರೆ, ಏರ್ನಾ, ನನ್ನ ದಾರಿಯಲ್ಲಿ ಬಂದು ತೊಡಕಿದೆ. ಮತ್ತು ಆ ತೊಡಕನ್ನು ದೂರ ಮಾಡುವದು ಕೇವಲ ನಿನ್ನ ಕೈಯಲ್ಲಿದೆ, ನೀನು ಹೂಂ ಅಂದರೆ ಸಾಕು, ಒಂದು ಕ್ಷಣದಲ್ಲಿ ಆ ಅಜ್ಞಾತದ ನಿಧಿಯು ನನ್ನ ಕೈಗೆ ಬರುವದು. ಆದರೆ ನೀನು 'ನ'ಕಾರವಿತ್ತರೆ ?–ಆದರೆ ನೀನು ಹಾಗೆ ಮಾಡಲಾರೆ. ನನಗೆ ಆ ಬಗ್ಗೆ ಭರವಸೆ ಇದೆ. ಆಯುಷ್ಯವಿಡಿ ಯಾವ ಅಮೂಲ್ಯ ನಿಧಿಯ ಶೋಧದಲ್ಲಿ ಇದ್ದೇನೋ ಆ ಧನವು ಕೈಗೆ ಸೇರುವ ಪ್ರತ್ಯಕ್ಷ ಸಮಯ ಬಂದು ಒದಗಿರು ವಾಗ ನಾನು ಅಲ್ಲಿಂದ ಹಿಂದಿರುಗುವದೇ ? ಆ ಅಲೌಕಿಕ ನಿಧಿಯ ವಿರುದ್ಧ ದಿಕ್ಕಿಗೆ ಮೋರೆ ತಿರುಗಿಸುವದೇ ? ಹಾಗೆ ನಾನು ಮಾಡಲಾರೆ ಮತ್ತು ನೀನೂ ಹಾಗೆ ಮಾಡಲು ನನಗೆ ಹಚ್ಚಬೇಡ.

ಇದು ನೋಡು ಏರ್ನಾ, ನಮ್ಮ ಇಡಿಯ ಐಹಿಕ ಸಂಸಾರವು ಈಗ ಕೊನೆಗೆ ಬಂದಿದೆ. ಈಗ ಬಾಕಿಯಾದರೂ ಏನು ಉಳಿದಿದೆ ? ನಮ್ಮ ಪ್ರೇಮ ಕೂಡಿಬಂದು ನಾವು ಲಗ್ನ ಬಂಧನದಲ್ಲಿ ಬಿದ್ದೆವು. ಧರ್ಮದ ವಿಷಯದ ಮತಗಳು ನಮ್ಮ ಪರಸ್ಪರ ವಿರೋಧಿಯಾಗಿದ್ದವು ಆದರೆ ಆ ಮಾತ್ರಕ್ಕೆ ಸಂಸಾರದ ಸುಖಕ್ಕೆ ನಾವು ಎರವಾದದ್ದು ಇಲ್ಲ !

ಯಾರ ಮತಗಳಲ್ಲಿ ಎಷ್ಟೇ ಹೊಂದಾಣಿಕೆಯಾಗಲಿ ಈ ಮನುಷ್ಯ ಸಂಸಾರವೆ ಹೀಗೆ–ಇಲ್ಲಿ ಮತ ಭೇದಗಳು ಬಂದೇ ತೀರುತ್ತವೆ. ಪತಿ-ಪತ್ನಿ

ಗಳಲ್ಲಿ ವಿರೋಧ ಉಂಟಾಗುತ್ತದೆ. ಜಗಳಗಳು ಆಗುತ್ತವೆ. ಚಾಡಿ ಚಂಡಿತನ ಆಗುತ್ತವೆ. ಆದರೆ ಆ ಮೂಲಕ ಸಂಸಾರ ಸುಖದ ಧಾರೆ ಮೊಂಡವಾಗುವದೇ? ಪಾತ್ರೆಗೆ ಪಾತ್ರೆ ಅಪ್ಪಳಿಸುತ್ತದೆ, ಕೆಲ ಕಾಲ ಸದ್ದು ಉಂಟಾಗುತ್ತದೆ, ಕಾಲಾಂತರದಿಂದ ಆ ಸದ್ದು ಕರಗಿ ಹೋಗುತ್ತದೆ. ಬಹುತೇಕ ಮಾನವೀ ಸಂಸಾರದ ಕಥೆಯೂ ಹೀಗೆಯೇ. ಆ ಮಟ್ಟಿಗೆ ನಮ್ಮಲ್ಲಿ ಮತಭೇದಗಳು ತೀವ್ರವಾಗಿ ಇದ್ದರೂ ನಾವು ಅದನ್ನು ಹಿಡಿತದಲ್ಲಿ ಇಟ್ಟುಕೊಂಡೆವು.... ನೀನು ಮತ್ತು ನಾನು. ಸಂಸಾರವು ಸಹಕಾರದ ಮೇಲೆಯೇ ನಿಂತಿರುವದಲ್ಲವೇ? ಕೊಡು-ಕೊಳ್ಳು ಸುಖಿ ಸಂಸಾರದ ಗುರುಕೀಲಿ. ಏನೇ ಇರಲಿ, ನಮ್ಮಿಬ್ಬರ ಸಂಸಾರ ಖಂಡಿತವಾಗಿ ಇಜ್ಜೋಡಿನದಾಗಲಿಲ್ಲ. ವೈಮನಸ್ಸಿನದಾಗಲಿಲ್ಲ.

ಈಗ ನಿನ್ನ ಬಾಗಿಲಿಗೆ ಇದು ನನ್ನ ಕೊನೆಯ ಬೇಡಿಕೆ. ಒಂದು ಸಂಸಾರವನ್ನು ಜನ್ಮವಿಡಿ ನಿನ್ನೊಂದಿಗೆ ಮಾಡಿದೆ. ಈಗ ಮನುಷ್ಯ ದೇಹದ ಈ ಇನ್ನೊಂದು ಸಂಸಾರವನ್ನು ಈ ಅಜ್ಞಾತದೊಂದಿಗೆ ನನಗೆ ಹೂಡಲು ಬಿಡು. ಅದಕ್ಕಾಗಿ ನನಗೆ ಈ ಸಂಸಾರದಿಂದ ಬಿಡುಗಡೆ ಬೇಕು. ನಾನು ಹಿಂದೂ ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ಸನ್ಯಾಸದೀಕ್ಷೆ ಸ್ವೀಕರಿಸಲಿದ್ದೇನೆ. ಅದಕ್ಕಾಗಿ ನನಗೆ ನಿನ್ನ ಅನುಮತಿ ಬೇಕಾಗಿದೆ. ನಿನ್ನ ಅನುಜ್ಞೆ ಪಡೆದುಕೊಳ್ಳದೆ ನಾನು ಸನ್ಯಾಸ ಸ್ವೀಕರಿಸುವಂತೆ ಇಲ್ಲ. ಈ ತನಕ ನನಗಾಗಿ ನೀನು ಬಹಳಷ್ಟು ಮಾಡಿದಿ. ಈಗ ಇದನ್ನಿಷ್ಟು ಮಾಡು. ನನಗೆ ಸಂಸಾರದಿಂದ ಮುಕ್ತನನ್ನಾಗಿ ಮಾಡು.

ವಿದ್ಯಾಪೀಠದಿಂದ ನನಗೆ ಸಿಗಲಿರುವ ನಿವೃತ್ತಿ ವೇತನ, ನನ್ನ ಮನೆಮಾರು, ಬ್ಯಾಂಕಿನಲ್ಲಿಯ ಎಲ್ಲ ಉಳಿತಾಯ-ಇದೆಲ್ಲ ಧನಸಂಪತ್ತಿಗೆ ಈಗ ನೀವೇ ಒಡೆಯರು. ನಿಮಗೆ ಯಾವದೂ ಕೊರತೆ ಬೀಳಲಾರದು. ಆಲ್ಬರ್ಟನಿಗೆ ಈ ಪತ್ರವನ್ನು ತೋರಿಸು. ಅವನು ಈಗ ಯೋಗ್ಯ ಹಾದಿಗೆ ಹತ್ತಿದ್ದಾನೆ. ನನಗೆ ಅವನ ಯಾವ ಚಿಂತೆಯೂ ಇಲ್ಲ. ಆದರೆ ಅವನ ವಿಷಯ ಒಂದು ಮಾತು ನೆನಪಿನಲ್ಲಿಡು. ಅವನಾದರೂ ನನ್ನದೇ ಮಗ. ನನ್ನದೆ ಒಲವನ್ನು ಹಿಡಿದಿದ್ದಾನೆ ಆತ! ನಮ್ಮ ಮನೆತನದಂತೆಯೇ ಅವನ ಒಲವೂ ಈ ಹಿಂದೂ ಧರ್ಮದ ಕಡೆಗೇ ಉಂಟು. ಅವನ ಆ ಮೂಲ

ಪ್ರವೃತ್ತಿಯನ್ನು ನೀನು ಎಂದೂ ತಡೆಯಬೇಡ. ಒಂದು ನಿಟ್ಟು ಹಿಡಿದು ನುಗ್ಗುವ ನೀರಿನ ಪ್ರಚಂಡ ಪ್ರವಾಹವನ್ನು ಪುಟ್ಟ ಕೈಗಳ ಒಡ್ಡು ಕಟ್ಟಿ ತಡೆ ಹಿಡಿಯುವದರಲ್ಲಿ ಅರ್ಥವೇನಿದೆ? ಅವನಿಗೆ ಅವನ ಹಾದಿಯಲ್ಲಿ ನೆಮ್ಮದಿ ಯಿಂದ ಹೋಗಗೊಡು. ಇಷ್ಟೇ ನಿನಗೆ ಕೊನೆಯ ವಿನಂತಿ. ಈ ಮೋಕ್ಷದ ಧ್ಯೇಯದ ಕಡೆಗೆ ಪ್ರತಿಯೊಬ್ಬರೂ ತನ್ನ ತನ್ನ ಹಾದಿಯಿಂದ ಸಾಗು ತ್ತಿರುತ್ತಾರೆ. ಅಲ್ಬರ್ಟನನ್ನು ಅಡ್ಡ ಗಟ್ಟಬೇಡ. ಈ ಹಿಂದು ಭೂಮಿ ಯೊಳಗಿನ ಮಹಾತತ್ವವು ಸದಾ ನಿಮ್ಮ ಕಲ್ಯಾಣ ಮಾಡಲಿ. ಇದಕ್ಕೂ ಹೆಚ್ಚಿನದು ಏನು ಬರೆಯಲಿ?

ಒಂದು ಕಾಲದಲ್ಲಿ
ನಿನ್ನವನಾಗಿದ್ದ,
ಫ್ರಾಂಜ.

ಫ್ರಾಂಜ ಮ್ಯುಲರ ಪತ್ರ ಬರೆದು ಮುಗಿಸಿದಾಗ ಚತುರ್ಥಿಯ ಚಂದ್ರ ಬಿಂಬವು ನೆತ್ತಿಗೆ ಬರುತ್ತಿತ್ತು. ಗಗನಚುಂಬಿ ಮರಗಳ ಚೆಂಡೆಗಳು ಬೆಳ್ಳಿ ಯಾಗಿದ್ದವು. ಮರಗಳ ಎಲೆಸಿರಿಯು ಬೆಳ್ಳಿ ಬೆಳಕಿನಲ್ಲಿ ಚಕಮಕಿಸುತ್ತಿತ್ತು. ಇದುರಿನ ಗುಡ್ಡವೂ ಚಂದ್ರನ ಬೆಳಕಿನಲ್ಲಿ ಮುಳುಗಿತ್ತು. ಆ ಗುಡ್ಡದ ಮೇಲಿನ ದೇವರು ಮಾತ್ರ ಕಾಣುತ್ತಿದ್ದಿಲ್ಲ. ಅದು ಇನ್ನೂ ಕಣ್ಣಿನ ಆಚೆಗೆ ಇತ್ತು.

ಫ್ರಾಂಜ ಮ್ಯುಲರ ಏನ್ಸಾಳಿಗೆ ಬರೆದ ಪತ್ರವನ್ನು ಅಂಚೆಗೆ ಹಾಕಿದರು ಮತ್ತು ಸನ್ಯಾಸಿ ದೀಕ್ಷೆ ಪಡೆಯಲು ತನಗೆ ಅನುಮತಿ ಬರುವದೋ ಇಲ್ಲವೋ ಎಂಬ ವಿಚಾರದಲ್ಲಿ ಅವರು ಮಗ್ನರಾದರು.

ಮ್ಯುಲರ ಕುಟುಂಬದಲ್ಲಿ ಒದಗುವ ಘಟನೆಗಳು ಒಂದು ಬೇರೆಯೇ ನಿಟ್ಟು ಹಿಡಿದಿದ್ದವು. ಅವುಗಳೊಳಗಿಂದ ನಿರ್ಮಾಣವಾಗುತ್ತಿದ್ದ ವಿಧಿಲಿಖಿತ ಬೇರೆಯೇ ಆಗಿತ್ತು.

—೦—

## ಭಾಗ : ೩

ಆಲ್ಬರ್ಟನು ಕುತಲ್ಲಿಂದಲೆ ಭಾರತಿಯನ್ನು ಒಮ್ಮೆಲೆ ಹತ್ತಿರ ಸೆಳೆದು
ಕೊಂಡನು. ಅವಳ ಗದ್ದವನ್ನು ಎತ್ತಿ ಅವಳ ತುಟಿಗಳನ್ನು ಚುಂಬಿಸ
ಹತ್ತಿದನು. ಭಾರತಿ ಅವನಿಗೆ ಹಾಗೆ ಚುಂಬಿಸಲು ಕೊಡಲಿಲ್ಲ. ಅವನಿಂದ
ದೂರ ಸರಿಯಲು ಅವಳು ಬಹಳ ಪ್ರಯತ್ನವನ್ನು ಮಾಡಿ ನೋಡಿದಳು.
ಆದರೆ ಅವನ ಬಿಗಿಯಾದ ಬಾಹು ಪಾಶದಿಂದ ತನ್ನ ಬಿಡುಗಡೆ ಮಾಡಿಕೊಳ್ಳ
ಲಿಕ್ಕೆ ಅವಳಿಗೆ ಆಗಲಿಲ್ಲ. ಆಗ ಅವಳು ಅವನ ಬಗಲಲ್ಲಿ ಹಾಗೆಯೇ ವಿರಮಿಸಿ
ದಳು. ತನ್ನ ಎಡತೋಳನ್ನು ಅವಳ ಮೈಯ ಸುತ್ತು ಬಳಸಿ ಆತ ಅವಳನ್ನು
ಇದುರಿಸಿದನು. ಅವರ ಕಣ್ಣು ಕ್ಷಣಕಾಲ ಕೂಡಿದವು. ಅವಳ ಕಣ್ಣಲ್ಲಿ
ಆಳವಾಗಿ ನೋಡಿ ಆತ ಮಧುರವಾಗಿ ನಕ್ಕನು. ಅವಳು ಅವನ ಕಡೆಗೆ
ಮುದ್ದಿನಿಂದ ನೋಡಿ ತನ್ನ ದೃಷ್ಟಿಯನ್ನು ನಾಚಿ ಕೆಳಗೆ ಹೊರಳಿಸಿದಳು.
ಆಲ್ಬರ್ಟ ಬಾಯಿಯನ್ನು ಅವಳ ಕಿವಿಗೆ ಹಚ್ಚಿ ಮೆಲ್ಲಗೆ ಅಂದನು. "ನೆನ
ಪಾಗುತ್ತದೆಯೇ ಆ ಸಂಜೆ?"

ಭಾರತಿಗೆ 'ಆ ಸಂಜೆ' ಪೂರ್ತಿ ಪೂರ್ತಿ ನೆನಪಿತ್ತು. ಆದರೆ ಅವಳು
ಏನೇನೂ ಅನ್ನಲಿಲ್ಲ. ಏನೂ ಅನ್ನುವ ಅಗತ್ಯವೇ ಇದ್ದಿಲ್ಲ ಪ್ರೇಮದ
ಸೀಮೆಯ ಎಲ್ಲ ಸಂಗತಿಗಳು, ಮಾತಿನ ಮೇರೆಯ ಆಚೆಗೆ ಹೋದಾಗಿನ
ಕ್ಷಣವಾಗಿತ್ತು ಅದು. ಕೇವಲ ಅಂದಿನ ಆ ಸಂಜೆ ಮಾತ್ರವಲ್ಲ, ಅನಂತರದ
ಈ ನಡುವಿನ ಕಾಲದಲ್ಲಿ ಘಟಿಸಿದ ಎಷ್ಟೆಷ್ಟೋ ಸಂಗತಿಗಳು ಅವರಿಬ್ಬರಿಗೂ

ಚೆನ್ನಾಗಿಯೇ ನೆನಪಿದ್ದವು. ನಿನ್ನೆ ಮೊನ್ನೆಯೇ ಘಟಿಸಿದಂತೆ! ಮನುಷ್ಯನ ಆಯುಷ್ಯದಲ್ಲಿ ಎಷ್ಟೋ ಘಟನೆಗಳು ಅನಪೇಕ್ಷಿತವಾಗಿ ಒದಗಿ ಬರುತ್ತವೆ. ಮತ್ತು ಆ ಘಟನೆಗಳ ಪರಿಣತಿ ಈ ಪರಿಗೆ ಬಂದು ಮುಟ್ಟುತ್ತದೆ ಎಂಬ ವಿಚಾರವೆ ಅವರಿಬ್ಬರ ಮನಸ್ಸಿನಲ್ಲಿ ಬರುತ್ತಿತ್ತು. ಎಂಥ ಅನಪೇಕ್ಷಿತ ಘಟನೆಗಳವು–ಕಲ್ಪನೆಗೂ ಆಚೆಯವು!

* * * *

ಆ ದಿನ ಸಂಜೆಗೆ ಆ ತರುಣ ಹುಡುಗಿ ಕಾಲ್‌ಬೆಲ್‌ದ ಗುಂಡಿಯ ಮೇಲೆ ಬೆರಳನ್ನು ಇಟ್ಟಳು ಮತ್ತು ದೂರ ಸರಿದಳು. ಬಹಳ ಹೊತ್ತಿನವರೆಗೆ ಬಾಗಿಲು ತೆರೆಯಲಿಲ್ಲ. ಮತ್ತೊಮ್ಮೆ ಅವಳು ಕರೆಗಂಟೆಯ ಗುಂಡಿಯನ್ನು ಒತ್ತುವಷ್ಟರಲ್ಲಿ ಬಾಗಿಲು ತೆರೆಯುವ ಸದ್ದಾಯಿತು. ಮತ್ತು ನಾಲ್ವತ್ತು ದಾಟಿದ ಒಬ್ಬ ಹೆಂಗಸು ಬಾಗಿಲಲ್ಲಿ ನಿಂತಿದ್ದು ಕಂಡಿತು. ಯಾರೂ ಯಾರನ್ನೂ ಗುರುತಿಸಲಿಲ್ಲ. ಹೇಗೆ ಗುರುತಿಸಬೇಕು ? ಏಕೆಂದರೆ ಆ ಮುಂಚೆ ಯಾರೂ ಯಾರನ್ನು ಕಂಡಿದ್ದೇ ಇಲ್ಲ. ಆದರೆ ಆ ಮನೆಯ ಬಾಗಿಲಲ್ಲಿ ನಿಂತ ಆ ಮಹಿಳೆ ಯಾರೆಂಬುದು ಹೊರಗೆ ನಿಂತ ಆ ಹುಡಿಗಿಗೆ ಹೊಳೆಯಿತು. ಆದರೆ ಆ ಮಹಿಳೆಗೆ ಈ ಹುಡುಗಿಯ ಗುರುತು ಸಿಗುವದು ಶಕ್ಯವಿದ್ದಿಲ್ಲ. ಹೊರಗೆ ನಿಂತ ಆ ಹುಡುಗಿ ತಮ್ಮ ದೇಶದವಳಲ್ಲ, ಬೇರೆ ಯಾವದೋ ದೇಶದವಳು, ಇಷ್ಟು ಮಾತ್ರ ಆ ಮಹಿಳೆ ಊಹಿಸಿದಳು. ಅವಳು ಆ ಹುಡುಗಿಯತ್ತ ಪ್ರಶ್ನಾರ್ಥಕ ಮುದ್ರೆಯಿಂದ ನೋಡಿದಳು. ಮತ್ತು ನಿಂತಲ್ಲಿಯೆ ತನ್ನ ಮೈ ಕೈ ಅಲ್ಲಾಡಿಸಿದಳು.

ಆಗ ಆ ಹೊರಗಿನ ಹುಡುಗಿ ತನ್ನ ಪರ್ಸಿನೊಳಗಿಂದ ಒಂದು ಪಾಕೀಟು ಹೊರತೆಗೆದು ಆ ಮಹಿಳೆಯ ಕೈಗೆ ಇಡುತ್ತ ಅಂದಳು. "ತಾವೇ ಏರ್ನಾ ಮ್ಯುಲರ ಅಲ್ವೆ ?

ಮಹಿಳೆ ಅಹುದೆಂದು ತಲೆದೂಗಿದಳು. ಆಗ ಹುಡುಗಿ ಅಂದಳು. "ನನ್ನ ಹೆಸರು ಭಾರತೀ, ನಾನು ಭಾರತದಿಂದ ಬಂದಿದ್ದೇನೆ.—ತಮ್ಮ ಯಜಮಾನರಿಂದ ಪರಿಚಯ ಪತ್ರ ತಂದಿದ್ದೇನೆ."

ಭಾರತಿ ಇತ್ತ ಪತ್ರವನ್ನು ಏರ್ನಾ ಕೈಗೆ ತೆಗೆದುಕೊಂಡಳು, ಮತ್ತು ನಿಂತಲ್ಲಿಯೆ ಅದನ್ನು ಓದಿದಳು. ಪತ್ರ ಓದುವಾಗ ಅವಳ ಮನಸ್ಸಿನಲ್ಲಿ ಸಿಟ್ಟು, ಉದ್ವೇಗ, ತಿರಸ್ಕಾರ ಮತ್ತು ಅಸಹ್ಯ–ಇವೆಲ್ಲ ವಿಕಾರಗಳೂ ಒಮ್ಮೆಲೇ ಒಟ್ಟಾಗಿ ಮೂಡಿದವು ಅವಳು ಕೆಂಪು ಕೆಂಪಾದಳು. ಭಾರತಿ ಅವಳಿಗೆ ಕೊಟ್ಟ ಪತ್ರ ತೀರ ಸಾದಾ ಇತ್ತು, ಅದರಲ್ಲಿ ವಿಶೇಷವೇನೂ ಇದ್ದಿಲ್ಲ. ಆ ಔಪಚಾರಿಕ ಪತ್ರದಲ್ಲಿ ಫ್ರಾಂಜ ಮ್ಯುಲರರು ಅವಳ ಪರಿಚಯವನ್ನಷ್ಟೇ ಮಾಡಿಕೊಟ್ಟಿದ್ದರು, ಮತ್ತು ಕೊನೆಗೆ ಬರೆದಿದ್ದರು.

"ವಿಶೇಷವೆಂದರೆ, ಭಾರತೀ ಎಂಬ ಹೆಸರಿನ ಈ ಮುದ್ದಾದ ಹುಡುಗಿ ಭಾರತದವಳು–ಈ ಪವಿತ್ರ ದೇಶದವಳು. ಯಾವ ದೇಶವು ಮಾನಫ್ರೆಡ್ ರಿಗೆ ಹುಚ್ಚು ಹಿಡಿಸಿತ್ತೋ, ನನಗೂ ಅಕ್ಷರಶಃ ಹುಚ್ಚನನ್ನಾಗಿ ಮಾಡಿದೆಯೋ, ಆ ಪವಿತ್ರ ದೇಶದ ಈ ಹುಡುಗೆಯ ಸ್ವಲ್ಪವಾದರೂ ಸೇವೆಯನ್ನು ಮಾಡುವ ಯೋಗ ನಮ್ಮ ಮನೆಗೆ ಬರುತ್ತಿರುವದು ನನ್ನ ಭಾಗ್ಯವೆಂದೇ ಭಾವಿಸುತ್ತೇನೆ. ನಿನಗೆ ಹೇಳುವದು ಇಷ್ಟೇ– ಈ ಮುದ್ದು ಮುದ್ದಾದ ಹುಡುಗಿಯನ್ನು ಚೆನ್ನಾಗಿ ನೋಡಿಕೊ.–ನಮ್ಮ ಮನೆತನಕ್ಕೆ ಒಪ್ಪುವ ಹಾಗೆ. ಪತ್ರದಲ್ಲಿ ಇದಕ್ಕೂ ಹೆಚ್ಚು ಬರೆಯುವದಿಲ್ಲ.

ಈ ಪತ್ರವನ್ನು ಓದಿದಾಗ ಏರ್ನಾಳಿಗೆ ಹಾಗೆಯೇ ಸಿಟ್ಟು ಬರು ವಂತಿತ್ತು. ಭಾರತದ ಋಣ ತಮ್ಮ ಮನೆಯ ಮೇಲಿದೆ–ಎಂಬ ಮಾತನ್ನು ಅವಳು ಎಂದೂ ಒಪ್ಪಿದ್ದಿಲ್ಲ. ಅವಳ ಮಾವನಿಗೆ, ಗಂಡನಿಗೆ ಆ ಋಣ ಎಷ್ಟೇ ಅನಿಸಿರಬಹುದು. ಆದರೆ ಅವಳು ಅದನ್ನು ಒಪ್ಪುವಂತಿದ್ದಿಲ್ಲ. ಅದು ಅವಳಿಗೆ ಒಗ್ಗುವಂತಹೂ ಇದ್ದಿಲ್ಲ. ಯಾವ ದೇಶವು ಅವಳೊಂದಿಗೆ ಉದ್ದಕ್ಕೂ ವೈರಹಿಡಿದಿತ್ತೋ, ಆ ದೇಶದ ಋಣ ಅವಳೇಕೆ ಮನ್ನಿಸಬೇಕು? ತಂದೆಯ ಅಸ್ಥಿಗಳನ್ನು ಗಂಗೆಯಲ್ಲಿ ವಿಸರ್ಜಿಸಲಿಕ್ಕೆ ಒಯ್ಯುವಾಗ ಫ್ರಾಂಜ ಮ್ಯುಲರರಿಗೆ ಅವಳು ಸ್ಪಷ್ಟವಾಗಿ ಎಚ್ಚರಿಕೆ ಕೊಟ್ಟಿದ್ದಳು. "ಇದು ನಿಮ್ಮ ಕೊನೆಯ ಮರುಳೆಂದು ತಿಳಿಯಿರಿ. ಗಂಗೆಯಲ್ಲಿ ಅಸ್ಥಿ ಹಾಕುವದಂತೆ! ಇನ್ನು ಮುಂದೆ ನಮ್ಮ ಮನೆಯಲ್ಲಿ ಇಂಥ ಸಂಗತಿ ನಾನು ನಡೆಯ ಗೊಡಲಾರೆ."

ಆದರೆ ಅವಳ ದುರ್ದೈವಕ್ಕೆ ಅದು ಅವರ ಕೊನೆಯ ಹುಚ್ಚಾಗಿದ್ದಿಲ್ಲ. ತಿರುಗಿ ಅವಳ ದೃಷ್ಟಿಯಲ್ಲಿ ಅವರು ಭಾರತದಲ್ಲಿ ಕಾಲಿಟ್ಟಂದಿನಿಂದ ವ್ಯರ್ಥವಾಗಿ ಹೋಗಿದ್ದರು. ಅರುಣಾಚಲಂ ದಿಂದ ಫ್ರಾಂಜ ಮ್ಯುಲರ ಕಳುಹಿಸಿದ ಪತ್ರ ಅವಳಿಗೆ ಎಂಟು ದಿನ ಮುಂಚೆ ಸಿಕ್ಕಿತ್ತು. ಅದನ್ನು ಓದಿದಾಗ ಅವಳ ಮೈ ಮೇಲೆ ಆಕಾಶವೇ ಕುಸಿದಿತ್ತು. ಅದರ ಭಾರದಡಿಗೆ ಅವಳು ಪೂರ್ತಿ ಅಡಚಿ ಹೋಗಿದ್ದಳು. ಆ ಆಘಾತ ಅವಳ ಸಹನೆಯನ್ನೇ ಮೀರಿದ್ದು ಅವಳ ಸಹನಶಕ್ತಿ ಈಗ ಮುಗಿಯುತ್ತ ಬಂದಿತ್ತು. ಅನಿಷ್ಟದ ವಿರುದ್ಧ ಅವಳು ಪ್ರಾಣಪಣದಿಂದ ಎಷ್ಟು ಹೋರಾಡಿದ್ದಳು ? ಆದರೆ ಏನೇನೂ ಪ್ರಯೋಜನವಾಗಿದ್ದಿಲ್ಲ. ಫ್ರಾಂಜ ಮ್ಯುಲರರ ಆ ಪತ್ರವನ್ನು ನೋಡಿ ಅವಳು ಹತಬದ್ಧಳಾಗಿ ಹೋಗಿದ್ದಳು.

ಮಧ್ಯಾಹ್ನದಲ್ಲಿ ಅವಳ ಕೈಗೆ ಈ ಪತ್ರ ಬಂದಿತ್ತು. ಈಗ ಆಲ್ಬರ್ಟ ಆಫೀಸಿಗೆ ಹೋಗಿದ್ದ. ತಾಂತ್ರಿಕ ಶಾಖೆಯ ಪದವೀ ಪರೀಕ್ಷೆ ಪಾಸಾದ ಮೇಲೆ ಅವನಿಗೆ ಕೂಡಲೆ ಕ್ರಪ ಕಂಪನಿಯಲ್ಲಿ ಒಳ್ಳೆಯ ಚಾಕರಿ ಸಿಕ್ಕಿತ್ತು. ಏರ್ನಾ ಈಗ ನಿಶ್ಚಿಂತಳಾಗಿದ್ದಳು. ಅವಳಿಗೆ ಅನಿಸಿತು, ಇನ್ನು ಎಲ್ಲವೂ ಸರಿ ಹೋಗುವದು. ಆ ಫ್ರಾಂಜ ಮ್ಯುಲರ ಭಾರತದಿಂದ ಮರಳಿ ಮನೆಗೆ ಬಂದಾಗ ಅವರಿಗೆ ತಮ್ಮ ಮಗ ಒಳ್ಳೆ ಹಾದಿಗೆ ಹತ್ತಿದ್ದು ಕಾಣುವದು ಭಾರತೀಯ ಸಂಸ್ಕೃತಿಯಿಂದ ತಾನು ಅವನನ್ನು ದೂರ ವಿಡುವದರಲ್ಲಿ ಯಶಸ್ವಿಯಾದ ದೃಶ್ಯವನ್ನೂ ಅವರು ನೋಡುವರು. ಮತ್ತು ಬಹುಶಃ ಭಾರತೀಯ ಸಂಸ್ಕೃತಿಯ ಬಗೆಗಿನ ಫ್ರಾಂಜ ಮ್ಯುಲರರ ಮರುಳು ಕಡಿಮೆ ಆಗಿರಲೂಬಹುದು: ಅಥವಾ ಅದನ್ನು ಕಡಿಮೆ ಮಾಡಲು ತಾನು ಅವರನ್ನು ಒತ್ತಾಯಗೊಳಿಸಬಹುದು. ಇಂಥ ಆಶೆಯಲ್ಲಿ ಏರ್ನಾ ಸುಳಿಯುತ್ತಿದ್ದಳು.

ಆದರೆ ಫ್ರಾಂಜ ಮ್ಯುಲರರ ಪತ್ರ ಅವಳ ಆಶೆಗೆ ಸುರಂಗ ಹಚ್ಚಿತು. ಅವಳು ಒಮ್ಮೆಲೆ ನಿರಾಧಾರಳಾದಳು. ಅವಳ ಕನಸು ಅಳಸಿ ಹೋಯಿತು. ಅವಳು ಕಟ್ಟಿದ ಮನೋರಾಜ್ಯ ಕುಸಿದು ಬಿತ್ತು. ಫ್ರಾಂಜ ಮ್ಯುಲರ ಅವಳಿಂದ ಸನ್ಯಾಸ ಸ್ವೀಕರಿಸಲು ಸಮ್ಮತಿ ಬೇಡುತ್ತಿದ್ದರು. ತಮ್ಮ ಈ

ವರೆಗಿನ ಸಂಸಾರದ ಮೇಲೆ ತನ್ನ ಕೈಯಿಂದಲೆ ಕೇಡವಿಟ್ಟಂತೆ ಆಗಿತು
ಹಾಗೇ ಮಾಡುವದರಿಂದ ಒದಗುವ ಆತ್ಮ ಘಾತವು ಅವಳಿಗೆ ಸ್ಪಷ್ಟವಾಗಿಯೆ
ಕಾಣುತ್ತಿತ್ತು. ಅವರ ಹುಚ್ಚಿನ ಹದ್ದು ಮೀರಿತ್ತು. ಅಧೋಗತಿಂ
ಕಂದಕದ ಅಂಚಿಗೆ ಅವರು ನಿಂತಿದ್ದರು. ಮುಂದೆ ಬಾಯಿಕಳೆದು ಚಾಚಿ
ಸಂಕಟದ ದರಿಯು ಅವರಿಗೆ ಕಾಣುತ್ತಿದ್ದಿಲ್ಲ. ಭಾರತೀಯ ಸಂಸ್ಕೃತಿಂ
ಮೋಹದಿಂದ ಅವರು ಕುರುಡರಾಗಿದ್ದರು. ಅವಳ ಕನಸು-ಮನಸ್ಸಿನಲ್ಲಿಯು
ಇಲ್ಲದೆ ಈ ಸಂಕಟ ಅವಳ ಇದುರಿಗೆ ಆಕಸ್ಮಿಕವಾಗಿ ಬಂದು ನಿಂತಿತ್ತು. ಇ
ಮ್ಯುಲರ ಕುಟುಂಬವೇ ಇನ್ನು ಈ ಕಂದಕದ ಆಳಕ್ಕೆ ಇಳಿದು ನಷ್ಟವಾಗಲಿತು
'ಹಾರಾಕಿರಿ'ಯದೇ ಅನುಜ್ಞೆ ಅವರು ಈಗ ಕೇಳುತ್ತಿದ್ದರು. ಅವಳಿಗೆ
ಮಾತಿಗೆ ಸಂತಾಪವೆನಿಸಿತು. ಪತ್ರವನ್ನು ಓದುತ್ತಿದ್ದಂತೆ ಅವಳು ಥರಥ
ನಡುಗ ಹತ್ತಿದಳು. ಮತ್ತು ತನ್ನ ಎರಡು ಕೈಗಳಿಂದ ಆ ಮಡಚಿದ ಪ
ವನ್ನು ಗಟ್ಟಿಯಾಗಿ ಒತ್ತಿ ಹಿಡಿದು ಕೊನೆಗೆ ಆಕೆ ಸಣ್ಣ ಮಗುವಿನಂತೆ ಅ
ತೊಡಗಿದಳು.

ಸಂಜೆಗೆ ಆಲ್ಬರ್ಟ ಮನೆಗೆ ಬಂದನು. ಆಗ ಅವಳ ಸಾಂತ್ವ
ಮಾಡಲು ಆತ ಅಂದನು. "ನಿನಗೆ ಈ ಮಾತಿನ ಬಗ್ಗೆ ಸಿಟ್ಟು ಬರುವ
ಸ್ವಾಭಾವಿಕ. ಆದರೆ ಹೀಗೆ ನೋಡು, ನಮಗೆ ಸಿಟ್ಟು ಬಂದ ಮಾತ್ರಕ್ಕೆ
ಸ್ಥಿತಿ ಸುಧಾರಿಸುವದಿಲ್ಲ. ಅಂದಾಗ ಸಿಟ್ಟಿನ ಭರದಿಂದ ನಮ್ಮ ರಕ್ತವ
ಬತ್ತಿಸಿ ಕೊಳ್ಳುವದರ ಅರ್ಥವೇನು ? ನಮ್ಮ ಜನರನ್ನು ಪೂರ್ತಿ ಕಳೆ
ಕೊಂಡೆವು ಎಂದು ಕೊಂಡು ಸುಮ್ಮನೆ ಕೂಡ್ರಬೇಕು."

ಇದಕ್ಕೆ ಏನರ್ಾ ಒಮ್ಮೆಲೆ ಸಿಡಿದೆದ್ದು ಅಂದಳು. "ತತ್ತ್ವಜ್ಞಾ
ಹೇಳಲು ಬಹಳ ಸುಲಭ. ಆರೇ, ಈ ಮನೆಗಾಗಿ ಎಲ್ಲ ರಕ್ತ ನಾನು ಬ
ದ್ದೇನೋ ! ಕೈಗೆ ಸಿಕ್ಕದ್ದೇನೆಂದರೆ ಈ ದುಃಖದ ಈ ಪರ್ವತ ! ನನ್ನ
ತಾಳ್ಮೆ ಹರಿದು ಚಿಂದಿಯಾಗಿದೆಯೋ! ನಿನಗೆ ಆಡಲಿಕೆ ಏನು ?"

ಮತ್ತೆ ತಡೆದು ಅವಳು ಮುಂದೆ ಅಂದಳು "ನೀನು ಆಡಿದ್ದು ಸರಿಯ
ನೀನೂ ಅದೇ ಸಾಲಿನವನೇ. ತಣ್ಣಗಿನ ಗುಂಡಿನಂತೆ ಕುಳಿತು ಆಡುತ್ತಿರ

ಯಾರು ಕಲಿಸಿದರು ನಿನಗೆ ಈ ತಣ್ಣಗಿನ ಶಾಂತತೆ? ಆ ಮಾಟಗಾರ್ತಿ ಭಾರತವೇ?"

"ಒಳ್ಳೆ ಸಂಗತಿ ಯಾರಿಂದಲೂ ಕಲಿಯಬಹುದು."

ಆಲ್ಬರ್ಟನ ಈ ಮಾತಿಗೆ ಏನ್ನಾ ತನ್ನ ಬಾಯಿಯ ಚಕ್ರ ಸುರು ಮಾಡಿದ್ದು ಬಹಳ ಹೊತ್ತಿನವರೆಗೂ ತಡೆಯಲೇ ಇಲ್ಲ. ಅವಳು ಮಾತಾಡುತ್ತಲೇ ಉಳಿದಳು. ಮಾತಾಡುವಾಗ ಅವಳು ಗಾಬರಿ ಆದಳು. ಥರಥರ ನಡುಗ ಹತ್ತಿದಳು. ಅವಳ ಬಾಯಿಂದ ಮಾತೇ ಸರಿಯಾಗಿ ಬರದಾದವು. ಆಗ ಆಲ್ಬರ್ಟ ಅಂದನು. "ನೀನು ಅವರಿಗೆ ಪತ್ರ ಬರೆ ಮತ್ತು ಹಾಗೇನಾದರೂ ಮಾಡಬೇಡ, ಎಂದು ಕಳಕಳಿಯಿಂದ ತಿಳಿಸಿಹೇಳಲ್ಲ."

ಇದಕ್ಕೆ ಅವಳು ನಕಾರಾರ್ಥದಲ್ಲಿ ಕತ್ತು ಅಲ್ಲಾಡಿಸುತ್ತ ಅಂದಳು, "ಛೇ ಛೇ! ನಾನು ಬರೆ ಪತ್ರ ಬರೆದು ತಡೆಯುವವಳೇ ಅಲ್ಲ. ನಾನೇ ಸ್ವತಃ ಭಾರತಕ್ಕೆ ಹೋಗುವೆ. ಮತ್ತು ಅವರನ್ನು ಇಲ್ಲಿಗೆ ಎಳೆದು ತರುವೆ. ಬೇಡಾದ ಪ್ರಸಂಗ ನನ್ನ ಮೇಲೆ ಬಿದ್ದಿದೆ,—ಆ ಮಾಟದ ನಾಡಿಗೆ ಹೋಗುವ ಪ್ರಸಂಗ! ಆದರೆ ಏನು ಮಾಡಲಿ? ಸನ್ಯಾಸ ತಕ್ಕೊಳ್ಳುತ್ತಾರಂತೆ! ಹೇಗೆ ತೆಗೆದು ಕೊಳ್ಳುತ್ತಾರೆ ಸನ್ಯಾಸ? ನೋಡಿಯೇ ಬಿಡುತ್ತೇನೆ."

ಇದರ ಮೇಲೆ ಹೆಚ್ಚು ಮಾತಾಡುವದರಲ್ಲಿ ಏನೂ ಅರ್ಥವಿದ್ದಿಲ್ಲ. ಆಲ್ಬರ್ಟತೆಪ್ಪಗೆ ಕುಳಿತ. ಆತ ಏನ್ನಾಳ ಭಾರತ ಯಾತ್ರೆಯ ಸಿದ್ಧತೆಮಾಡಲು ನಿರ್ಧಾರಮಾಡಿದ.

* * * *

ಈ ಘಟನೆಯಾಗಿ ಬರೆ ಎಂಟು ದಿನವಾಯಿತು. ಮತ್ತು ಈಗ ಬಾಗಿಲಲ್ಲಿ ಹೊಸ ಸಂಕಟ ಬಂದು ನಿಂತಿದ್ದು ಕಾಣುತ್ತಿತ್ತು. ಭಾರತಿ ಕೊಟ್ಟ ಪತ್ರವನ್ನು ಏನ್ನಾ ಓದಿದಳು. ಅವಳ ಸಿಟ್ಟು ಅಂಕೆ ಮೀರಿತು. ಅವಳು ಹಿಂದೆ ಸರಿದಳು ಮತ್ತು ನಕಾರಾರ್ಥವಾಗಿ ಕತ್ತು ಅಲ್ಲಾಡಿಸುತ್ತ ಧಡೀರನೆ ಹೊರಬಾಗಿಲನ್ನು ಮುಚ್ಚಿಕೊಂಡಳು.

ಆ ಬಾಗಿಲ ಸದ್ದು ಅದೆಷ್ಟು ದೊಡ್ಡದು! ಆ ಕಿರಿಯುಗಲಾದ ಓಣಿಯಲ್ಲಿ ಆ ಸದ್ದು ಕೆಲಹೊತ್ತು ಮೊಳಗಿದಂತೆ ಭಾರತಿಗೆ ಭಾಸವಾಯಿತು.

ಮುಚ್ಚಿದ ಬಾಗಿಲ ಕದದ ಮೇಲಿನ ಪಾಟಿಯಲ್ಲಿ ಅವಳಿಗೆ ಹೆಸರು ಕಂಡವು; ಮಾನಫ್ರೆಡ್ ಮ್ಯುಲರ, ಫ್ರಾಂಜ ಮ್ಯುಲರ, ಆಲ್ಬರ್ಟ ಮ್ಯುಲರ!

ಮಾನಫ್ರೆಡ್ ಮ್ಯುಲರ ಮೃತರಾಗಿದ್ದರು. ಆದರೂ ಅವರ ಹೆಸರು ಆ ಹಲಗೆಯ ಮೇಲೆ ಇತ್ತು. ಫ್ರಾಂಜ ಮ್ಯುಲರ ಭಾರತಕ್ಕೆ ಹೋಗಿದ್ದರು ಮತ್ತು ಆಲ್ಬರ್ಟ ಅವರ ಮಗನೆಂದರೆ ಮೂರನೆಯ ತಲೆಮಾರು. ಆಲ್ಬರ್ಟನ ಹೆಸರ ಮೇಲೆ ಅವಳ ಲಕ್ಷ್ಯ ಕೆಲಹೊತ್ತು ಸ್ಥಿರವಾಯಿತು. ನಡೆದ ಪ್ರಕಾರದಿಂದ ಅವಳು ತುಂಬ ಗೊಂದಲದಲ್ಲಿ ಬಿದ್ದಿದ್ದಳು. ನಿಂತ ಸ್ಥಳ ದಲ್ಲಿಯೇ ಅವಳು ನಿಶ್ಚಲವಾಗಿ ನಿಂತಿದ್ದಳು. ಆದರೂ ಅವಳು ಮನಸ್ಸಿ ನಲ್ಲಿಯೇ ಅಂದುಕೊಳ್ಳುತ್ತಿದ್ದಳು. "ಈ ಆಲ್ಬರ್ಟ ಹೇಗಿರಬಹುದು"?

"ಯಾರು ಬೇಕು ನಿಮಗೆ? ಈ ಪ್ರಶ್ನೆಯಿಂದ ಅವಳ ತಂದ್ರಾವಸ್ಥೆ ಭಂಗವಾಯಿತು. ಅವಳು ದಿಗಿಲುಬಿದ್ದು ಹಿಂದೆ ಹೊರಳಿ ನೋಡಿದಳು. ಒಬ್ಬ ಅತ್ಯಂತ ಚೆಲುವ ತರುಣ ಅವಳಿಗೆ ಕೇಳುತ್ತಿದ್ದ ''ಯಾರು ಬೇಕು ನಿಮಗೆ?"

ಆ ತರುಣನನ್ನು ತಾನು ಹಿಂದೆ ಎಲ್ಲೋ ನೋಡಿರಬೇಕೆಂದು ಅವಳಿಗೆ ಒರಿದೆ ಅನಿಸ ಹತ್ತಿತು. ಆ ಪರಕೀಯ ತರುಣನನ್ನು ನಾನು ಹೇಗೆ ನೋಡಿ ರಲು ಸಾಧ್ಯ ? ಎಂಬ ವಿಚಾರ ಮನಸ್ಸಿಗೆ ಬಂದು ಅವಳು ತನ್ನನ್ನು ಸಾವರಿಸಿ ಕೊಂಡಳು. ಮತ್ತು ತಡವರಿಸುತ್ತ ಅಂದಳು. "ಏರ್ನಾ ಮ್ಯುಲರ ಇವ ರದೇ ಮನೆಯಲ್ಲ್ವಾ ಇದು ?"

ಈ ತರುಣನು ಅಹುದೆಂದು ತಲೆದೂಗಿದನು. ಮತ್ತು ಅಂದನು, "ನಿಮಗೆ ಯಾರು ಬೇಕು ?"

ಇದಕ್ಕೆ ಏನು ಉತ್ತರ ಕೊಡಬೇಕೆಂಬುದೇ, ಭಾರತಿಗೆ ಹೊಳೆಯಲಿಲ್ಲ- ಅವಳು ಇನ್ನಿಷ್ಟು ಗೊಂದಲಗೆಟ್ಟಳು. ಆ ಮೇಲೆ ನಡೆದ ಸಂಗತಿಯನ್ನೆಲ್ಲ ಅವಳು ಹೇಗೋ ಅವನಿಗೆ ಹೇಳಿದಳು. ಆಲ್ಬರ್ಟ ಮುಂದೆ ಹೋಗಿ ಬಾಗಿಲ ಮೇಲಿನ ಗುಂಡಿ ಒತ್ತಿದನು. ಬಾಗಿಲು ತೆರೆಯಿತು. ಏರ್ನಾ ಬಾಗಿ ಲಲ್ಲಿ ನಿಂತಿದ್ದಳು. ಅವಳಿಗೆ ತಿರುಗಿ ಭಾರತಿಯೇ ಕಂಡಳು. ಆದರೆ ಜತೆಗೆ

ಆಲ್ಬರ್ಟನನ್ನು ಕಂಡಳು. ಅವನು ಒಳಗೆ ಹೋದನು. ಮತ್ತು ಒಳಗೆ ಬರಲು ಭಾರತಿಗೆ ಸನ್ನೆ ಮಾಡಿದನು. ಅವನ ಬೆನ್ನಿಂದ ಭಾರತಿ ಸುಮ್ಮನೆ ಒಳಗೆ ಬಂದಳು.

ತನ್ನ ತಾಯಿಗೆ ಆತ ಕೇಳಿದ. "ಆ ಪತ್ರ ಎಲ್ಲಿದೆ ?"

ಭಾರತೀಯು ತಂದ ಫ್ರಾಂಜ ಮ್ಯುಲರರ ಪತ್ರ ಆತ ಓದಿದ. ಮತ್ತು ಏರ್ನಾಳ ಕಡೆಗೆ ನೋಡಿ ಅಂದ, "ಇನ್ನು ನಿನ್ನ ಹೇಳಿಕೆ ಏನು ?"

ಏರ್ನಾಳ ಸಿಟ್ಟು ಇನ್ನೂ ಹೊಗೆಯಾಡುತ್ತಲೇ ಇತ್ತು, ಅವಳೆಂದಳು "ನನ್ನದೇನು ತಪ್ಪು, ನೀನೇ ಹೇಳು ! ನಾನು ಹೀಗಲ್ಲದೆ ಇನ್ನು ಏನು ಮಾಡಲಿ ? ಭಾರತದ ಬರಿ ಹೆಸರೆತ್ತಿದರೂ ನನಗೆ ಸಿಟ್ಟು ತಡೆಯಲು ಆಗುವ ದಿಲ್ಲ. ಅಂದಾಗ ಈ ಹುಡಗಿಯನ್ನು ಮನೆಯಲ್ಲಿ ಇಟ್ಟುಕೊಳ್ಳಲೇ ? ಇವಳ ರೂಪದಲ್ಲಿ ಈ ಮನೆಯ ಮೇಲೆ ಸಂಕಟ ಎಳೆದು ತರಲೇ ? ಹೇಳು. ನನ್ನದೇನು ತಪ್ಪಾಯಿತು ?"

ಆಲ್ಬರ್ಟ ಅಂದ, "ನಿನ್ನದು ತಪ್ಪಾಗಿದೆ ಎಂದು ನಾನು ಅನ್ನುವದಿಲ್ಲ. ಆದರೆ........

ಅವನ ವಾಕ್ಯ ಪೂರ್ತಿ ಆಗುವ ಪೂರ್ವದಲ್ಲಿಯೇ ಅವಳು ಅಂದಳು. "ಆಯಿತು ಹಾಗಾದರೆ ! ಭಾರತವು ನನಗೆ ಪೂರ್ತಿ ಘಾತ ಮಾಡಿದೆ. ಫ್ರಾಂಜ ಅತ್ತ ಕಡೆಗೆ ಹೋದರು ಮತ್ತು ಸನ್ಯಾಸ ತಕ್ಕೊಂಡು ಅಲ್ಲಿಯೇ ಉಳಿಯುವ ರಂತೆ. ಇನ್ನೆಷ್ಟು ದಿನ ನಾನು ಈ ಛಳವನ್ನು ಸಹಿಸಲಿ ?"

ಆಲ್ಬರ್ಟ ಶಾಂತವಾಗಿ ಅವಳಿಗೆ ಕೇಳಿದನು: "ಆದರೆ, ಇದರಲ್ಲಿ ಈ ಹುಡುಗಿಯದೇನು ದೋಷ ?"

"ಇವಳ ದೋಷವಿರಲಿಕ್ಕಿಲ್ಲ. ಆದರೆ ಈ ಹುಡುಗಿ ಭಾರತೀಯಳು--ಎಂಬುದಂತೂ ನಿಜವಷ್ಟೇ ? ನಿನಗೆ ಸುಳ್ಳೆನಿಸಬಹುದು, ಆಲ್ಬ್ಯಾ, ಆದರೆ ನನಗೇನೂ ಈ ಲಕ್ಷಣ ಕ್ಷೇಮವೆನಿಸುವದಿಲ್ಲ ಈ ಭಾರತ ಮತ್ತು ನಮ್ಮ ಮನೆ ಇವುಗಳ ಸಂಬಂಧ ಕೂಡಿದಾಗಲೇ, ನಾನು ನನ್ನ ಮನಸ್ಸಿನಲ್ಲಿ ಒಂದು ಮಾತು ಗಂಟಿಕ್ಕಿಕೊಂಡಿದ್ದೇನೆ. ಈ ಘಟನೆಗಳು ವಿಪರೀತಕ್ಕೆ ಹೋಗಿ ಅವು

ಗಳಿಂದ ಈ ನಮ್ಮ ಮನೆಯ ಮೇಲೆ ಅಪಾರ ದುಃಖ ಕುಸಿದು ಬೀಳಲಿದೆ. ಇಡೀ ಮನೆತನದ ಸತ್ಯಾನಾಶವಾಗಲಿದೆ—ಹೀಗೆ ನನ್ನ ಮನಸ್ಸಿನಲ್ಲಿ ಒಂದೇ ಸಮನೆ ಭಯ ಬೇರು ಬಿಟ್ಟಿದೆ. ನನ್ನ ಮನಸ್ಸಿಗೆ ಬಂದ ಕೆಟ್ಟ ಕಲ್ಪನೆಗಳೆಲ್ಲ ನಿಜವಾಗುತ್ತ ನಡೆದಿವೆ. ಅಂಥದರಲ್ಲಿ ಇನ್ನೂ ಒಂದು ಹೆಚ್ಚಿಸುವದೇಕೆ ? ಇಲ್ಲವಾದರೆ ಆ ಹುಡುಗಿಗೂ ನನಗೂ ಆಗದಂತಹದೇನಿದೆ ?"

"ಆಯಿತು ಹಾಗಾದರೆ! ಅಂದ ಮೇಲೆ ಇವಳನ್ನು ಈ ಮನೆಯಲ್ಲಿ ಇಟ್ಟು ಕೊಳ್ಳಲು ಅಡ್ಡಿ ಏನು ?"

ಆಲ್ಬರ್ಟನ ಪ್ರಶ್ನೆಗೆ ನಕಾರಾರ್ಥದಲ್ಲಿ ತಲೆದೂಗುತ್ತ ಏರ್ನಾ ಅಂದಳು. "ಛೇ ಛೇ ! ಅದು ಮಾತ್ರ ಎಂದೂ ಆಗದು. ನಾನು ಇವಳನ್ನು ಈ ನಮ್ಮ ಮನೆಯಲ್ಲಿ ಎಂದೂ ಇಟ್ಟುಕೊಳ್ಳಲಾರೆ. ಅದೊಂದು ಶುದ್ಧ ಸಂಕಟ ಎಳೆದು ತಂದುಕೊಳ್ಳಲಾರೆ, ನಿನಗೆ ಹೇಳೀ ಇಡುತ್ತೇನೆ ! ನೀನು ನನಗೆ ಒತ್ತಾಯ ಮಾಡಬೇಡ. ನಿಜವಾಗಿಯೂ ಬೇಡ !"

ಮತ್ತು ಭಾರತಿಯ ಕಡೆಗೆ ನೋಡುತ್ತ ಏರ್ನಾ ಅಂದಳು. "ನಿನಗೆ ಕೆಲವು ಸಂಗತಿ ಗೊತ್ತೇ ಇಲ್ಲ. ಇಲ್ಲದಿದ್ದರೆನೀನು ಇಲ್ಲಿಗೆ ಬರುತ್ತಲೆ ಇದ್ದಿಲ್ಲ. ಇಲ್ಲಿ ಉಳಿಯುವ ಬಗ್ಗೆ ಅಲ್ಲದ ಆಗ್ರಹವನ್ನು ಹಿಡಿಯುತ್ತಿದ್ದಿಲ್ಲ. ನಮ್ಮ ಮನೆಗೆ ಇದೊಂದು ಶಾಪವೆಂದೇ ತಿಳಿ. ಆದರೆ ನಿಮ್ಮ ದೇಶದ ಮತ್ತು ನಮ್ಮ ಸಂಬಂಧ ಒಳಿತಾಗಲಿಲ್ಲ. ಆ ಸಂಬಂಧದ ಮೂಲಕ ನಮ್ಮ ಮನೆಯ ಒಬ್ಬೊಬ್ಬ ಪುರುಷನ ಬಲಿ ಬೀಳುತ್ತ ಬಂದಿದೆ. ಇವನು ನನ್ನ ಒಬ್ಬನೇ ಒಬ್ಬ ಮಗ. ಇವನಾದರೂ ಈ ಶಾಪದಿಂದ ದೂರ ಉಳಿಯ ಬೇಕು. ಅವನ ಮೇಲೆ ನೀನಾದರೂ ದಯೆ ಮಾಡು. ಈ ತಾಯಿಗೆ ಈ ಮಗನ ಭಿಕ್ಷೆಯನ್ನು ನೀಡು."

ಏರ್ನಾ ಮಾತಾಡುತ್ತಿದ್ದಳು. ಮತ್ತು ಭಾರತಿಯ ಅಂತಃಕರಣ ನುಚ್ಚುನೂರಾಗುತ್ತಿತ್ತು. ಅವಳು ತನ್ನ ಬ್ಯಾಗನ್ನು ಎತ್ತಿದಳು ಮತ್ತು ಮನೆಯ ಮುಂದಿನ ಕಿರಿದಾದ ಫೂಟಪಾಥಿಗೆ ಇಳಿದಳು. ಅವಳು ಈಗ ಆ ಕಲ್ಲುಹಾಸಿದ ರಸ್ತೆಯಲ್ಲಿ ಹಾಗೆಯೇ ಸುಮ್ಮನೆ ನಡೆದು ಹೋಗುವವಳಿದ್ದಳು. ಎಲ್ಲಿಗೋ ಯಾರಿಗೆ ಗೊತ್ತು ?

ಆದರೆ ಅಷ್ಟರಲ್ಲಿ ಆಲ್ಬರ್ಟ ಅವಳಿಗೆ ನಿಲ್ಲಲು ಸನ್ನೆ ಮಾಡಿದನು. ಮತ್ತು ಏರ್ನಾಳತ್ತ ಹೊರಳಿ ಅಂದನು, "ನಮ್ಮ ಧರ್ಮದಲ್ಲಿ ಇದೇ ಹೇಳಿದೆಯೇ? ಮುಚ್ಚಂಜೆಗೆ ಬಾಗಿಲಿಗೆ ಬಂದ ಅತಿಥಿಯನ್ನು ಮೋರೆತಿರುವಿ ಹೋಗಲು ಹಚ್ಚುವದು ನಮ್ಮ ಧರ್ಮವೇ? ನಿನ್ನ ಅಂಬೋಣದಂತೆ ಭಾರತವೆ ನಿನ್ನ ಘಾತ ಮಾಡಿರಲೂಬಹುದು. ಆದರೆ ಈ ಭಾರತೀಯ ಹುಡುಗಿ ನಿನಗೇನು ಮಾಡಿದ್ದಾಳೆ? ಅವಳಿಗೇಕೆ ಸುಮ್ಮನೆ ಶಿಕ್ಷೆ? ಪಾಪವನ್ನು ತಿರಸ್ಕರಿಸಿರಿ. ಆದರೆ ಪಾಪಿಯನ್ನು ಪ್ರೀತಿಸಿರಿ-ಇದು ನಮ್ಮ ಧರ್ಮ ಕೊಟ್ಟ ಸಂದೇಶವಲ್ಲವೇ? ಅಂದಾಗ ಈ ಬಡ ಹುಡುಗಿಯನ್ನು ದ್ವೇಷಿಸುವದರಲ್ಲಿ ಅವಳನ್ನು ಮನೆಯೊಳಗೆ ಇಟ್ಟು ಕೊಳ್ಳದಿರುವದರಲ್ಲಿ ಅರ್ಥವಾದರೂ ಏನು"?

ಆಲ್ಬರ್ಟ ಮಾತನಾಡುತ್ತಿದ್ದಾಗ ಏರ್ನಾ ಒಂದೇ ಸವನೆ ಕತ್ತು ಅಲ್ಲಾಡಿಸುತ್ತಿದ್ದಳು, ಒಲ್ಲೆನೆಂದು. ಅವಳಿಗೆ ಅವನ ಮಾತು ಸರಿ ಎನಿಸುತ್ತಿತ್ತು. ಆದರೆ ಜತೆಗೆ ಮತ್ತೆ ವಿಷದ ಪರೀಕ್ಷೆ ಮಾಡಿ ನೋಡಲು ಅವಳು ಸಿದ್ಧಳಿದ್ದಿಲ್ಲ.

ಆಗ ಕೊನೆಯ ಅಸ್ತ್ರವನ್ನು ಪ್ರಯೊಗಿಸುವ ಹೇತುವಿನಿಂದ ಆಲ್ಬರ್ಟ ಅಂದನು. "ಇನ್ನು ಇಷ್ಟು ತಡಮಾಡಿ ಆಕೆ ಬೇರೆ ಎಲ್ಲಿಗೆ ಹೋಗಬೇಕು? ಈ ಪರಸ್ಥಳದಲ್ಲಿ ಅವಳಿಗೆ ಗುರುತು ಪರಿಚಿತರಾದರೂ ಯಾರು ಇದ್ದಾರೆ? ಅಂದಾಗ ಈ ರಾತ್ರಿಯ ಮಟ್ಟಿಗಾದರೂ ಅವಳಿಗೆ ಇಲ್ಲಿ ತಂಗಲಿಕ್ಕೆ ಬಿಡು. ನಾಳೆ ಅವಳು ದಾರಿ ಸಿಕ್ಕಕಡೆಗೆ ಹೊರಟು ಹೋಗುವಳು.

ಈ ಮಾತಿಗೆ ಏರ್ನಾ ಒಪ್ಪಿಗೆ ಕೊಡಲೇ ಬೇಕಾಯಿತು.

*　　*　　*　　*

ಆ ರಾತ್ರಿಯ ಮಟ್ಟಿಗೆಂದು ಭಾರತಿ ಮ್ಯುಲರ ಕುಟುಂಬದಲ್ಲಿ ಪ್ರವೇಶ ಮಾಡಿದಳೇನೊ ನಿಜ. ಆದರೆ ಆ ಒಂದು ರಾತ್ರಿ ಆ ಎಲ್ಲರ ಬಾಳಿನಲ್ಲಿ ಎಂಥ ಕ್ರಾಂತಿಯನ್ನು ಉಂಟುಮಾಡಿತು!

ಆ ದಿನ ರಾತ್ರಿಯ ಊಟವಾದ ಮೇಲೆ ಆ ಮೂವರು ಬಹಳಷ್ಟು ಹರಟೆ ಹೊಡೆದರು. ಸಂಜೆಗೆ ಉಂಟಾದ ಕಹಿ ಬಹಳ ಮಟ್ಟಿಗೆ ಕಡಿಮೆ

ಆಯಿತು. ಆ ಮೂವರೂ ಧರ್ಮದ ವಿಷಯಕ್ಕೆ ಬಹಳ ಚರ್ಚೆ ಮಾಡಿದರು. ಚರ್ಚೆಯ ಸ್ವರೂಪ ಸಾಮಾನ್ಯವೇ ಆಗಿತ್ತು. ಆದ್ದರಿಂದ ಚರ್ಚೆ ಮನ ಬಿಚ್ಚಿ ನಡೆದಿತ್ತು. ಭಾರತಿಯು ಆ ಮನೆಯಲ್ಲಿ ಪ್ರವೇಶ ಮಾಡಿದಂದಿನಿಂದ ಸಾಮಾನ್ಯವಾಗಿ ಮೂಕನಂತಿದ್ದ ಆಲ್ಬರ್ಟನಿಗೆ ಚರ್ಚೆಯು ಸ್ಫುರಣವೇರಿತ್ತು. ಆತ ಒಂದೇಸಮನೆ ಮಾತಾಡುತ್ತಿದ್ದ. ಏನರ್ಾ ಆದಕ್ಕೆ ಶಂಕೆ ಎತ್ತುತ್ತಿದ್ದಳು ಮತ್ತು ಭಾರತಿ ಕಿವಿಗೊಟ್ಟು ಕೇಳುತ್ತಿದ್ದಳು. ಆತ ಮಾತಾಡುತಿದ್ದಾಗ ಅವನ ನೀಲಿ ಆಲಿಗಳಲ್ಲಿ ಒಂದು ವಿಶಿಷ್ಟ ಹೊಳಪು ಮಿಂಚುತ್ತಿತ್ತು. ಅವನ ನೀಲಿ ಕಣ್ಣಾಲಿಗಳು ಥೇಟು ತಾಯಿಯ ಕಣ್ಣಂತೆಯೇ ಇದ್ದವು. ಇದನ್ನು ಭಾರತಿ ಎಂದೋ ಗಮನಿಸಿದ್ದಳು. ಅವಳು ಮಾತಾಡುತ್ತಿರುವಾಗ ಅವನ ಬೆಳ್ಳಗಿನ ಹಣೆಯ ಮೇಲಿನ ನೀಲ ಸಿರೆಯೊಂದು ನಡುವೆಯೇ ಎದ್ದು ಕಾಣುತ್ತಿತ್ತು. ಆಗ ಅವಳಿಗೆ ಅನಿಸುತ್ತಿತ್ತು– ಉದ್ದ ಗಂಧದ ರೇಖೆ ಎಳೆದುಕೊಂಡ ಒಬ್ಬ ವೈಷ್ಣವನೇ ತನ್ನೊಂದಿಗೆ ಮಾತಾಡುತ್ತಿದ್ದಾನೆ. ಚರ್ಚೆಯ ಭರದಲ್ಲಿ ಅವನ ಪ್ರತಿಪಾದನೆಯು ಒಳ್ಳೆ ರಂಗಿಗೆ ಬಂದಾಗ ತನ್ನ ಬಲಗೈಯ ತೋರ್ಬೆರಳನ್ನು (ತರ್ಜನಿ) ಹಿಂದೆ ಮುಂದೆ ಅಲ್ಲಾಡಿಸುತ್ತ ಆತ ಇದುರಿಗೆ ಕುಳಿತವರನ್ನು ಗದರಿಸುವಂತೆ, ಎಚ್ಚರಿಕೆ ಕೊಡುವಂತೆ ಮಾತಾಡುತ್ತಿದ್ದನು. ಅವನ ಆ ರೀತಿ ಅವಳಿಗೆ ಬಹಳ ತಮಾಷೆಯಾಗಿ ಕಂಡಿತು. ಆತ ಮಾತಾಡುತ್ತಿರುವಾಗ ಆಕೆ ತುಂಬ ತನ್ಮಯತೆಯಿಂದ ಅವನತ್ತ ನೋಡುತ್ತಿದ್ದಳು.

ಮುಖ್ಯವಾಗಿ ಸಂಜೆಯ ವಿಷಯದ ಕುರಿತೇ ಅವರ ಮಾತು ನಡೆದಿತ್ತು. ನಿಜವಾದ ಧರ್ಮದ ಸ್ವರೂಪ ವಿಶ್ವವ್ಯಾಪಿಯಾಗಿರತಕ್ಕದ್ದು– ಎಂಬ ಮಾತನ್ನು ಆತ ತಾಯಿಗೆ ತಿಳಿಸಿ ಹೇಳುತ್ತಿದ್ದನು. ಅವನ ಪ್ರತಿಪಾದನೆಯ ಸಾರಾಂಶವಿಂತಿತ್ತು. "ಬೇರೆ ಬೇರೆ ಧರ್ಮಗಳ ಅಂತರ್ಗತ ತತ್ವಗಳು ನಿಜ ವಾಗಿಯೂ ಬೇರೆ ಬೇರೆ ಇರುವವೇ ? ನಿಜವಾಗಿಯೂ ಅವು ಪರಸ್ಪರ ವಿರೋಧಿಯಾಗಿರುವವೆಂದು ಹೇಳಬಹುದೇ ? ಬೇರೆ ಬೇರೆ ಧರ್ಮಗಳ ಮಂದಿರಗಳು ಬೇರೆ, ಅವುಗಳ ದೇವರು ಬೇರೆ. ಅವುಗಳ ಭಾಷೆ ಬೇರೆ, ಧರ್ಮಗ್ರಂಥಗಳು ಬೇರೆ. ಆದರೆ ಅವುಗಳ ಅಂತರಾತ್ಮದಲ್ಲಿ ನಿಜವಾಗಿಯೂ ಭಿನ್ನತೆ ಇದೆಯೇ? ನಮ್ಮ ಕ್ರೈಸ್ತ ಧರ್ಮದಲ್ಲಿ ಒಂದು ಮಧ್ಯವರ್ತಿ ಕಲ್ಪನೆ ಹೀಗಿದೆ.– ಸಾವಧನರಾಗಿರಿ ಮತ್ತು ಪ್ರಾರ್ಥಿಸಿರಿ. ಏಕೆಂದರೆ ಸ್ವರ್ಗದ

ರಾಜ್ಯ ಹತ್ತಿರವೇ ಇದೆ. ಈ ಆದೇಶದ ಅರ್ಥವಿಷ್ಟೇ-ನೀವು ನಿಮ್ಮ ಅಂತಃ ಕರಣವನ್ನು ಪವಿತ್ರವಾಗಿರಿಸಿ ಸಿದ್ಧರಾಗಿರಿ".

ಈ ಮಾತು ಆಡುವಾಗ ಆಲ್ಬರ್ಟನ ಕಣ್ಣು ತಾಯಿಯಲ್ಲಿ ಸ್ಥಿರ ವಾಗಿತ್ತು. ಏನ್ನಾಳ ಕಣ್ಣು ನಿದಾನವಾಗಿ ತುಂಬಿ ಬಂದವು. ಏಕಾಗ್ರ ಚಿತ್ತದಿಂದ ಆಕೆ ಅವನ ಎಲ್ಲ ಮಾತು ಕೇಳುತ್ತಿದ್ದಳು.

ಆಲ್ಬರ್ಟ ಮುಂದೆ ಹೀಗೆಂದನು, "ಪ್ರೇಮ, ಶಾಂತಿ. ಭೂತದಯೆ, ಸಮತೆ ಇವೆಲ್ಲ ಶಬ್ದಗಳನ್ನು ನಾವು ಕೇಳುತ್ತೇವೆ, ಆಡುತ್ತೇವೆ. ಆದರೆ ಇವೆಲ್ಲ ಶಬ್ದಗಳ ಅರ್ಥದ ಕಡೆಗೆ ನಾವು ಎಂದಾದರೂ ಲಕ್ಷ್ಯ ಕೊಡುತ್ತೇವೆಯೇ ? ನಾವು ಕ್ರೈಸ್ತ ಜನ ವಿಶ್ವಬಾಂಧವ್ಯದ ಹರಟೆ ಕೊಚ್ಚುತ್ತೇವೆ. ಆದರೆ ಯಾರು ಕ್ರೈಸ್ತರಲ್ಲವೋ ಅವರನ್ನು ನಾವು ದ್ವೇಷಿಸುತ್ತೇವೆ. ವಿಶ್ವವ್ಯಾಪಿ ಧರ್ಮವು ಹೇಗಿದೆ ಹೇಳಲಿ ? ಒಬ್ಬ ಮನುಷ್ಯ ಪೃಥ್ವಿಯನ್ನು ಬಿಟ್ಟು ಸೂರ್ಯನ ಕಡೆಗೆ ಹೊರಟನೆಂದು ತಿಳಿಯಿರಿ. ನಡುವೆ ಹಲವು ಮುಕ್ಕಾಮುಗಳನ್ನು ಮಾಡಿ ಆತ ಸೂರ್ಯನ ಛಾಯಾ ಚಿತ್ರಗಳನ್ನು ತೆಗೆದುಕೊಂಡನು. ಆಗ ಅವನ ಪ್ರತಿಯೊಂದು ಚಿತ್ರವು ಇನ್ನೊಂದರಿಂದ ಬೇರೆ ಕಾಣಬಹುದು. ಆದಾಗ್ಯೂ ಸೂರ್ಯ ಒಬ್ಬನೇ ಎಂಬುದನ್ನು ನಾವು ಮರೆಯಲಾರೆವು. ಅದೇ ಪ್ರಕಾರ, ಈಶ್ವರನ ಅನೇಕ ರೂಪಗಳು ಕಂಡು ಬಂದರೂ ಅವೆಲ್ಲ ಒಂದೇ ಈಶ್ವರನ ರೂಪಗಳಾಗಿರುತ್ತವೆ, ಇದನ್ನೂ ಮರೆಯುವಂತಿಲ್ಲ. ಅಂದಾಗ ಹೀಗೆ ಎಲ್ಲರ ಆ ಈಶ್ವರನೂ ಒಬ್ಬನೇ ಇದ್ದರೆ, ಅವನ ಧರ್ಮವೂ ಒಂದೇ ಆಗಿರ ತಕ್ಕದ್ದು. ಸಂಸ್ಕೃತಿಯೂ ಹಾಗೇ ಆಗಿರತಕ್ಕದ್ದು. ಈ ಮಾತು ನಿನಗೆ ಒಪ್ಪಿಗೆಯೇ ?"

ಕೊನೆಯ ವಾಕ್ಯವನ್ನು ಆಡಿ ಆಲ್ಬರ್ಟ ಭಾರತಿಯ ಕಡೆಗೆ ನೋಡಿ ದನು. ಏಕಾಗ್ರತೆಯಿಂದ ಒಮ್ಮೆಲೆ ಎಚ್ಚರಾದಂತೆ ಅವಳು ಬೆಚ್ಚಿಬಿದ್ದು ಅಂದಳು. "ಸರಿ, ಸರಿ! ನಿಜವಾಗಿಯೂ ಸರಿ."

ಆಗ ಆಲ್ಬರ್ಟ ನಗುತ್ತ ಅಂದ "ಇದೇನು ನಾನು ನನ್ನ ಉಡಿಯಿಂದ ತೆಗೆದು ಹೇಳುತ್ತಿಲ್ಲ. ಅಷ್ಟೇನು ನಾನು ವಿದ್ವಾಂಸನಲ್ಲ. ಚಿಕ್ಕಂದಿನಲ್ಲಿ ಇದೆಲ್ಲ

ನಾನು ಕೇಳಿದ್ದೇನೆ– ನನ್ನ ಅಜ್ಜಯ್ಯನ ಮುಖದಿಂದ. ನಮ್ಮಅಜ್ಜಯ್ಯನವರಾದರೂ ಕೇಳಿದ್ದು ನಿಮ್ಮ ಸ್ವಾಮಿ ವಿವೇಕಾನಂದರ ಮುಖದಿಂದ !"

ಆಲ್ಬರ್ಟನ ಬಾಯಿಯಿಂದ ವಿವೇಕಾನಂದರ ಹೆಸರು ಹೊರಬಿತ್ತು ಮತ್ತು ಏನ್ನಾ ಮನದಲ್ಲಿಯು ದಿಗಿಲು ಬಿದ್ದಳು. ಯಾವ ಉಲ್ಲೇಖ ಆಗ ಬಾರದಿತ್ತೋ ತಪ್ಪದೆ ಅದೇ ಆಗಿತ್ತು. ಅವಳ ಮಾವ ಮತ್ತು ಸ್ವಾಮೀ ವಿವೇಕಾನಂದರ ಸಮಕ್ಷಮ ಭೆಟ್ಟಿಯಾಗಿತ್ತು. ಸ್ವಾಮಿಗಳು ಅವರಿಗೆ ಧ್ಯಾನಸ್ಥ ಶಂಕರನ ಪ್ರತಿಮೆ ಕೊಟ್ಟಿದ್ದರು. ಹಿಂದುಗಳ ಪುನರ್ಜನ್ಮದ ತತ್ವವನ್ನು ತಿಳಿಸಿ ಹೇಳಿದ್ದರು. ಅನಂತರವೇ ಅವರ ಮನೆಯಲ್ಲಿ ಹಿಂದೂ ಧರ್ಮದ ಹುಚ್ಚು ಬೆಳೆಯ ಹತ್ತಿತು. ಅದರಿಂದಲೇ ಮುಂದೆ ತನ್ನ ಅಸ್ಥಿಗಳ ವಿಸರ್ಜನೆ ಗಂಗೆಯಲ್ಲಿ ಆಗಬೇಕೆಂದು ಮಾನಫ್ರೆಡ ಮ್ಯುಲರರಿಗೆ ಕೊನೆಯ ಇಚ್ಛೆಯಾಗಿತ್ತು. ಮತ್ತು ಆಮೇಲೆಗೆ ಅವರ ಅಸ್ಥಿಗಳನ್ನು ಫ್ರಾಂಜ ಮ್ಯುಲರ ಭಾರತಕ್ಕೆ ಒಯ್ದಿದ್ದರು. ಮತ್ತೆ ಈಗ, ಸನ್ಯಾಸ ದೀಕ್ಷೆ ಗ್ರಹಿಸುವ ಇಚ್ಛೆ ಅವರಲ್ಲಿ ಉಂಟಾಗಿತ್ತು. ಇವೆಲ್ಲ ಸಂಗತಿಗಳು ಒಂದು ಚಿತ್ರಪಟದಂತೆ ಅವಳ ಎದುರಿನಿಂದ ಭರಭರನೆ ಸರಿದವು.

ಮರುದಿನ ಮುಂಜಾನೆ ಭಾರತಿ ಅವರಿಂದ ಬೀಳ್ಕೊಳ್ಳಲು ಎದ್ದಳು. ಆಗ ಏನ್ನಾ ಅವಳಿಗೆ ಅಂದಳು. "ನೀನೆಲ್ಲಿಗೆ ಹೋಗುವಿ ?"

ಭಾರತಿ ನಗುತ್ತ ಅಂದಳು. "ಎಲ್ಲೊ ! ದಾರಿ ಒಡೆದತ್ತ ಎಲ್ಲೊ !"

ಇದಕ್ಕೆ ಆಲ್ಬರ್ಟ ಏನೋ ಹೇಳುವವ ಅಷ್ಟರಲ್ಲಿ ಏನ್ನಾ ನಡುವೆಯೇ ಅಂದಳು. "ಎಲ್ಲೂ ಹೋಗಬೇಡ. ಇಲ್ಲಿಯೇ ಇರು. ಇದು ನಿನ್ನದೇ ಮನೆಯೆಂದು ತಿಳಿ."

ಮತ್ತು ಅದು ತನ್ನದೇ ಮನೆಯೆಂದು ತಿಳಿದು ಭಾರತಿ ಆ ಮನೆಯಲ್ಲಿ ಉಳಿಯ ಹತ್ತಿದಳು.

* * *

ಫ್ರಾಂಜ ಮ್ಯುಲರರನ್ನು ಅರುಣಾಚಲಂದಲ್ಲಿ ಭೆಟ್ಟಿಯಾಗಲೆಂದು ಏನ್ನಾ ಭಾರತದ ಕಡೆಗೆ ಹೊರಟಾಗ, ಆ ಮನೆಯ ಎಲ್ಲ ಹೊಣೆ ಭಾರತಿಯ ಮೇಲೆ ಬಂದು ಬಿದ್ದಿತು. ಆಲ್ಬರ್ಟನ ಎಲ್ಲ ಯೋಗಕ್ಷೇಮ ನೋಡಿಕೊಳ್ಳುವ

ಕೆಲಸ ಅವಳ ಮೈಯ ಮೇಲೆ ಬಂದು ಬಿತ್ತು. ಮ್ಯುಲರ ಕುಟುಂಬದ ಮನೆಯನ್ನು ಅವಳೇ ನೋಡಿಕೊಳ್ಳ ಹತ್ತಿದಳು.

ಪರಕೀಯರ ಮನೆಯಲ್ಲಿ ಒಬ್ಬ ಪರಕೀಯ ತರುಣನೊಂದಿಗೆ ವಾಸ ಮಾಡುವದರಲ್ಲಿ ಒಂದು ಬಗೆಯ ಗಂಡಾಂತರವಿದ್ದೇ ಇತ್ತು. ಆದರೆ ಭಾರತಕ್ಕೆ ಹೋಗುವಾಗ ಏರ್ನಾ ಅವಳ ಮೇಲೆ ಹಾಕಿದ ವಿಶ್ವಾಸ ಮೊಂಡವಾಗ ಬಹುದಾದಂಥ ಕೃತ್ಯ ತನ್ನ ಕೈಯಿಂದ ಆಗಬಾರದು ಎಂದು ಅವಳಿಗೆ ಅನಿಸುತ್ತಿತ್ತು. ತನ್ನ ಮನಸ್ಸಿನಲ್ಲಿ ಅವಳು ಅಂಥ ನಿರ್ಧಾರವನ್ನೇ ಮಾಡಿದ್ದಳು. ತನ್ನ ಭಾರತೀಯ ಸಂಸ್ಕೃತಿಯ ಗೌರವವನ್ನು ತಾನು ಪರದೇಶದಲ್ಲಿ ಚೆನ್ನಾಗಿ ಕಾಪಾಡಬೇಕು. ತನ್ನ ಭಾರತೀಯ ಪರಂಪರೆಗೆ ಏನೂ ಅಪಾಯ ತಟ್ಟದಂತೆ ತಾನು ತುಂಬ ಎಚ್ಚರಿಕೆ ವಹಿಸಬೇಕು. ಈ ಸಂಗತಿಯ ಅರಿವನ್ನು ಇಟ್ಟುಕೊಂಡೇ ಆಕೆ ನಡೆಯ ಹತ್ತಿದ್ದಳು.

ಜರ್ಮನಿಯಲ್ಲಿಯ ಕುಟುಂಬ ಪದ್ಧತಿಯ ಹಾಗೂ ರೀತಿ ನಡುವಳಿಗಳ ವ್ಯಾಸಂಗಕ್ಕಾಗಿ ಆಕೆ ಹೈಡೆಲಬರ್ಗಕ್ಕೆ ಬಂದಿದ್ದಳು. ಈ ಬಗೆಯ ವ್ಯಾಸಂಗಕ್ಕಾಗಿ ಅತ್ತಿತ್ತ ತುಂಬ ಅಡ್ಡಾಡ ಬೇಕಾಗುತ್ತದೆ. ಬೇರೆ ಬೇರೆ ಸ್ಥಳಗಳಿಗೆ ಹೋಗಬೇಕಾಗುತ್ತದೆ. ಆ ಸಮಾಜದಲ್ಲಿ ಸೇರಿ ಬೆರೆಯ ಬೇಕಾಗುತ್ತದೆ. ಇದೆಲ್ಲ ಮಾಡುತ್ತಿರುವಾಗಲೂ ಅಪಾಯಗಳು ಇದ್ದೇ ಇವೆ. ಎಂಬ ಪೂರ್ತಿ ಅರಿವು ಭಾರತಿಗೆ ಇತ್ತು. ಇವೆಲ್ಲ ಅಪಾಯಗಳನ್ನು ತಾನು ಉಪಾಯವಾಗಿ ತಪ್ಪಿಸಿಕೊಳ್ಳಬೇಕು. ಆ ಕುರಿತು ತುಂಬ ಎಚ್ಚರಿಕೆಯಿಂದ ಇರಬೇಕು ಎಂಬುದನ್ನು ಆಕೆ ಸೆರಗಿಗೆ ಗಂಟು ಹಾಕಿಕೊಂಡಿದ್ದಳು. ಆದರೆ ಇದರ ಜತೆಗೆ ಕೆಲವು ಗಂಡಾಂತರಗಳನ್ನು ತಾನು ಸ್ವೀಕರಿಸಲೇಬೇಕು. ಅವುಗಳನ್ನೂ ಇದುರಿಸಲೇಬೇಕು. ಅದಕ್ಕಾಗಿ ಇಂಥ ಗಂಡಾಂತರಗಳಿಗೆ ಹೆದರಿ ಅವುಗಳಿಂದ ದೂರ ಓಡಿಹೋಗುವದಲ್ಲ. ಅವುಗಳಲ್ಲಿ ಧುಮುಕಿ ಅವುಗಳಿಂದ ಪಾರುಗಾಣಬೇಕು—ಇದೇ ಅವಳ ಧೋರಣೆಯಾಗಿತ್ತು. ಕೆಲವು ಪ್ರಸಂಗಗಳಲ್ಲಿ ತನಗೆ ಮೋಸ ವಾಗಬಹುದು. ಆದರೆ ಅದನ್ನು ತಾನು ಸುಮ್ಮನೆ ಸ್ವೀಕರಿಸಬೇಕು ಎಂದು ಅವಳಿಗೆ ಮನವಾರೆ ಅನಿಸುತ್ತಿತ್ತು.

ಏರ್ನಾ ಭಾರತಕ್ಕೆ ಹೊರಟೆದ್ದು ಹೋದಂದಿನಿಂದ ಭಾರತಿ ಮನೆಯ ಪಾರುಪತ್ಯ ವಹಿಸಿಕೊಂಡಳು. ಹಗಲೆಲ್ಲ ಅವಳು ಹೊರಗೇ ಇರುತ್ತಿದ್ದಳು.

ರಾತ್ರಿಯ ಮುಕ್ಕಾಲಿಗೆ ಮನೆಗೆ ಬರುತ್ತಿದ್ದಳು. ಅವಳಿಗಾಗಿಯೆ ಒಂದು ಕೋಣೆ ಕೊಟ್ಟಿತ್ತು. ರಾತ್ರಿಯ ಹೊತ್ತಿಗೆ ಅವಳಿಗೆ ಕೋಣೆಯಲ್ಲಿ ಒಂಟಿ ಒಂಟಿ ಎನಿಸುವದು ಮಂಚದ ಮೇಲೆ ಬಿದ್ದಲ್ಲಿಂದಲೆ ಮಂಚದ ಹತ್ತಿರದ ಕಿಟಕಿಯಿಂದ ಹೊರಗೆ ನೋಡುತ್ತ ಇರುತ್ತಿದ್ದಳು. ಗುಡ್ಡದ ಮೇಲಿನ ಹಳೆಯ ಕೋಟೆಯ ಕರೆನರೆ ಅವಶೇಷಗಳು ಕನಸಿನಲ್ಲಿ ಕಾಣುವ ಕಟ್ಟಡದಂತೆ ಭಾಸವಾಗುತ್ತಿದ್ದವು. ಒಂದು ಉನ್ನತ ಚರ್ಚಿನ ಆಕಾಶದಲ್ಲಿ ಚಾಚಿ ನಿಂತ ಸಿಲುಬೆಯ ಚಿನ್ಹ ಅವಳಿಗೆ ಮಲಗಿದಲ್ಲಿಂದಲೆ ಕಾಣುತ್ತಿತ್ತು. ಆ ಸಿಲುಬೆಯತ್ತ ನೋಡುತ್ತ ಅವಳು ದಿನವಿಡಿ ನಡೆದ ಘಟನೆಗಳ ಪರ್ಯಾಲೋಚನೆ ಮಾಡುತ್ತಿದ್ದಳು. ಜರ್ಮನ ಕುಟುಂಬಗಳ ಪರಿಶೀಲನೆ ನಡೆದಿತ್ತು.—ಆ ಶಿಲುಬೆಯತ್ತ ನೋಡುವಾಗ ಅವಳಿಗೆ ಮನಸ್ಸಿನಲ್ಲಿ ವಿಚಾರ ಬರುತ್ತಿತ್ತು.—ಮನುಷ್ಯ ಇಲ್ಲಿಂದಲ್ಲಿಗೆ ಒಂದೆ ಸಮ. ದೇಶ ಬೇರೆಯೆಂದು ಅವರಲ್ಲಿ ಏನೂ ಬದಲಾಗುವದಿಲ್ಲ. ಒಬ್ಬನೆ ಪರಮೇಶ್ವರನ ಮಕ್ಕಳು ಇವರೆಲ್ಲ. ಇವರ ಜನ್ಮತಃ ಭಾವನೆಗಳೆಲ್ಲ ಒಂದೇ. ಇವರ ಆಶೆ ಆಕಾಂಕ್ಷೆಗಳೆಲ್ಲ ಒಂದೇ. ಈ ಎಲ್ಲ ಮಂದಿಯೂ ಶ್ರದ್ಧಾಳುಗಳು. ಆದರೆ ಅವರ ಶ್ರದ್ಧೆ ಬೇರೆ ಬೇರೆ ಸ್ಥಾನಗಳಲ್ಲಿ ನೆಲೆಸಿದ್ದರಿಂದ ಈ ಜನ ಬೇರೆ ಬೇರೆಯಾಗಿ ಕಾಣುತ್ತಾರೆ. ಇಷ್ಟೇ.

ಅವಳಿಗೆ ತನ್ನ ಈ ವಿಚಾರಗಳ ಬಗೆಗೆ ಸೋಜಿಗ ವೆನಿಸುವದು. ನಾನು ಎಲ್ಲಿಯವಳು, ಯಾರು? ಮತ್ತು ನನ್ನಲ್ಲಿ ಈ ಜನರ ಬಗೆಗೆ ಇಷ್ಟೊಂದು ಬಂಧುಭಾವ ಏಕೆ ಜಾಗ್ರತವಾಗಬೇಕು? ಎಂದು ಆಗ ಅವಳಿಗೆ ಅನಿಸುತ್ತಲೆ ಇರುತ್ತಿತ್ತು.—ಇದಲ್ಲ ಒಂದೇ ಒಂದು ವಿಶ್ವಕುಟುಂಬ ಈ ಇಡಿಯ ವಿಶ್ವವೇ ನಮ್ಮ ಮನೆ. ನಾವು ಈ ವಿಶ್ವಕುಟುಂಬದ ಒಂದು ಘಟಕ.

ಈ ವಿಚಾರಗಳಲ್ಲಿಯೆ ಅವಳಿಗೆ ಯಾವಾಗ ನಿದ್ದೆ ಹತ್ತುತ್ತಿತ್ತೋ ಅವಳಿಗೆ ಗೊತ್ತಾಗುತ್ತಿದ್ದಿಲ್ಲ.

ಮೊದಲು ಕೆಲವು ದಿನ ಅವಳು ಕೋಣೆಗೆ ಒಳಗಿಂದ ವಿಡ ಹಾಕಿಕೊಂಡು ಮಲಗುತ್ತಿದ್ದಳು. ಆದರೆ ಅದೂ ಅವಳಿಗೆ ಯೋಗ್ಯ ವೆನಿಸಲಿಲ್ಲ. ಈ ರೀತಿ ನಡೆದು ತಾನು ಒಬ್ಬ ಸಭ್ಯ ತರುಣನ ಅಪಮಾನ

ಮಾಡುತ್ತಿದ್ದೇನೆ, ಅವನಲ್ಲಿ ಅವಿಶ್ವಾಸ ತೋರಿಸುತ್ತಿದ್ದೇನೆ, ಎಂದು ಅವಳಿಗೆ ಅನಿಸಿತು. ಆದ್ದರಿಂದ ಆಮೇಲೆ ಅವಳು ಕೋಣೆಗೆ ಬೀಗ ಹಾಕಿಕೊಳ್ಳದೆ ಮಲಗಲು ಸುರು ಮಾಡಿದಳು.

*  *  *  *  *

ಒಂದು ಮಧ್ಯರಾತ್ರಿಗೆ ಅವಳು ಬೆಚ್ಚಿಬಿದ್ದು ಎಚ್ಚರಾದಳು. ಅವಳು ವಿಪರೀತ ಹೆದರಿದ್ದಳು. ಅವಳ ಇಡಿಯ ಮೈಗೆ ಒಮ್ಮೆಲೆ ಬೆವರು ಬಿಟ್ಟಿತ್ತು. ತಾನು ಅನುಭವಿಸಿದ್ದು ಸ್ವಪ್ನವೋ, ಪ್ರತ್ಯಕ್ಷ ಅನುಭವವೋ, ಅದರ ಬೋಧವೆ ಅವಳಿಗೆ ಆಗಲಿಲ್ಲ. ಅವಳಿಗಾದ ಅನುಭವ ಅತಿಶಯ ಮಧುರವಾಗಿತ್ತು. ಯಾವ ಅನುಭವಕ್ಕಾಗಿ ತಾರುಣ್ಯ ಲವಲವಿಸುವದೋ ಆ ಬಗೆಯ ಅನುಭವ ವಾಗಿತ್ತು. ಆ ಅನುಭವದಿಂದ ಅವಳ ಎಲ್ಲ ಅವಯವಗಳೂ ಸುಖಿಸಿದ್ದವು. ಮಳೆಗಾಲದ ಆರಂಭಕ್ಕೆ ಮೊದಲ ಮಳೆ ಆದೊಡನೆ ಭೂಮಿಗೆ ಬರುವ ಸುಖ ಕರವಾದ ತಂಪು ಅವಳು ಅನುಭವಿಸಿದ್ದಳು.

ದಿನದ ಪರಿಶ್ರಮದಿಂದ ಅವಳಿಗೆ ಗಾಢ ನಿದ್ದೆ ಹತ್ತಿತ್ತು. ಯಾರೋ ಅವಳ ಮಂಚದ ಬಳಿಗೆ ಬಂದಿದ್ದರು. ಅವಳು ದಿಗಿಲುಗೊಂಡು ಎಚ್ಚರಾದಳು. ಆದರೆ ಕಣ್ಣು ತೆರೆಯಲಿಲ್ಲ. ಮಂಚದ ಹತ್ತಿರ ಬಂದ ವ್ಯಕ್ತಿ ಮಂಚವೇರಿ ಅವಳಿಗೆ ಆನಿಸಿ ಕೂತುಕೊಂಡಿತು. ಅವಳು ಮಗ್ಗಲಾಗಿ ಮಲಗಿದ್ದಳು. ಅದ್ದ ರಿಂದ ಆ ವ್ಯಕ್ತಿಯ ಭಾರ ಅವಳ ಸ್ತನ ಮಂಡಳದ ಮೇಲೆ ವಿಶೇಷವೆನಿಸಿತು. ಅವಳು ಮಗ್ಗಲು ತಿರುಗಿಸಬೇಕೆನ್ನುವಷ್ಟರಲ್ಲಿ ಆ ವ್ಯಕ್ತಿಯು ತನ್ನ ಎರಡೂ ಕೈಗಳನ್ನು ಅವಳ ಕೊರಳ ಸುತ್ತು ಚಾಚಿತು ಮತ್ತು ಕೆಳಗೆ ಬಾಗಿ ಭರಭರನೆ ಅವಳ ತುಟಿಗಳ ಚುಂಬನ ತೆಗೆದುಕೊಳ್ಳಲು ಆರಂಭಿಸಿತು. ಮನವಾರೆ ಕೂಗಿಬಿಡಬೇಕೆಂದು ಅವಳಿಗೆ ಇಚ್ಛೆಯಾಯಿತು. ಆದರೆ ಅವಳ ಬಾಯಿ ಮುಚ್ಚಿ ಹೋಗಿತ್ತು. ಅವಳಿಗೆ ಕೂಗಲೂ ಆಗುತ್ತಿದ್ದಿಲ್ಲ. ಚುಂಬನಗಳ ಸುರಿಮಳೆ ನಿಲ್ಲಲಿಲ್ಲ. ಅವಳಿಗೆ ಕೂಗಲೂ ಆಗಲಿಲ್ಲ.

ಅವಳಿಗೆ ಪೂರ್ತಿ ಎಚ್ಚರ ಬಂದಾಗ ಯಾರೋ ಓಡಿಹೋದಂತೆ ಅವಳಿಗೆ ಸ್ಪಷ್ಟವಾಗಿ ಅರಿವಾಯಿತು. ತಲೆದಿಂಬಿನತ್ತ ಇದ್ದ ದೀಪದ ಗುಂಡಿ ಯನ್ನು ಅವಳು ಒತ್ತಿದಳು. ಆದರೆ ಅವಳಿಗೆ ಯಾರೂ ಕಾಣಲಿಲ್ಲ. ನೆರೆಯ

ಹಾಲಿನಲ್ಲಿ ಆಲ್ಬರ್ಟ ಶಾಂತವಾಗಿ ನಿದ್ದೆ ಮಾಡುತ್ತಿದ್ದದ್ದು ಕಂಡಿತು. ಅವಳ ಕೋಣೆಯೊಳಗಿನ ಬೆಳಕು ಅವನ ನಿದ್ದೆಯಲ್ಲಿದ್ದ ಶಾಂತ ಮುಖದ ಮೇಲೆ ಬಿದ್ದಿತ್ತು. ಬೆಳಕಿನ ಮೂಲಕ ಅವನ ಮುಚ್ಚಿದ ಕಣ್ಣು ಚಲಿಸಿದವು ಮತ್ತು ಅವನು ಮಗ್ಗಲು ಹೊರಳಿದನು.

ಇದೆಲ್ಲ ಕನಸಾಗಿತ್ತೇ? ಅವಳಿಗೆ ಹಾಗೆ ಅನಿಸಲಿಲ್ಲ. ಗಾಬರಿಯಿಂದ ಅವಳ ಉಸಿರು ಜೋರು ಜೋರಾಗಿ ಬರುತ್ತಿತ್ತು. ಅವಳ ಎದೆ ಬಡಿದು ಕೊಳ್ಳುತ್ತಿತ್ತು. ತನ್ನನ್ನು ಸಾವರಿಸಿಕೊಳ್ಳಲಿಕ್ಕೆ ಅವಳು ತನ್ನ ಕೈಗಳನ್ನು ಎದೆಯ ಮೇಲೆ ಗಟ್ಟಿಯಾಗಿ ಒತ್ತಿ ಹಿಡಿದಿದ್ದಳು. ಈಗಲೂ ಹೆದರಿಕೊಂಡ ಅವಳ ಎದೆ ಡವಡವಗೊಳ್ಳುತ್ತಿತ್ತು. ಅಲ್ಲಿಂದ ಶೂಲಿ ಎದ್ದಂತೆ ಅನಿಸುತ್ತಿತ್ತು. ತನ್ನ ಸ್ತನಗಳ ಮೇಲೆ ಬಿದ್ದ ಭಾರ ಅವಳಿಗೆ ಈಗಲೂ ಅರಿವಾಗುತ್ತಿತ್ತು. ಅವಳು ತುಟಿಗಳ ಮೇಲಿಂದ ನಾಲಿಗೆ ಆಡಿಸಿದಳು. ಆ ತುಟಗಳಿಗೂ ಮತ್ತೆ ಮತ್ತೆ ಆದ ಸ್ಪರ್ಶದ ಅರಿವು ಏನು ಮಾಡಿದರೂ ಹೋಗುವಂತಿದ್ದಿಲ್ಲ.

ಅದು ಸ್ವಪ್ನವೋ ಸತ್ಯವೋ? ಅವಳಿಗೆ ಅದರ ನಿರ್ಣಯವೇ ಆಗಲಿಲ್ಲ. ಅದು ಸ್ವಪ್ನವೆಂದರೆ, ಅದು ತನ್ನ ತುಟಿಗಳಿಗೆ ಮತ್ತು ಉರೋಭಾಗಕ್ಕೆ ಆದ ಸ್ಪರ್ಶದ ಅರಿವು ಏನು ಮಾಡಿದರೂ ಅವಳಿಗೆ ಮನಸ್ಸಿನಿಂದ ಹೊರತಳ್ಳಲು ಆಗುತ್ತಿದ್ದಿಲ್ಲ. ಇನ್ನು ನಡೆದದ್ದು ಸತ್ಯವೇ ಅಂತ ಭಾವಿಸಿದರೆ, ಅದೇ ವೇಳೆಗೆ ಆಲ್ಬರ್ಟ ಆಚೆಯ ನಡುಮನೆಯಲ್ಲಿ ಶಾಂತವಾಗಿ ನಿದ್ದೆ ಹೋದದ್ದು ಕಾಣು ತ್ತಿತ್ತು. ಅವನ ನಿದ್ದೆ ಒಂದು ಸೋಗೇ? ಅವಳಿಗೆ ಹಾಗೂ ಅನಿಸಲಿಲ್ಲ.

ನಡೆದು ಹೋದ ಘಟನೆ ಅವಳಿಗೆ ಮತ್ತೆ ಮತ್ತೆ ನೆನಪಾಗುತ್ತಿತ್ತು. ಆ ಘಟನೆಯ ನೆನಪಿನಿಂದ ಅವಳ ಮೈಮೇಲೆ ರೋಮಾಂಚಗಳು ಅರಳುತ್ತಿದ್ದವು. ಅವಳಿಗೆ ಆನಂದದ ಚಿಲುಮೆಗಳು ಒಡೆದಂತೆ,ಚಿಮ್ಮಿದಂತೆ ಆಗುತ್ತಿದ್ದವು. ಅವಳ ಅಂಗಾಂಗಗಳು ಆನಂದದಲ್ಲಿ ಮಿಂದೆದ್ದು ನಿಮಿರುತ್ತಿದ್ದವು. ಈ ಅನುಭವವೇ ಹೊಸತು. ಆದರೆ ಅದು ತನಗೆ ಬೇಕೆನಿಸುತ್ತಿತ್ತು. ಒಂದು ಕ್ಷಣ ಅವಳಿಗೆ ಹೀಗೂ ಭಾಸವಾಯಿತು. ತಾನು ಬಾಂಕೀಪೂರದ ತನ್ನ ಕೋಣೆಯಲ್ಲಿ ಮಲಗಿ ದ್ದೇನೆ. ಒಂದು ನಿದ್ದೆ ಕಳೆದು ತನಗೆ ಒಮ್ಮೆಲೆ ಎಚ್ಚರವಾಗಿದೆ. ತಾನು ಮಗ್ಗಲು ಹೊರಳಿದ್ದೇನೆ. ಮತ್ತು ಕಿಟಕಿಯಿಂದ ಚಂದ್ರನ ಕಿರಣಗಳು

ಮೋರೆಯ ಮೇಲೆ ಚಿಮುಕಿಸಿದಂತಿವೆ. ರಾತ್ರಿ ರಾಣಿಯ ಮತ್ತು ಕಾಡು ಬಳ್ಳಿಯ ಹೂಗಳ ಸಮ್ಮಿಶ್ರ ಸುಗಂಧ ಬಂದು ತನ್ನ ಮೂಗಿನಲ್ಲಿ ತುಂಬಿ ಕೊಂಡಿವೆ. ತಾನು ಗಾಬರಿಯಾಗಿದ್ದೇನೆ. ತನ್ನ ಭಾವನೆಗಳು ಉತ್ಕಟವಾಗಿವೆ. ತಾನು ಏಕಾಕಿಯೆಂದು ಅನಿಸಹತ್ತಿದೆ. ಯಾರದಾದರೂ ಸಂಗಾತ ತನಗೆ ಬೇಕೆನಿಸುತ್ತಿದೆ. ಯಾರಾದರೂ ತನ್ನನ್ನು ಬಿಗಿದಪ್ಪಿ ಹಿಡಿದುಕೊಳ್ಳಬೇಕೆಂದೂ ಅನಿಸುತ್ತಿದೆ .. ....

ಅವಳು ಒಮ್ಮೆಲೆ ಬೆಚ್ಚಿಬಿದ್ದಳು. ಅವಳ ಅನುಭವವೂ ಅದೇ ಆಗಿತ್ತು. ಅವಳು ಗಾಬರಿಗೊಂಡು ಕಿಟಕಿಯ ಹೊರಗೆ ನೋಡಿದಳು. ಕೋಟೆಯ ಅವ ಶೇಷಗಳು ಕತ್ತಲೆಯಲ್ಲಿ ಕರಗಿದ್ದವು. ಮತ್ತು ಅವಳಿಗೆ ಯಾವಾಗಲೂ ಕಾಣು ತ್ತಿದ್ದ ಚರ್ಚಿನ ಕ್ರಾಸು ಆಕಾಶದ ಅಂತಃಕರಣದಲ್ಲಿ ಹೊಕ್ಕಿದ ಕತ್ತಲೆಯ ಸಲಾಕಿ ನಂತೆ ತೋರುತ್ತಿತ್ತು.

ತಾನು ಅನುಭವಿಸಿದ್ದು ಸ್ವಪ್ನದೃಷ್ಟಿಯದೆಂದು ಗೊತ್ತಾಗುವದು ಅವಳ ಮನಸ್ಸಿಗಂತೂ ಒಪ್ಪಿಗೆ ಇದ್ದಿಲ್ಲ. ಆದರೆ ಅದು ಸತ್ಯಸೃಷ್ಟಿಯದೆಂದಾದರೂ ಅವಳ ಮನಸ್ಸಿಗೆ ಒಪ್ಪಿಗೆ ಆಗುತ್ತಿದ್ದಿಲ್ಲ. ಏಕೆಂದರೆ ಅದರಲ್ಲಿ ವಿಶ್ವಾಸಘಾತ ವಿತ್ತು. ಭಾರತಕ್ಕೆ ಹೋಗುವ ಮುಂಚೆ ಏರ್ನಾ ಅದೆಷ್ಟು ವಿಶ್ವಾಸದಿಂದ ಅವಳ ಮೇಲೆ ಮನೆಯ ಭಾರವನ್ನು ಒಪ್ಪಿಸಿದ್ದಳು. ನಡೆದ ಸಂಗತಿ ಸತ್ಯ ಸೃಷ್ಟಿಯದೇ ಆಗಿದ್ದರೆ, ಆ ವಿಶ್ವಾಸಕ್ಕೆ ಆಕೆ ಪಾತ್ರಳಾಗಿ ಉಳಿಯಲಾರಳು. ಈ ವಿಶ್ವಾಸಕ್ಕೆ ಘಾತ ಮಾಡುವದರಲ್ಲಿ ಅವಳದೇನೂ ತಪ್ಪು ಇದ್ದಿಲ್ಲವೆಂಬುದು ನಿಜ. ಈಗ ನಡೆದದ್ದು ಇನ್ನೊಬ್ಬ ವ್ಯಕ್ತಿಯಿಂದ ಘಟಿಸಿದ್ದು. ಅದರಲ್ಲಿ ಅವಳು ಮುಂದಾಗಿದ್ದಿಲ್ಲ. ಆದರೂ ನಡೆದ ಘಟನೆಯಿಂದ ವಿಶ್ವಾಸಘಾತದ ಆರೋಪ ತಪ್ಪುವಂತೆ ಇದ್ದಿಲ್ಲ. ಒಟ್ಟಾರೆ ಅವಳ ಮನಸ್ಸಿಗೆ ಸುಖವಾಗುವದು ಅವಳಿಗೆ ದಕ್ಕುವಂತೆ ಇದ್ದಿಲ್ಲ.

ನಡೆದ ಸಂಗತಿ ಅವಳು ಏನೂ ಮರೆಯಲಾರಳು. ಆ ಸಂಗತಿಯನ್ನು ಅವಳು ಮನಸ್ಸಿನಲ್ಲಿ ಮತ್ತೆ ಮತ್ತೆ ಮೆಲಕು ಹಾಕಹತ್ತಿದಳು. ತಾನು ರಾತ್ರಿ ಎಷ್ಟು ಗಂಟೆಗೆ ಮಲಗಿದ್ದೆ. ಎಷ್ಟು ಗಂಟೆಗೆ ಈ ಸಂಗತಿ ನಡೆಯಿತು,

ನಸುಕಿಗೆ ಯಾವಾಗ ತನಗೆ ಎಚ್ಚರಾಯಿತು. ಆಲ್ಬರ್ಟನ ನಡತೆಯಲ್ಲಿ ಏನಾದರೂ ವ್ಯತ್ಯಾಸ ಕಂಡು ಬಂದಿತೇ–ಇವೆಲ್ಲ ಅಂಶಗಳನ್ನು ಅವಳು ಬಹಳ ಸಲ ಪರೀಕ್ಷಿಸಿ ನೋಡಿದಳು. ಚದುರಂಗದ ಪಟದ ಮೇಲೆ ಕಾಯಿಗಳನ್ನು ಹಿಂದೆ ಮುಂದೆ ಸರಿಕಾಡಿಸಿ ನೋಡುವಂತೆ ಅವಳು ಇವೆಲ್ಲ ಘಟನೆಗಳನ್ನು ಹಿಂದೆ ಮುಂದೆ ಮಾಡಿ ನೋಡಿದಳು. ಅದನ್ನು ಮತ್ತೊಮ್ಮೆ ನೋಡಿಕೊಂಡಳು, ಪರೀಕ್ಷಿಸಿದಳು. ಆದರೆ ಅವಳ ಕೈಗೆ ಏನು ಮಾಡಿದರೂ ಯಾವ ಇತ್ಯರ್ಥವೂ ಬರಲಿಲ್ಲ.

ಮರುದಿನ ಆಲ್ಬರ್ಟ ಆಫೀಸಿನಿಂದ ಮನೆಗೆ ಬಂದಾಗ ಅವಳು ಅವನಿಗೂ ಮುಂಚೆ ಮನೆಯಲ್ಲಿ ಬಂದು ಕುಳಿತಿದ್ದಳು. ಅವಳು ಅವನ ಕಿವಿಗೆ ನಡೆದ ವೃತ್ತಾಂತವನ್ನೆಲ್ಲ ಹಾಕಿದಳು. ಆಗ ಅವನು ಮನಃಪೂರ್ವಕವಾಗಿ ನಕ್ಕು ಅಂದನು." ಇದೆಲ್ಲವೂ ಸತ್ಯವಾಗಿಯೇ ನಡೆಯಿತೆಂದು ತಿಳಿ, ಆಗ ಅದಕ್ಕೆ ನೀನು ಹೇಳುವದೇನು?

ಭಾರತಿ ಉತ್ತರವಿತ್ತಳು. "ನಾನು ಹೇಳುವದೇನೂ ಇಲ್ಲ. ನನಗೆ ಬೇಕಾದದ್ದು ಇಷ್ಟೇ–ನಾನು ಅನುಭವಿಸಿದ್ದು ಸತ್ಯವೋ ಸ್ವಪ್ನವೋ ?"

ತನ್ನ ಮೋರೆಯ ಮೇಲಿನ ನಗುವನ್ನು ಹಾಗೆಯೇ ಇಟ್ಟು ಆಲ್ಬರ್ಟ ಮುಂದರಿದನು "ಅದು ಸತ್ಯವಿತ್ತೆಂತಲೇ ಭಾವಿಸಿ ನಾವು ಮುಂದರಿಯೋಣ. ಹೇಳು, ಅದಕ್ಕೆ ನಿನ್ನ ಹೇಳಿಕೆಏನು?"

ಅವನ ಮಾತನ್ನು ಕೇಳಿ ಭಾರತಿ ಒಮ್ಮೆಲೆ ಕಿಲಕ್ಕನೆ ನಕ್ಕಳು. ಆಮೇಲೆ ತಾನು ಹಾಗೆ ನಗಬಾರದಿತ್ತು ಎಂದು ಅನಿಸಿ, ಆಕೆ ನಗುವನ್ನು ತಡೆ ಹಿಡಿದು ಅಂದಳು, "ಹಾಗಾದರೆ ನಾನು ವಿಚಾರ ಮಾಡಬೇಕಾಯಿತು."

"ಯಾರ ವಿಚಾರ?"

"ಇಲ್ಲಿ ಇರುವದರ ಬಗೆಗೆ"

"ಅಂದರೆ ಇಲ್ಲಿ ಇರುವದರ ಬಗೆಗೋ ಇಲ್ಲಿಂದ ಹೋಗುವದರ ಬಗೆಗೋ?"

"ಹೌದು. ಹಾಗೆಯೇ"

"ಇದರ ಅರ್ಥವಿಷ್ಟೇ– ನಡೆದ ಸಂಗತಿ ಸತ್ಯವಾಗಿದ್ದರೆ ನೀನು ಈ ಮನೆಯಿಂದ ಹೊರಟು ಹೋಗುವಿ."

ಭಾರತಿ ಇದಕ್ಕೆ ಬರೆ ಹೌದೆಂದು ಗೋಣು ಹಾಕಿದಳು.

ಆಗ ಆಲ್ಬರ್ಟ ಕೇಳಿದ, "ಸರಿ. ಇನ್ನು ಇದೆಲ್ಲವೂ ಸ್ವಪ್ನವೇ ಆಗಿದ್ದರೆ?"

ಮತ್ತೆ ಭಾರತಿಯು ನಕ್ಕಳು. "ಹಾಗಾದರೆ ಅದು ನನಗೆ ಸೇರುವದು."

ಅವಳ ಮಾತು ಕೇಳಿ ಆಲ್ಬರ್ಟ ದೊಡ್ಡದಾಗಿ ನಕ್ಕನು; ಅವನೆಂದನು. "ಅಂದರೆ ಸತ್ಯದಿಂದ ದೂರ ಓಡುವದು ಮತ್ತೆ ಸ್ವಪ್ನಕ್ಕೆ ಅಂಟಿಕೊಳ್ಳುವದು! ಇದೇ ಅಲ್ಲವೇ ಈ ಎಲ್ಲ ಪ್ರಕಾರ? "

ಅವಳೇನೂ ಅನ್ನಲಿಲ್ಲ. ಆಲ್ಬರ್ಟ ಮುಂದರಿದ," ಆದರೆ ಮನುಷ್ಯ ಸ್ವಪ್ನಕ್ಕೆ ಹೆದರಬೇಕು. ಸತ್ಯಕ್ಕೆ ಹೆದರಬಾರದು."

ಆ ಮೇಲೆ ಆಲ್ಬರ್ಟ ಅವಳಿಗೆ ಕೇಳಿದ ''ನಿಮ್ಮ ಭಾರತೀಯ ಸಾಹಿತ್ಯದಲ್ಲಿ ಇಂತಹದೇ ಒಂದು ಸ್ವಪ್ನಕಥೆ ಇದೆ. ನನ್ನ ಅಜ್ಜನವರ ಬಾಯಿಯಿಂದ ಅದನ್ನು ಕೇಳಿದ್ದು ನೆನಪು.''

ಭಾರತಿ ಉತ್ತರವಿತ್ತಳು., ''ಹೌದು ಇಂಥ ಕಥೆ ಇದೆ, ನಿಜ! ಉಷಾ ಸ್ವಪ್ನ ! ಉಷೆಯ ಸ್ವಪ್ನದಲ್ಲಿ ಅವಳ ಭಾವೀ ಪ್ರಿಯಕರ ಅನಿರುದ್ಧ ಯಾವಾಗಲೂ ಬರುತ್ತಿದ್ದ. ಮತ್ತು ಆಗ....''

ಅವಳು ಆ ವಾಕ್ಯವನ್ನು ಪೂರ್ತಿಮಾಡಲಿಲ್ಲ. ಅವಳು ಮಾತಾಡುವಾಗ ಆಲ್ಬರ್ಟ ಯಾವ ಅಭಿಪ್ರಾಯದಿಂದ ನಗುತ್ತಿದ್ದನೊ ಆ ಅಭಿಪ್ರಾಯ ಲಕ್ಷ್ಯಕ್ಕೆ ಬಂದೊಡನೆ ಅವಳು ಗೊಂದಲಗೊಂಡಳು. ಆಗ ಏನಾದರೂ ಮಾತಾಡಬೇಕೆಂದು ಮುಂದರಿದಳು. "ಛೇ ಛೇ! ಹಾಗೆ ಇದ್ದಿಲ್ಲ, ನನ್ನ ಸ್ವಪ್ನ. ನನ್ನ ಸ್ವಪ್ನದಲ್ಲಿ ನಾನು ಕಂಡಿದ್ದು ಅನುಭವಿಸಿದ್ದು ಅದು ಬೇರೆಯೇ. ಉಷಾ–ಅನಿರುದ್ಧರು ಇಂಥ ಚೇಷ್ಟೆಗಳನ್ನು ಎಂದೆಂದಿಗೂ ಮಾಡಿದ್ದಿಲ್ಲ. ಛೇ ಛೇ ಎಂದೆಂದಿಗೂ ಇಲ್ಲ!"

ಆಲ್ಬರ್ಟ ಕೂಡಲೆ ಅಂದನು. "ಈಕೆ ಆಧುನಿಕ ಉಷೆ. ಇವಳ ಕಥೆಯಲ್ಲಿ, ಇವೆಲ್ಲ ಸಂಗತಿ ಬರಲಿಕ್ಕೇ ಬೇಕು."

ಅವನೆಷ್ಟು ಸವಿಯಾಗಿ ಮಾತಾಡುತ್ತಿದ್ದ! ಆಕೆ ಗಾಬರಿ ಪಟ್ಟಳು. ಅವಳಿಗೆ ಅವನ ಮಾತು ಸೇರುತ್ತಿತೆ ? ಸವಿಸವಿ ಅನಿಸುತ್ತಿತೆ ?

ಮತ್ತು ಹಾಗೆ ಅನಿಸುತ್ತಿದ್ದರೂ, ತಾನು ಅನುಭವಿಸಿದ ಆ ಘಟನೆ ಸತ್ಯವೊ ಸ್ವಪ್ನವೊ-ಇದರ ಇತ್ಯರ್ಥ ಮಾಡಲು ಅವಳಿಗೆ ಇನ್ನೂ ಆಗಲಿಲ್ಲ.

ಮುಂದಿನ ಹದಿನೈದು ದಿನಗಳಲ್ಲಿ ಅವಳು ಆ ಘಟನೆಯ ಕುರಿತು ಅವನನ್ನು ಅನೇಕ ಸಲ ಕೇಳಿ ನೋಡಿದಳು. ಅವನು ಆ ಬಗೆಗೆ ಏನಾದರೊಂದು ತಪಾಷೆಯಾದ ಉತ್ತರ ಕೊಡುತ್ತಿದ್ದನು. ಅವನ ಆ ಉತ್ತರ ಅವಳಿಗೆ ಮೆಚ್ಚಿಗೆ ಆಗುತ್ತಿತ್ತು. ಆದರೆ 'ಅದು' ಸತ್ಯವೊ ಸ್ವಪ್ನವೊ ಎಂಬುದು ಮಾತ್ರ ಏನು ಮಾಡಿದರೂ ನಿರ್ಣಯಿಸಲು ಆಗುತ್ತಿದ್ದಿಲ್ಲ.

ಇನ್ನೊಂದು ದಿನ ಆಕೆ ಅವನಿಗೆ ತನ್ನ ಆ ನಿರ್ದಿಷ್ಟ ಪ್ರಶ್ನೆಯನ್ನು ಕೇಳಿದಳು. ಆಗ ಆತನು ಅಂದನು, "ಯೋಗ್ಯವೇಳೆಗೆ ನಿನಗೆ ಎಲ್ಲವನ್ನು ಹೇಳುವೆನು."

* * * *

ಆದರೆ ಆ ಯೋಗ್ಯವೇಳೆ ಬೇಗ ಬರಲೊಲ್ಲದು. ಆ ನಡುವೆ ಏನ್ನಾ ಭಾರತದಿಂದ ಮರಳಿ ಬಂದಳು. ರಮಣ-ಮಹರ್ಷಿಯ ಆಶ್ರಮದಲ್ಲಿ ಹೋಗಿ ತನ್ನ ಪತಿಯನ್ನು ಭೆಟ್ಟಿಯಾಗಿದ್ದಳು. ಫ್ರಾಂಜ ಮ್ಯುಲರ ಪ್ರತ್ಯಕ್ಷವಾಗಿ ಸನ್ಯಾಸ ಇನ್ನೂ ತೆಗೆದು ಕೊಂಡಿದ್ದಿಲ್ಲ. ಆದರೂ ಅವರು ಸನ್ಯಾಸದ ವೇಷವನ್ನು ತೊಟ್ಟುಕೊಳ್ಳಲು ಆರಂಭಿಸಿದ್ದರು. ಹೆಂಡತಿಯ ಸಮ್ಮತಿ ಬಂದೊಡನೆ ತಾನು ರೀತಿಯಂತೆ ದೀಕ್ಷೆ ಪಡೆಯಲಿದ್ದೇನೆ. ಆ ತನಕ ಈ ವೇಷವನ್ನು ತೊಟ್ಟರೆ ಏನು ಅಡ್ಡಿ? ಎಂದು ಅನಿಸಿ ಅವರು ಕಾವಿಯ ಬಟ್ಟೆಗಳನ್ನು ಮೈಗೇರಿಸಿದ್ದರು.

ಏನ್ನಾ ರಮಣ ಮಹರ್ಷಿಗಳ ಆ ಆಶ್ರಮದಲ್ಲಿ ಹೋಗಿ ಮುಟ್ಟಿದಾಗ ಮಧ್ಯಾಹ್ನವಾಗಿತ್ತು. ಫ್ರಾಂಜ ಮ್ಯುಲರರ ಇದುರಿಗೆ ಹೋಗಿ ನಿಂತಾಗಲೂ

ಅವಳು ಅವರನ್ನು ಗುರುತಿಸಲೇ ಇಲ್ಲ. ಅವರ ಮೈಮೇಲಿನ ಆ ಕಾವಿಯ ಬಟ್ಟೆಗಳನ್ನು ಕಂಡೊಡನೆ ಏರ್ನಾಳಿಗೆ ಅವರ ಬಗೆಗೆ ತಿರಸ್ಕಾರ ವೆನಿಸ ಹತ್ತಿತ್ತು. ಅವಳು ಅವರ ಕಡೆಗೆ ತಿರಸ್ಕಾರದಿಂದಲೆ ನೋಡಿದಳು. ಆದರೆ ಮಾತು ಮಾತ್ರ ಆಡಲಿಲ್ಲ. ಮನಸ್ಸಿನಲ್ಲಿಯೆ ಅಂದುಕೊಂಡಳು, "ಇಲ್ಲಿಗೆ ಬಂದು ಮುಟ್ಟಿತೇ ಈ ಅವಾಂತರ! ಒಟ್ಟು ಕೆಲಸ ಗಡಿ ಮೀರಿತೆಂದು ತೋರುತ್ತದೆ! ಈಗ ಮಾತಾಡಿ ಏನು ಪ್ರಯೋಜನ?"

ಆದರೆ ಅವಳು ರಮಣ ಮಹರ್ಷಿಗಳ ಭೆಟ್ಟಿ ಪಡೆದಳು. ಆಗ ಅವರು ಏನೂ ಅನ್ನಲಿಲ್ಲ. ತಮ್ಮ ದೃಷ್ಟಿ ಮೇಲೆ ಮಾಡಿ ಅವರು ಅವಳ ಕಡೆಗೆ ನೋಡಿದರು. ಆಗ ಮಾತ್ರ ಒಂದು ಕ್ಷಣ ಅವಳು ಥರಥರ ನಡುಗಿಬಿಟ್ಟಳು. ಅವರ ಕಣ್ಣೊಳಗಿನ ತೇಜಸ್ಸು ಅವಳಿಗೆ ಸಹನವಾಗಲಿಲ್ಲ. ಆ ತೇಜಸ್ಸಿನಿಂದ ತನ್ನ ಮನಸ್ಸಿನ ಎಲ್ಲ ವಿಕಲ್ಪಗಳು ಇಲ್ಲವಾಗುತ್ತಿವೆಯೆಂಬಂತೆ ಅವಳಿಗೆ ಅನಿಸ ಹತ್ತಿತ್ತು. ಅವಳು ತನ್ನ ಕಣ್ಣು ಕೆಳಗೆ ಹೊರಳಿಸಿದಳು. ಆ ಸಮಯ ರಮಣ ಮಹರ್ಷಿಗಳು ಅವಳ ಕಡೆಗೆ ನಗುತ್ತಿದ್ದಂತೆ ಮತ್ತು ಎರಡು ಕೈಗಳನ್ನೆತ್ತಿ ಅವಳನ್ನು ಹರಸುತ್ತಿದ್ದಂತೆ ಅವಳಿಗೆ ಕಂಡಿತು.

ಅಷ್ಟರಲ್ಲಿ ವಿದ್ಯಾನಂದ ಸ್ವಾಮಿಗಳು ಅಲ್ಲಿಗೆ ಬಂದರು. ರಮಣ ಮಹರ್ಷಿಗಳು ಅವಳ ಕಡೆಗೆ ಬೆರಳುಮಾಡಿ ಅವರಿಗೆ ಏನೋ ಸನ್ನೆ ಮಾಡಿದರು.

ಆಗ ವಿದ್ಯಾನಂದ ಸ್ವಾಮಿಗಳು ಅವಳತ್ತ ನೋಡಿ ನಗುತ್ತ ಅಂದರು. "ಇತ್ತ ಬನ್ನಿ ಅಮ್ಮಾS!"

ಇನ್ನೊಂದು ದೊಡ್ಡ ಹಜಾರಕ್ಕೆ ಅವರು ಅವಳನ್ನು ಒಯ್ದರು. ಅಲ್ಲಿ ವಿದ್ಯಾನಂದ ಸ್ವಾಮಿಯ ಅನೇಕ ಶಿಷ್ಯರು ಧ್ಯಾನ ಹಿಡಿದು ಕುಳಿತಿದ್ದರು. ಅವರ ನಡುವೆಯೇ ಅವಳಿಗೆ ಫ್ರಾಂಜ ಮ್ಯುಲರ ಕಂಡು ಬಂದರು. ಅವರೆಷ್ಟು ಭಿನ್ನವಾಗಿ ಕಾಣುತ್ತಿದ್ದರು. ಅವರು ತೊಟ್ಟ ಬಟ್ಟೆ ಅವಳಿಗೆ ಸೇರಿದ್ದಿಲ್ಲ. ಆದಾಗ್ಯೂ ಅವರ ಮೋರೆಯ ಮೇಲಿನ ತೇಜಸ್ಸನ್ನು ನೋಡಿ ಅವಳಿಗೆ ಹಿತವೆನಿಸಿತು.

ಆ ಹಜಾರದ ಒಂದು ಮೂಲೆಯಲ್ಲಿ ಒಂದು ಮೃಗಾಜಿನ ಹಾಸಿತ್ತು. ಅದರ ಮೇಲೆ ವಿದ್ಯಾನಂದ ಸ್ವಾಮಿ ಕುಳಿತರು. ಅವರ ಎಡ ಬದಿಗೆ ಏರ್ನಾ ಕುಳಿತಳು.

ಇದುರಿಗೆ ಧಾನಸ್ಥರಾಗಿ ಕೂತ ಫ್ರಾಂಜ ಮ್ಯುಲರರ ಕಡೆಗೆ ಕೌತುಕ ದಿಂದ ನೋಡುತ್ತಾ ವಿದ್ಯಾನಂದ ಸ್ವಾಮಿ ಅವಳನ್ನು ಕುರಿತು ಅಂದರು. "ನಿಜವಾಗಿಯೂ ನಿನ್ನ ಭಾಗ್ಯ ಬಹು ದೊಡ್ಡದು. ಅಂತೆಯೇ ನಿನಗೆ ಮ್ಯುಲರ ಸಾಹೇಬರ ಪತ್ನೀ ಪದವು ಪ್ರಾಪ್ತವಾಯಿತು. ಇದು ನಿನ್ನ ಪೂರ್ವ ಜನ್ಮದ ಪುಣ್ಯವಿಶೇಷವೇ ಸರಿ."

ಅವರ ಮಾತಿನಲ್ಲಿಯ ಪೂರ್ವಜನ್ಮದ ಉಲ್ಲೇಖವನ್ನು ಕೇಳಿದೊಡನೆ ಅವಳಿಗೆ ವಿಪರೀತ ಕೋಪ ಬಂತು. ಅವಳು ಏನೋ ಮಾತಾಡುವವಳು. ಅಷ್ಟರಲ್ಲಿ ವಿದ್ಯಾನಂದ ಸ್ವಾಮಿಗಳು ಫ್ರಾಂಜ ಮ್ಯುಲರರತ್ತ ಬೆರಳೆತ್ತಿ ತೋರಿಸಿ ಅಂದರು. "ನಮ್ಮ ಈ ಶಿಷ್ಯನು ಬಹಳ ಪ್ರಗತಿಯನ್ನು ಸಾಧಿಸಿದ್ದಾನೆ. ಈತ ಮೂರು-ಮೂರು ತಾಸು ಪದ್ಮಾಸನ ಹಾಕಿ ಧ್ಯಾನಸ್ಥನಾಗಿ ಕೂಡ್ರುವನು. ಇನ್ನು ಕೆಲವೇ ದಿನಗಳಲ್ಲಿ ಅವನಿಗೆ ಸಮಾಧಿ ಹತ್ತುವತನಕದ ಮಟ್ಟ ಸಾಧಿಸುವದು."

ನಡುವೆಯೆ ಸಿಡುಕಿನಿಂದ ಏರ್ನಾ ಅಂದಳು. "ಆದರೆ ಅವರನ್ನು ತಿರುಗಿ ತಾಯ್ನಾಡಿಗೆ ಕರೆದು ಒಯ್ಯಲಿಕ್ಕೆ ನಾನು ಬಂದಿದ್ದೇನೆ."

ಇದಕ್ಕೆ ವಿದ್ಯಾನಂದ ಸ್ವಾಮಿಗಳೆಂದರು. "ಈಗ ನೀನಾರು ಅವನನ್ನು ಒಯ್ಯುವವಳು ? ಅವನಾದರೂ ಯಾರು ಬರುವವನು ? ಇದೆಲ್ಲ ಈಶ ಸಂಕೇತ—ಈಶ್ವರೀ ಸೂತ್ರ. ಇವೆಲ್ಲ ಸಂಗತಿಗಳು ಅವರವರ ಪ್ರಾರಬ್ಧ ದಂತೆ ಜರಗುವವು. ಅವನ ಪೂರ್ವ ಕರ್ಮಾನುಸಾರ ಯಾವ ತನಕ ಅವನಿಗೆ ಯೋಗವಿತ್ತೋ ಆತನಕ ಈ ಜೀವ ಸಂಸಾರದಲ್ಲಿ ಉಳಿಯಿತು. ಈಗ ಮೋಕ್ಷ ಪ್ರಾಪ್ತಿಗಾಗಿ ಈ ಜೀವ ದಾರಿ ನಡೆಯ ಹತ್ತಿದೆ. ನೀನು ಅವನ ದಾರಿಯಲ್ಲಿ ಅಡ್ಡ ಬಂದು ಪಾಪಕ್ಕೆ ಧನಿ ಯಾಗಬೇಡ."

ಏರ್ನಾಳಿಗೆ ಅನಿಸಿತ್ತು. ಅವರಿಗೆ ಅನ್ನಬೇಕು." ಇದೆಲ್ಲ ಡಂಭದ ಮಾತೇಕೆ ? ಯಾವ ಗತ ಜನ್ಮ ? ಎಲ್ಲಿಯ ಪೂರ್ವ ಕರ್ಮ ? ಯೋಗಾ

ಯೋಗದ ಈ ಮಾತುಗಳಾದರೂ ಏಕೆ ? ಮೋಕ್ಷದ ಈ ಬಡಬಡಿಕೆ ಯಾಕೆ ಬೇಕು ? ನೀವು ಹಿಂದೂ ಜನವೆಲ್ಲ ಭ್ರಮಿಷ್ಟರು, ಮೂರ್ಖರು. ಮೂರ್ಖರ ಸಾಮ್ರಾಜ್ಯದಲ್ಲಿ ನೀವು ವಾಸಿಸುವಿರಿ. ಮತ್ತು ಕೊನೆಗೆ ಕೇವಲ ಕಲ್ಪನೆ ಯಿಂದಲೆ ಮೂರ್ಖರ ನಂದನವನಕ್ಕೇ ಹೊರಟಿರುವಿರಿ. ಎಲ್ಲಾ ಹುಚ್ಚರ ಸಂತೇ, ಮೂರ್ಖರ ಬಡಬಡಿಕೆ, ಮಳ್ಳರ ವ್ಯವಹಾರ !"

ಆದರೆ ಪ್ರಕಟವಾಗಿ ಅವಳು ಏನೂ ಅನ್ನಲಿಲ್ಲ.

ಆಮೇಲೆ ಸಮಯ ನೋಡಿ ಅವಳು ಫ್ರಾಂಜ ಮ್ಯುಲರರನ್ನು ಏಕಾಂತ ದಲ್ಲಿ ಒಮ್ಮೆ ಭೆಟ್ಟಿಯಾದಳು. ಅವರಿಗೆ ಒಳ್ಳೆ ಛೀಮಾರಿ ಹಾಕಿದಳು. ಆದರೆ ಅವಳಿಗೆ ಮನದಟ್ಟಾಯಿತು.–ಇದೀಗ ವ್ಯರ್ಥವಾದ ಪ್ರಕರಣ. ತಾನು ಪತ್ರ ದಲ್ಲಿ ಬರೆದ ಸಂಗತಿಗಳನ್ನೇ ಅವರು ಈಗ ಅವಳಿಗೆ ಮತ್ತೆ ಮತ್ತೆ ಮನ ಗಾಣಿಸಿ ಕೊಡಹತ್ತಿದ್ದರು. ಮತ್ತು ಸನ್ಯಾಸ ದೀಕ್ಷೆಗೆ ಸಮ್ಮತಿಯನ್ನು ಅವಳಿಂದ ಬೇಡುತ್ತಿದ್ದರು. ಮಾತಾಡಿ ಮಾತಾಡಿ ಅವಳು ಸೋತಳು. ಆದರೂ ಅವರು ತನ್ನ ಮಾತು ಬಿಡಲಿಲ್ಲ.

ಕೊನೆಗೆ ಆಕೆ ಕೆರಳಿ ಆಡಿದಳು. "ನೀವು ಮನೆ ಮಾರು ಬಿಟ್ಟಿರಿ–, ತಮ್ಮ ಸಂಸಾರದ ಮೇಲೆ ಬೆಂಕಿ ಇಟ್ಟಿರಿ. ಈಗ ನೀವು ಸನ್ಯಾಸ ತೆಗೆದು ಕೊಂಡರೇನು? ಒಮ್ಮೆಲೆ ಶಾಶ್ವತ ಮುಕ್ತರಾದರೇನು ? ನನಗೆ ಎಲ್ಲಾ ಒಂದೇ. ಬೇಕಾದ್ದು ಮಾಡಿರಿ. ವಿಚಾರವನ್ನೇ ಬಿಟ್ಟ ಮನುಷ್ಯನೊಂದಿಗೆ ಮಾತಾಡಿ ಏನು ಉಪಯೋಗ ? ನೀರು ಬಿದ್ದು ಬಿದ್ದು ಕಠಿಣ ಕಲ್ಲು ಕೂಡ ಒಡೆಯುತ್ತದೆ, ಆದರೆ ನಿಮ್ಮ ಅಂತಃಕರಣವೋ ! ಅದಕ್ಕೆ ಎಂದೂ ತೇವು ಬರಬಹುದೆಂದು ನನಗೆ ತೋರುವದೇ ಇಲ್ಲ. ನಾನು ತಿಳಿಯಬೇಕಾದ್ದು ತಿಳಿದುಕೊಂಡು ಬಿಟ್ಟಿದ್ದೇನೆ. ಈ ವೇಳೆ ಬರುವದೆಂದು ನಾನು ಎಂದೋ ತಿಳಿದಿದ್ದೆ."

ಈ ರೀತಿ ಅವಳು ಬಹಳ ಹೊತ್ತು ಮಾತಾಡುತ್ತ ಉಳಿದಳು. ಒಮ್ಮೆ ಸಂತಾಪದಿಂದ, ಇನ್ನೊಮ್ಮೆ ಸವಿಮಾತಿನಿಂದ ಅವರಿಗೆ ಮನಗಾಣಿಸುವ–, ಮನವೊಲಿಸುವ ಹೇತುವಿನಿಂದ ! ಏನ್ನಾಳ ಮಾತಿಗೆ ಫ್ರಾಂಜ ಮ್ಯುಲರ ಏನೇನೂ ಬಗ್ಗಲಿಲ್ಲ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅವರ ಕಾಲು ಭದ್ರವಾಗಿ

ಊರಿತ್ತು. ಐಹಿಕ ಪಾಶಗಳು ಹರಿದಿದ್ದವು. ಆ ದಾರಿಯಿಂದ ಇನ್ನು ಅವರು ಎಂದೆಂದಿಗೂ ಹೊರಳುವವರಿದ್ದಿಲ್ಲ.

ಅವರ ಕೊನೆಯ ನಿರೋಪ ತೆಗೆದುಕೊಂಡು ಆಕೆ ಸ್ವದೇಶಕ್ಕೆ ಮರಳಿದಳು. ಆದರೂ ಅವಳ ಮನಸ್ಸಿನ ಸಂತಾಪ ಸ್ವಲ್ಪವೂ ಕಡಿಮೆ ಆಗಿದ್ದಿಲ್ಲ. ಮರಳಿ ಬಂದ ಮೇಲೆ ಅವಳು ಒಂದೇ ಕೆಲಸ ಮಾಡಿದಳು. ತನ್ನ ಮನೆಯಲ್ಲಿ ಭಾರತೀಯ ಸಂಸ್ಕೃತಿಯ ಯಾವ ಯಾವ ಚಿಹ್ನ-ಕುರುಹುಗಳಿದ್ದವೋ ಅವೆಲ್ಲವನ್ನು ಮನೆಯಿಂದ ಹೊರ ತಳ್ಳಿದಳು. ತಮ್ಮ ಮನೆಯ ಮೇಲೆ ಭಾರತೀಯ ಸಂಸ್ಕೃತಿಯ ಮೋಹವನ್ನು ಬೀರಿದ ಎಲ್ಲ ಹೆಜ್ಜೆ ಪಾಡುಗಳನ್ನು ಆಕೆ ಅಳಿಸಿ ಹಾಕಿ ಬಿಟ್ಟಳು. ಅವರ ಮನೆಯಲ್ಲಿ ಭಾರತೀಯ ಸಂಸ್ಕೃತಿಯ ವಸ್ತುಗಳ ಬಲು ದೊಡ್ಡ ಸಂಗ್ರಹವೇ ಆಗಿತ್ತು. ಅದನ್ನು ಆಕೆ ಕಣ್ಮರೆ ಮಾಡಿದಳು. ಮ್ಯುಲರ ಕುಟುಂಬವು ಈ ವರೆಗೆ ಒಟ್ಟುಗೂಡಿಸಿಟ್ಟ, ಪ್ರಾಣದಂತೆ ಜಪ್ಪಿಸಿಕೊಂಡು ಬಂದ ಸಂಸ್ಕೃತ ಗ್ರಂಥಗಳ ಸಂಗ್ರಹವನ್ನು ಅವಳು ಮನಸ್ವಿಯಾಗಿ ರಸ್ತೆಯಲ್ಲಿ ಒಗೆದು ಬಿಟ್ಟಳು. ಭಗವದ್ಗೀತೆಯನ್ನು ಹರಿದೊಗೆದಳು. ವಿವೇಕಾನಂದರ, ಅವಳ ಮಾವನವರಿಗಿತ್ತ ಧ್ಯಾನಸ್ಥ ಶಂಕರನ ಮೂರ್ತಿಯನ್ನೂ ಮನೆಯೊಳಗಿದ್ದ ಬಾಲ ಮುಕುಂದನ ಮೂರ್ತಿಯನ್ನೂ–ಆ ಎಲ್ಲ ಸ್ಮೃತಿಗಳನ್ನು ಆಕೆ ನಷ್ಟಗೊಳಿಸಿದಳು. ಅವಳಿಗನಿಸಿತು, ತನ್ನ ಸಂಸಾರವನ್ನು ತನ್ನ ಕುಟುಂಬವನ್ನು ವಿಧ್ವಂಸಗೊಳಿಸಿದ ಭಾರತೀಯ ಸಂಸ್ಕೃತಿಯನ್ನೇ ತಾನು ಮನೆಯ ಹೊರಗೆ ಒಗೆಯುತ್ತಿದ್ದೇನೆ. ಮನೆಯ ಮೇಲಿನ ಸಂಕಟವನ್ನು ದೂರ ಮಾಡುತ್ತಿದ್ದೇನೆ ಎಂದು.

ಇದೆಲ್ಲ ವ್ಯವಹಾರವನ್ನು ಭಾರತಿಯು ಸುಮ್ಮನೆ ನೋಡುತ್ತಿದ್ದಳು. ಅವಳಿಗೆ ಈ ವ್ಯವಹಾರ ಒಪ್ಪಿಗೆ ಇದ್ದಿಲ್ಲ. ಏರ್ನಾಳ ಭಾವನೆ ಅವಳಿಗೆ ಅರ್ಥವಾಗುತ್ತಿತ್ತು. ಅವಳ ಉದ್ವೇಗ ತಿಳಿಯುತ್ತಿತ್ತು. ಎಲ್ಲ ಸಂಗತಿಗಳೂ ಶಿಖರಕ್ಕೆ ನಿಕಗಕ್ಕೆ ಮುಟ್ಟಿದ ಮೇಲೆ ಮನುಷ್ಯನಿಗೆ ತನ್ನ ಮನಸ್ಸಿನ ಮೇಲಿನ ಅಂಕೆ ಹೇಗೆ ಕಿತ್ತು ಹೋಗುತ್ತದೆ ಮತ್ತು ಆ ಭರದಲ್ಲಿ ಮನುಷ್ಯನ ಕೈಯಿಂದ ಎಂಥ ಕೃತ್ಯಗಳು ಆಗುತ್ತವೆ– ಎಂಬುದು ಭಾರತಿ ಅರಿತಿದ್ದಳು. ಆದರೆ ಅವಳ ಕಡೆಗೆ ನೋಡಿ ಏರ್ನಾ ಅಂದಳು. "ಈ ಊರನ್ನೇ ನಾನು ಬಿಡಬೇಕೆಂದೆನಿಸುತ್ತದೆ.

ಏಕೆಂದರೆ ಈ ಊರಲ್ಲಿ ನನಗೆ ಏನೂ ಒಳಿತಾಗಲಿಲ್ಲ." ಆಗ ಮಾತ್ರ ಅವಳ ಆ ಮಾತಿನ ತರ್ಕಶೂನ್ಯತೆ ಭಾರತಿಗೆ ತೀವ್ರವಾಗಿ ಅನಿಸಿತು. ಏರ್ನಾಳ ಈ ಮಾತಿಗೆ ಆಕೆ ಕೇಳಿದಳು. "ಹೀಗೇಕೆ ಅನ್ನುವಿರಿ ?"

ಏರ್ನಾ ಒಮ್ಮೆಲೆ ಕಾವೇರಿ ಜೋರು ಜೋರು ಅಂದಳು. "ಹೇಗೆ ಅನ್ನುವಿರಿ-ಎಂದರೆ ? ಈ ನಮ್ಮ ಊರು ವಿದ್ಯೆಯ ತವರುಮನೆ. ಮತ್ತು ನಮ್ಮ ಈ ಕೇರಿಯೆಂದರೆ ಭಾರತೀಯ ಸಂಸ್ಕೃತಿಯ ಅಡ್ಡೆ. ಸದಾಸರ್ವಕಾಲವೂ ನಿಮಗೆ ಇಲ್ಲಿ ಆಧ್ಯಾತ್ಮಿಕ ಭಾಷಣಗಳೇ ಕೇಳಲು ಸಿಗುವವು. ವೇದಾಂತ ಚರ್ಚೆ ಕಿವಿಗೆ ಬೀಳುವದು. ಸಂಸ್ಕೃತಿ ಸಮ್ಮೇಲನಗಳು ಜರುಗಿದ್ದು ನಿಮ್ಮ ಕಣ್ಣಿಗೆ ಬೀಳುವವು. ನೀವು ಈ ಊರಿನ ಓಣಿ ಕೇರಿ ಎಲ್ಲ ಅಲೆದಾಡಿರಿ. ದಪ್ಪ ಹರಳಿನ ಕನ್ನಡಕವೇರಿಸಿ ಚಿಕ್ಕ ದೊಡ್ಡ ಗಡ್ಡ ಬೆಳೆಯಿಸಿಕೊಂಡು ಅನೇಕ ಪಂಡಿತರೂ ಪ್ರಾಧ್ಯಾಪಕರೂ ಒಡನಾಡುವದು ಇಲ್ಲಿ ಕಾಣಬಹುದು. ಎಲ್ಲ ಕಡೆಗೂ ಮುಕ್ತ ಆಧ್ಯಾತ್ಮಿಕ ವಿದ್ಯೆ. ವೇದಾಂತ ತತ್ವಚರ್ಚೆ ಇವುಗಳ ಸುಭಿಕ್ಷೆಯೇ ಕಣ್ಣು ತುಂಬುವದು."

ಏರ್ನಾ ತಡೆದಳು. ಭಾರತಿ ಸುಮ್ಮನೆಯೇ ಇದ್ದಳು.

ಏರ್ನಾ ಮುಂದರಿದಳು. "ನನ್ನ ಮಾವ ಮಾನಫ್ರೆಡ್ ಮತ್ತು ನನ್ನ ಪತಿ ಫ್ರಾಂಜ ಇವರೂ ಇದೇ ಮತಿಯುವರು. ನನ್ನ ಮನೆಯೂ ಭಾರತಿಯ ಆಧ್ಯಾತ್ಮದ ಒಂದು ಅಡ್ಡೆಯೇ ಆಗಿತ್ತು. ಈಗ ನನಗೆ ಓಕರಿಕೆ ಬಂದಿದೆ. ಹೇಸಿಗೆ ಹುಟ್ಟಿದೆ,ಈ ಎಲ್ಲ ಸಂಗತಿಗಳಿಂದ! ನನ್ನ ಈ ಒಬ್ಬನೆ ಮಗ-ಈತನೂ ಅದೇ ದಾರಿ ಹಿಡಿದಿದ್ದ. ಆದರೆ ನಾನು ಅವನನ್ನು ತಡೆದೆ. ನನ್ನ ಸ್ವಂತದ್ದೆಲ್ಲ ಘಾತವಾಯಿತು. ಆದರೆ ನಾನು ಮಾತ್ರ ಅವನ ಘಾತವನ್ನು ತಪ್ಪಿಸಿದೆನು."

ಸ್ವಲ್ಪ ಹೊತ್ತು ತಡೆದು ಅವಳು ಅಂದಳು. "ನಿನ್ನ ದೇಶದ ಅಭಿಮಾನ ನಿನಗೆ ಅನಿಸುವದು ತೀರ ಸ್ವಾಭಾವಿಕವೇ ಸರಿ. ಆದರೆ ನೀನೇ ಹೇಳು. ನನ್ನ ಸಂಸಾರದಲ್ಲಿ ನನಗೆ ಯಾವ ಸುಖ ಸಿಕ್ಕಿದೆ ? ನನಗೆ ನನ್ನ ಸಂಸಾರದಲ್ಲಿ ಏನು ಕೊರತೆ ಇತ್ತು ? ಬಾಗಿಲಲ್ಲಿ ಈ ನೇಕರ ನದಿ ಹರಿಯುತ್ತದೆ. ಎಲ್ಲಿಯೂ ನೋಡು ಚರ್ಚಿನ ಕ್ರಾಸು ಕಾಣುತ್ತದೆ. ಗುಡ್ಡದ ಮೇಲೆ ಹಳೆಯ ಕೋಟೆ

ಇದೆ. ಯಾವ ಪರಂಪರೆ ಕಡಿಮೆ ನಮ್ಮ ದೇಶಕ್ಕೆ? ಈ ನೇಕರ ನದಿಗೆ ಬೆನ್ನು ತಿರುವಿ ನನ್ನ ಈ ಮಂದಿ ಗಂಗೆಯನ್ನು ಇದಿರುಗಾಣಲು ಹೋಗುವ ಕಾರಣ ವೇನಿತ್ತು? ಆದರೆ ಬೇಕಾದುದನ್ನು ಬಿಟ್ಟು ಬೇಡಾದುದರ ಹವ್ಯಾಸ ಹಿಡಿದರು ಈ ಜನರು. ನನ್ನ ಮನಸ್ಸಿನ ಅವಸ್ಥೆ ಏನಾಗಿರಬೇಕು–ನೀನೇ ಊಹಿಸಿ ನೋಡು. ಇದೇ ನಿಮ್ಮ ಭಾರತೀಯ ಸಂಸ್ಕೃತಿಯು ನನ್ನ ಸುಖದ ಮೇಲೆ ಕೆಂಡವಿಟ್ಟಿತವ್ವಾ! ನನ್ನ ಸುಖವನ್ನೆಲ್ಲ ಪೂರ್ತಿ ಸುಟ್ಟು ಹಾಕಿತು. ಇದ್ದದ್ದೇ ಇಲ್ಲವೆಂಬಂತೆ ಮಾಡಿಬಿಟ್ಟಿತು. ಮನೆಯನ್ನು ಕಿತ್ತು ಹಾಕಿತು!"

ಭಾರತಿಗೆ ಬಹಳ ಮಾತಾಡಬೇಕೆಂದು ಅನಿಸುತ್ತಿತ್ತು. ಆದರೆ ಅವಳು ಮಾತಾಡಲಿಲ್ಲ. ಏರ್ನಾಳ ಸುಖ ಸುಟ್ಟು ಬೂದಿ ಆಯಿತು. ಅದಕ್ಕೆ ಭಾರತೀಯ ಸಂಸ್ಕೃತಿ ಅಥವಾ ಹಿಂದೂ ಧರ್ಮ ಹೇಗೆ ಕಾರಣ? ಈ ಪ್ರಶ್ನೆ ಅವಳ ಮನಸ್ಸಿನಲ್ಲಿ ಎದ್ದು ನಿಂತಿತು. ಯಾವ ಧರ್ಮ ವ್ಯಕ್ತಿಯ ಸುಖಕ್ಕೆ ಅಡ್ಡ ಬರುತ್ತದೆ? ಹಾಗಾದರೆ ಅದೇತರ ಧರ್ಮ? ಯಾವ ಸಂಸ್ಕೃತಿ ಯಾರ ಸುಖವನ್ನು ಸುಟ್ಟು ಹಾಕಬಲ್ಲದು? ಹಾಗಾದರೆ ಅದೆಂಥ ಸಂಸ್ಕೃತಿ? ಮಾನವೀ ಸುಖದ ಮಾರ್ಗದರ್ಶನ ತಪ್ಪದೆ ನಡೆಯಬೇಕೆಂದೇ ಯಾವದೇ ಧರ್ಮದ ಅಥವಾ ಸಂಸ್ಕೃತಿಯ ಜನ್ಮವಷ್ಟೆ? ತಪ್ಪಿದರೆ ಮಂದಿ ತಪ್ಪಬಹುದು. ಧರ್ಮ ಸಂಸ್ಕೃತಿ ತಪ್ಪಲಾರದು.

ಆದರೆ ಇವೆಲ್ಲ ವಿಚಾರಗಳನ್ನು ಭಾರತೀಯು ಮನಸ್ಸಿನಲ್ಲಿಯೇ ಇಟ್ಟು ಕೊಂಡಳು. ಶಬ್ದ ರೂಪದಲ್ಲಿ ತುಟಿಗಳ ಹೊಸ್ತಿಲು ದಾಟಿ ಹೊರಗೆ ಬರಲು ಆಕೆ ಬಿಡಲಿಲ್ಲ.

* * * *

ಸಂಜೆಗೆ ಆಲ್ಬರ್ಟ ಮನೆಗೆ ಬಂದಾಗ ಏರ್ನಾ ಅವನ ಮುಂದೆ ಮತ್ತೆ ಎಲ್ಲ ರಗಳೆ ತೋಡಿಕೊಂಡಳು. ಅರುಣಾಚಲದಿಂದ ಎಲ್ಲ ವರ್ತಮಾನವನ್ನು ಕಥಿಸಿದಳು. ಮತ್ತು ಅಂದಳು "ನಮ್ಮ ಮನೆಯಲ್ಲಿ ನಿಮ್ಮ ಈ ಮರುಳಾಟ ನಡೆದಿದ್ದವು, ನಾನು ಕಠೋರವಾಗಿ ಮಾತಾಡುತ್ತಿದ್ದೆ. ಆಗ ನಿಮಗೆ ಅನಿಸೋದು, ಈ ಹೆಂಗಸು ಮಹಾ ಹುಚ್ಚಿ. ಅವಳಿಗೆ ಮರುಳು. ಆದರೆ ಭಾರತೀಯ ಸಂಸ್ಕೃತಿಯ ಹುಚ್ಚು ನಿಮಗೆ ಬಡಿದಿತ್ತು. ಈ ಬಗೆಗೆ ನನಗೆ

ಮನದಟ್ಟಾಗಿತ್ತು. ಈ ನಿಮ್ಮ ಹುಚ್ಚು, ಕೊನೆಗೆ ಘಾತಕವಾಗಲಿದೆ-ಎಂದು ನಾನು ಕಾಲಕಾಲಕ್ಕೆ ನಿಮಗೆ ಎಚ್ಚರಿಕೆ ಕೊಡುತ್ತಿದ್ದೆ. ನೀವೆಲ್ಲರೂ ಹುಚ್ಚರೇ. ಆದರೆ ನನ್ನದು ಮಾತ್ರ ಘಾತವಾಯಿತು. ನನ್ನ ಸಂಸಾರಕ್ಕೆ ಬೆಂಕಿ ಬಿತ್ತು. ನಾನು ಮಂದಿಯೊಳಗಿಂದಲೆ ಹೆಕ್ಕಿ ಹೊರಗೊಗೆದಂತೆ ಅದೇನಲೋss !"

ಏರ್ನಾ ಮಾತಾಡುತ್ತಿದ್ದಳು, ಆಲ್ಬರ್ಟ ಕೇಳುತ್ತಿದ್ದ. ಮತ್ತು ಭಾರತಿಯ ಕಡೆಗೆ ನೋಡುತಿದ್ದ. ಅವಳ ಮೋರೆಯ ಮೇಲೆಯೇ ಅವಳ ಧರ್ಮದ, ಅವಳ ಸಂಸ್ಕೃತಿಯ ನಿಂದೆ ಅವಹೇಳನೆ ನಡೆದಿತ್ತು. ಆ ನಿಂದೆ ಅವಹೇಳನೆಯನ್ನು ಆಕೆ ತೆಪ್ಪಗೆ ಕೇಳಬೇಕಾಗಿತ್ತು. ಅವರ ಮನೆಯಲ್ಲಿ ಆಕೆ ಅತಿಥಿಯಾಗಿ ಬಂದವಳು. ಅವಳಿಗೆ ಈ ನಿಂದೆ ಕೇಳಬೇಕಾಗಿ ಬಂದದ್ದು ಅವಳಿಗೆ ಪ್ರತ್ಯಕ್ಷ ಅಪಮಾನವಾಗಿತ್ತು. ಈ ಅಪಮಾನಕ್ಕೆ ಅವನ ತಾಯಿ ಕಾರಣಳಾಗಿದ್ದಳು. ಮತ್ತು ಆತ ತಾಯಿಗೆ ಏನೂ ಹೇಳಲಾರ.

ಒಮ್ಮೆ ಆತ ಭಾರತಿಗೆ ಅಂದ. "ಆ ದಿನ ನನಗೆ ಪೂರಾ ನಿರುಪಾಯ ವಾಯಿತು. ನೋಡು ನನ್ನ ತಾಯಿ ನಿನ್ನ ಧರ್ಮದ ದೋಷ-ದೂಷಣೆಯದೇ ಲೆಕ್ಕ ಹಚ್ಚಿದಳು. ನಿನಗೆ ಅಪಮಾನ ಮಾಡಿದಳು. ನಾನು ಅವಳಿಗೆ ಏನೂ ಹೇಳಲಾರದೆ ಹೋದೆ. ಏಕೆಂದರೆ ಅವಳ ಅಂತಃಕರಣದಲ್ಲಿಯ ದುಃಖ ಬಹು ದೊಡ್ಡದು. ಅವಳ ಅಂತರಂಗ ಸುಟ್ಟು ಹೋದಂತಿತ್ತು. ಆದ್ದರಿಂದ ಅದರ ವೇದನೆ ಅವಳ ಬಾಯಿಯಿಂದ ಹೊರ ಬೀಳುತ್ತಿತ್ತು. ಅವಳ ದುಃಖ ನಿಜವಿತ್ತು. ಆದರೆ ಆ ದುಃಖದ ಕಾರಣವು ಮಾತ್ರ ಹುಸಿಯಾಗಿತ್ತು ಅವಳ ಆ ದುಃಖಕ್ಕೆ ಹಿಂದೂ ಧರ್ಮ ಅಥವಾ ಸಂಸ್ಕೃತಿ ಕಾರಣವಾಗಿದೆ. ಎಂಬ ಅವಳ ಕಲ್ಪನೆ ಯಾರಿಗೆ ಒಪ್ಪಿಗೆ ಆದೀತು? ಮತ್ತು ನಿನ್ನಂಥ ಅತಿಥಿಯ ಇದಿರು ಅವಳು ಆ ರೀತಿ ತನ್ನ ದುಃಖವನ್ನು ತೆರೆದಿಡಬೇಕು, ಇದೂ ಶಿಷ್ಟಾಚಾರಕ್ಕೆ ಒಪ್ಪಿದ ಸಂಗತಿ ಅಲ್ಲ. ನನ್ನ ತಾಯಿ ನಡೆದ ಈ ರೀತಿಯ ಬಗೆಗೆ ನಾನು ನಿನ್ನ ಕ್ಷಮೆ ಬೇಡುತ್ತೇನೆ."

ಇದಕ್ಕೆ ಭಾರತಿಯು ಅಂದಳು. "ನೀನು ನಿನ್ನ ತಾಯಿಯ ಪರವಾಗಿ ಕ್ಷಮೆ ಬೇಡಬೇಕಾದಂಥ ಯಾವ ಸಂಗತಿಯೂ ವಾಸ್ತವಿಕವಾಗಿ ನಡೆದಿಲ್ಲ.

ನಿನ್ನ ತಾಯಿಗೆ ಬಂದ ಅನುಭವ ಅವಳ ಬಾಯಿಯಿಂದ ಹೊರಬಿತ್ತು. ಇಷ್ಟೇ ! ಅದಕ್ಕೆ ಕ್ಷಮೆ ಬೇಡುವ ಕಾರಣವೇನು ?

* * * *

ಕಾಲವು ಮುಂದೆ ಮುಂದೆ ಸರಿಯುತ್ತಿತ್ತು. ವರ್ತಮಾನವು ಭೂತದಲ್ಲಿ ಸಮಾವೇಶಗೊಳ್ಳುತ್ತಿತ್ತು. ಮತ್ತು ಭವಿಷ್ಯವು ವರ್ತಮಾನ ರೂಪ ತಾಳಿ ಮುಂದೆ ಬರುತ್ತಿತ್ತು. ವರ್ತಮಾನದಲ್ಲಿ ನಡೆದ ಘಟನೆಗಳು ಭೂತದಲ್ಲಿ ಸೇರುತ್ತಿದ್ದವು. ಭವಿಷ್ಯದ ಹೊಟ್ಟೆಯೊಳಗಿದ್ದ ಘಟನೆಗಳು ವರ್ತಮಾನದಲ್ಲಿ ಒದಗಿ ಬರುತ್ತಿದ್ದವು. ಕಾಲವು ಎಲ್ಲ ಮಾನವೀ ದುಃಖಗಳಿಗೆ ಧನ್ವಂತರಿ ಯೆಂಬುದೇ ಸತ್ಯ ! ಇಂದು ಯಾವ ಘಟನೆಗಳಿಂದ ಅಂತರಂಗಕ್ಕೆ ದುಃಖದ ಬರೆ ಎಳೆದಂತೆ ಇತ್ತೋ, ಆ ಘಟನೆಗಳು ಭೂತಕಾಲಕ್ಕೆ ಒಳಪಟ್ಟೊಡನೆ ಆ ಬರೆಯು ಮಸು ಮಸುಕಾಗತೊಡಗಿತ್ತು. ಇಂದಿನ ದುಃಖಗಳು ನಿನ್ನೆಯ ವಾಗುತ್ತಿದ್ದವು. ಮತ್ತು ಅದರೊಂದಿಗೇ ಆ ದುಃಖದ ವೇದನೆಗಳು ಆ ಕಾಲದಲ್ಲೇ ಅಗುತ್ತಿದ್ದವು. ಹೊಸ ಸುಖ ದುಃಖಗಳು ಇದಿರಾಗುತ್ತಿದ್ದವು. ಮತ್ತು ಆ ಸುಖ ದು:ಖಾನುರೂಪವಾಗಿ ಮಾನವೀ ಭಾವನೆಗಳು ಓಲಾಡುತ್ತಿದ್ದವು. ಮಾನವೀ ಆಯುಷ್ಯದೊಳಗಿನ ಸುಖ ದುಃಖಗಳ ಈ ಚಕ್ರವು ಅವ್ಯಾಹತವಾಗಿ ಸುತ್ತುತ್ತಿತ್ತು.

ಆ ಸಮಯಕ್ಕೆ ಇಡಿಯ ಪ್ರಪಂಚದಲ್ಲಿಯೆ ಎಂಥ ಬುಡಮೇಲು ಆಗಿ ಹೋಗಿತ್ತು ! ಎರಡನೆಯ ಮಹಾಯುದ್ಧವು ಮುಗಿದಿತ್ತು. ಆ ಮಹಾ ಯುದ್ಧದಲ್ಲಿ ಮನುಷ್ಯತ್ವವು ಸುಟ್ಟು ಬೂದಿಯಾಗಿ ಹೋಗಿತ್ತು. ಮನುಷ್ಯನೇ ಮನುಷ್ಯನಿಗೆ ಹಗೆಯಾಗಿಬಿಟ್ಟಿದ್ದ. ಅಣುಬಾಂಬಿನ ಮಹಾ ಭಯಾನಕ ಅಸ್ತ್ರಕ್ಕೆ ಮನುಷ್ಯ ಜನ್ಮವಿತ್ತಿದ್ದ. ಆ ಅಸ್ತ್ರವೇ ಮನುಷ್ಯನ ಮೂಲಕ್ಕೆ ಮುಳ್ಳು ವಾಗಿತ್ತು. ಅದು ಮನುಷ್ಯನನ್ನೇ ಕೊಂದು ಹಾಕಿತ್ತು. ಪ್ರಪಂಚವನ್ನೆಲ್ಲ ವ್ಯಾಪಿಸಿದ ಯುದ್ಧದ ಹೋಮ ಕುಂಡದಲ್ಲಿ ಎಷ್ಟೋ ರಾಷ್ಟ್ರಗಳ ಆಹುತಿ ಬಿದ್ದಿತ್ತು. ಮತ್ತು ಕೆಲವು ರಾಷ್ಟ್ರಗಳ ಉಡಿಯಲ್ಲಿ ಸ್ವಾತಂತ್ರ್ಯದ ದಾನವು ಬಿದ್ದಿತ್ತು. ಅಗ್ನಿದಿವ್ಯದೊಳಗಿಂದ ಆ ರಾಷ್ಟ್ರಗಳ ಸ್ವಾತಂತ್ರ್ಯದ ಜನ್ಮ ವಾಗಿತ್ತು. ಎಲ್ಲವೂ ಬುಡಮೇಲಾಗಿತ್ತು. ಸಾಮ್ರಾಜ್ಯದಾಹದ ರಾಷ್ಟ್ರ

ಗಳ ಸಾಮ್ರಾಜ್ಯದ ಪಿಪಾಸೆ ಮಣ್ಣು ಮುಕ್ಕಿತ್ತು. ಯುದ್ಧವು ಮುಗಿದಿತ್ತು. ಇಡಿಯ ಪ್ರಪಂಚದಲ್ಲಿ ಸ್ಮಶಾನ ಶಾಂತತೆ ಪಸರಿಸಿತ್ತು. ಜೀವಂತ ವ್ಯಕ್ತಿಗಳ ಅಸ್ತಿತ್ವದ ಅರಿವೇ ಆಗುತ್ತಿದ್ದಿಲ್ಲ. ಆ ವ್ಯಕ್ತಿಗಳಿಗೆ ಕೈಕಾಲುಗಳಿದ್ದವು. ಅವು ನಡೆದಾಡುತ್ತಿದ್ದವು. ಆದರೆ ಅದು ಕೈ ಗೊಂಬೆಗಳಂತೆ. ಯಾರೋ ಅವರನ್ನು ನಡೆದಾಡಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಜರ್ಮನ್ ರಾಷ್ಟ್ರವಂತೂ ಈ ಯುದ್ಧದಲ್ಲಿ ಸುಟ್ಟು ಬೂದಿಯಾಗಿ ಹುಡಿ ಹಾರಿ ಹೋಗಿತ್ತು. ಆ ದೇಶದ ತುಂಡು ತುಂಡುಗಳು ಕಡಿದೊಗೆಯಲ್ಪಟ್ಟಿದ್ದವು. ಈ ವಿಪ್ಲವ ಚಕ್ರದಲ್ಲಿ ಹೊಸ ಸ್ವತಂತ್ರ ಭಾರತವೂ ನಿರ್ಮಾಣವಾಗಿತ್ತು. ಆದರೆ ಈ ದೇಶವೂ ಹರಿದಿತ್ತು. ಎರಡು ತುಂಡಾಗಿತ್ತು.

ಆದಾಗ್ಯೂ ಈ ವಿಶ್ವಯುದ್ಧದ ಸ್ವಲ್ಪವೂ ಪರಿಣಾಮವು ಮ್ಯುಲರ ಕುಟುಂಬದ ಮೇಲೆ ಆಗಿದ್ದಿಲ್ಲ. ಅವರ ಜೀವನ ಕ್ರಮ ಆ ಕಳೆದ ಸಂಚಿಕೆಯಿಂದ ಹಾಗೆಯೇ ಮುಂದುವರಿದಿತ್ತು. ಅವರ ಭಾರತ ಪ್ರೇಮ ಶಾಶ್ವತವಾಗಿತ್ತು. ಇಲ್ಲ ಮತ್ತೆ ಬೆಳೆದಿತ್ತು. ಸ್ವತಂತ್ರವಾದ ಭಾರತ ದೇಶವು ಇನ್ನು ತನ್ನದೇ ಪಾರಂಪರಿಕ ಪೂರ್ವ ತೇಜಸ್ಸಿನಿಂದ ತಳತಳಿಸಲಿದೆ, ಎಂಬ ಅಪರಂಪಾರ ನಂಬಿಕೆ ಅನಿಸುತ್ತಿತ್ತು. ಮ್ಯುಲರ ಕುಟುಂಬಕ್ಕೆ ತಮಗೆ ಪ್ರಿಯವಾಗಿದ್ದ ಈ ಭಾರತ ದೇಶವು ಸ್ವತಂತ್ರವಾಗಿತ್ತು. ಸ್ವಾಮೀ ವಿವೇಕಾನಂದರ ಭವಿಷ್ಯ ವಾಣಿ ಆ ರೂಪದಲ್ಲಿ ಆಕಾರ ಗೊಂಡಿತ್ತು. ಆ ದೇಶದ ಸ್ವಾತಂತ್ರ್ಯವನ್ನು ಕಾಣುವ ಭಾಗ್ಯ ತನಗೆ ಲಭಿಸಿತೆಂದು ಅದೆಷ್ಟು ಅಭಿಮಾನ ಮಾನ ಫ್ರೆಡ ಮ್ಯುಲರರಿಗೆ, ಆ ದೇಶದ ಪರಮ ಪವಿತ್ರ ಗಂಗಾ ನದಿಯಲ್ಲಿ ತನ್ನ ಅಸ್ಥಿಗಳ ವಿಸರ್ಜನೆ ಆಗಬೇಕೆಂದು ಅವರ ಅಂತಃಕರಣಕ್ಕೆ ಒಂದೇ ಧ್ಯಾಸ ಹತ್ತಿತ್ತು. ಆ ರ ದೃಷ್ಟಿಯಿಂದ ಅವರ ಅಂತ್ಯ ಸವಿಯಾಗಿತ್ತು. ಮನುಷ್ಯ ಜನ್ಮಕ್ಕೆ ಬಂದು ಗಳಿಸಬೇಕಾದದ್ದೆಲ್ಲ ತನ್ನ ಉಡಿಯಲ್ಲಿ ಬೀಳುವಂತೆ ಮಾಡಿದೆನು–, ಎಂಬ ಸಮಾಧಾನದಲ್ಲಿಯೇ ಅವರು ಕಣ್ಣು ಮುಚ್ಚಿದ್ದರು. ತನ್ನ ತಂದೆಯ ಅಸ್ಥಿಗಳನ್ನು ತೆಗೆದುಕೊಂಡು ಫ್ರಾಂಜ ಮ್ಯುಲರ ಭಾರತಕ್ಕೆ ಹೋದರು. ಅವುಗಳ ವಿಸರ್ಜನೆ ಗಂಗೆಯಲ್ಲಿ ಮಾಡಿದ ನಂತರವೂ ಅವರು ಭಾರತದಲ್ಲಿಯೇ ಅಜ್ಞಾತದ ಶೋಧಕ್ಕಾಗಿ ಉಳಿದರು. ಅರುಣಾಚಲದಲ್ಲಿ

ಮಾನವೀ ಜೀವನದ ರಹಸ್ಯ ತನಗೆ ಸಿಗಬಹುದೆಂಬ ಆಸೆಯಿಂದ ಅವರು ರಮಣ ಮಹರ್ಷಿಗಳ ಆಶ್ರಮದಲ್ಲಿ ಹೋಗಿ ಉಳಿದರು. ಆ ಸ್ಥಳದಲ್ಲಿಯೆ ಅವರು ಸಾಧನೆಯನ್ನು ಮಾಡಿದರು. ಆಧ್ಯಾತ್ಮಿಕ ಮಾರ್ಗದಲ್ಲಿ ಬಹಳಷ್ಟು ಪ್ರಗತಿಯನ್ನು ಸಾಧಿಸಿದರು. ಅದಕ್ಕಾಗಿ ಸನ್ಯಾಸಾಶ್ರಮ ಸ್ವೀಕರಿಸುವ ನಿರ್ಧಾರವನ್ನು ಮಾಡಿ ಅದನ್ನು ಪೂರ್ತಿಗೊಳಿಸಿಯೂ ಆಗಿತ್ತು.

ಎಷ್ಟು ಸುತ್ತು ತಿರುಗಿತು ಕಾಲ ಚಕ್ರ !

ತನ್ನ ಸಂಸಾರವನ್ನು ಬಿಟ್ಟು ಫ್ರಾಂಜ ಮ್ಯುಲರ ಸನ್ಯಾಸ ದೀಕ್ಷೆ ಪಡೆಯಲು ನಿರ್ಧರಿಸಿದ್ದಾರೆಂದು ಏರ್ನಾಳಿಗೆ ಮೊತ್ತಮೊದಲು ತಿಳಿದಾಗ ಅವಳಿಗೆ ಅಪರಂಪಾರ ದುಃಖವಾಯಿತು. ಆದರೆ ಕಾಲಗತಿಯಿಂದ ಆ ದಃಖದ ಧಾರೆ ಮೊಂಡವಾಗುತ್ತ ಹೋಯಿತು. ಯಾವದೇ ದುಃಖದ ಮೂಲ ಮಾನವನ ಕೈ ಮೀರಿ ಆಚೆಗೆ ಇದ್ದರೆ ಆ ದುಃಖವನ್ನು ಮನಸ್ಸಿನಿಂದ ದೂರ ಮಾಡುವದರ ಹೊರತು ಬೇರೆ ಗತಿ ಇರುವದಿಲ್ಲ. ತಮ್ಮ ತುಂಬಿದ ಸಂಸಾರ ವನ್ನು ಬಿಟ್ಟು ಫ್ರಾಂಜ ಮ್ಯುಲರ ಹೊರಟೆದ್ದು ಹೋದರು–ಈ ದುರ್ಘಟನೆಯ ಇದುರು ಆಕೆ ಏನು ಮಾಡುವಂತಿತ್ತು ? ಸಂಸಾರದೊಳಗಿನ ಸಂಗಾತಿ ಹೊರಟು ಹೋಗಿದ್ದ. ಇನ್ನು ಮುಂದಿನ ಆಯುಷ್ಯದ ಹಾದಿ ಆಕೆ ಒಂಟಿಯಾಗಿ ನಡೆಯಬೇಕೆ ? ಹೊರತು ಬೇರೆ ಏನು ಮಾಡಲು ಸಾಧ್ಯ ? ಅವಳ ಮನೆಯ ಎರಡು ತಲೆಮಾರು ಒಂದು ವಿಶಿಷ್ಟ ಹುಚ್ಚಿನ ಮೂಲಕ ಹಾನಿಯಾಗಿದ್ದವು. ಈಗ ಆಕೆ ಆಲ್ಬರ್ಟನನ್ನು ಕಾಪಾಡಿಕೊಳ್ಳಬೇಕು. ತನ್ನ ಕಲ್ಪನೆಯಂತೆ ಅವಳು ಹಾಗೇ ಕಾಪಾಡುತ್ತಲೇ ಇದ್ದಾಳೆ. ಆತ ಯೋಗ್ಯ ದಾರಿಯಿಂದ ನಡೆದಿದ್ದಾನೆ ಎಂಬುದರ ಕುರಿತು ಅವಳಿಗೆ ಯಾವ ಶಂಕೆಯೂ ಇದ್ದಿಲ್ಲ.

ಮತ್ತು ತಾನು ತೀರ ಯೋಗ್ಯ ದಾರಿಯಲ್ಲಿ ನಡೆಯುತ್ತಿದ್ದೇನೆಂದು ಸ್ವತಃ ಆಲ್ಬರ್ಟನಿಗೆ ಯಾವ ಸಂಶಯವೂ ಇದ್ದಿಲ್ಲ. ಆತ ತರುಣನಿದ್ದ. ಮತ್ತು ತರುಣರ ದಾರಿಯಲ್ಲಿ ಆತ ನಡೆಯುತ್ತಿದ್ದ. ಭಾರತಿಯು ಅವರ ಮನೆಯಲ್ಲಿ ಪ್ರವೇಶ ಮಾಡಿದಂದಿನಿಂದ ಅವಳ ಕುರಿತು ಅವನಲ್ಲಿ ಒಂದು ಬಗೆಯ ಆಕರ್ಷಣೆ ಉಂಟಾಗಿತ್ತು. ಇಷ್ಟು ದೂರದ ದೇಶದಿಂದ ಅವಳ

ಬಂದಿದ್ದಾಳೆ. ಈ ನಮ್ಮ ಪರಕೀಯ ದೇಶದಲ್ಲಿ ಅವಳು ಸಾಮಾಜಿಕ ಕಾರ್ಯವನ್ನು ಮಾಡುತ್ತಿದ್ದಾಳೆ. ಅವಳ ಈ ಧೈರ್ಯದ ಬಗೆಗೆ ಅವನಿಗೆ ಅವಳಲ್ಲಿ ಕೌತುಕವೆನಿಸುತ್ತಿತ್ತು. ಆದರೆ ಮೆಲ್ಲ ಮೆಲ್ಲನೆ ಈ ಕೌತುಕದ ಸ್ವರೂಪ ಬದಲಾಗುತ್ತ ನಡೆಯಿತು, ಮತ್ತು ಕಣ್ಣುತಪ್ಪಿಸಿ ದಾರಿ ತಪ್ಪಿದ ಆಡಿನ ಮರಿ ಅರಳಿದ ಹೂದೋಟದಲ್ಲಿ ಮೆಲ್ಲಗೆ ಹೊಕ್ಕುವಂತೆ ಪ್ರೇಮದ ಭಾವನೆ ಅವನ ಅಂತಃಕರಣದಲ್ಲಿ ಹೊಕ್ಕಿತು.

ತನ್ನ ಅಂತಃಕರಣವು ಆ ಭಾವನೆಯು ಹಿಡಿತಕ್ಕೆ ಯಾವಾಗ ಮತ್ತು ಹೇಗೆ ಒಳಪಟ್ಟಿತು ಎಂಬುದೂ ಅವನಿಗೆ ಪೂರ್ತಿ ಅರಿವಾಗಲಿಲ್ಲ. ಮೊದಲನೆಯ ದಿನ ಅವನ ತಾಯಿ ಭಾರತಿಯನ್ನು ಮನೆಯಲ್ಲಿ ತೆಗೆದುಕೊಳ್ಳಲಿಕ್ಕೂ ಸಿದ್ಧಳಾಗಿದ್ದಿಲ್ಲ. ಆಗ ಅವನಿಗೆ ಅವಳ ಬಗೆಗೆ ಭೂತದಯೆ ಉಂಟಾಯಿತು; ಮತ್ತು ತಾಯಿಗೆ ಅವಳನ್ನು ಮನೆಯೊಳಗೆ ತೆಗೆದುಕೊಳ್ಳುವಂತೆ ಆತ ಒತ್ತಾಯ ಪಡಿಸಿದ್ದನು. ಅವಳು ಮನೆಯಲ್ಲಿ ಬಂದು ಉಳಿದಳು. ಅತಿಥಿಯಂತೆ! ಅವಳು ಮನೆಯೊಳಗೆ ಬಂದಂದಿನಿಂದ ಆತ ಆತಿಥ್ಯ ಧರ್ಮವನ್ನು ಪರಿಪೂರ್ಣವಾಗಿ ಪಾಲಿಸಿದ್ದನು. ಅವಳ ಸುಖ ಸೌಕರ್ಯಗಳ ಕಡೆಗೆ ಆತ ತಾನಾಗಿಯೇ ಲಕ್ಷ್ಯವನ್ನು ಪೂರೈಸಿದನು. ಅವಳ ಕಾರ್ಯದಲ್ಲಿ ಅವಳಿಗೆ ಮಾರ್ಗದರ್ಶನವನ್ನೂ ಮಾಡಹತ್ತಿದನು ಅವಳಿಗೆ ಪರಿಚಯಗಳನ್ನು ಮಾಡಿಕೊಟ್ಟನು. ತನ್ನ ತಾಯಿಯ ಭಾರತ ದ್ವೇಷದ ಬಗೆಗೆ ಅವಳೊಂದಿಗೆ ಬಹಳ ಸಲ ಚರ್ಚೆ ಮಾಡಿದ್ದನು. ಅವಳು ಮನೆಯೊಳಗೆ ಬಂದಂದಿನಿಂದ ಅವಳ ನಡತೆಯನ್ನು ಅವನು ಸೂಕ್ಷ್ಮವಾಗಿ ನೋಡುತ್ತಿದ್ದನು. ಅವಳ ಮಾತನ್ನು ಕಿವಿಗೊಟ್ಟು ಆಲಿಸುತ್ತಿದ್ದನು. “ಅವಳು ತುಂಬ ತಿಳುವಳಿಕೆಯುಳ್ಳ ಹುಡುಗಿ”– ಇಷ್ಟೇ ಅವಳ ಬಗೆಗೆ ಅವನಲ್ಲಿ ಮೊದಲಿಗೆ ಉಂಟಾದ ಭಾವನೆ. ಪರಕೀಯ ಹುಡುಗಿಯ ಬಗೆಗೆ ಇದಕ್ಕಿಂತ ಬೇರೆ ಯಾವ ಕರ್ತವ್ಯವೂ ಇದ್ದಿಲ್ಲ

* * * * *

ತನ್ನ ಪತಿಯನ್ನು ಭೆಟ್ಟಿಯಾಗಲು ಏಸ್ಲಾ ಭಾರತಕ್ಕೆ ಹೋದಳು ಮತ್ತು ಎಲ್ಲ ಸಂಗತಿಗಳೂ ಬದಲಾದವು. ಆಲ್ಬರ್ಟ ಮತ್ತು ಭಾರತಿಯ

ಸಹವಾಸ ತುಸು ಹೆಚ್ಚು ಕೂಡಿ ಬರಹತ್ತಿತು. ತರುಣರ ವರ್ತನೆಯ ರೀತಿಯೇ ಎಷ್ಟು ವಿಚಿತ್ರವಿರುತ್ತದೆ ನೋಡಿ! ಒಂದೇ ದೇಶದ ತರುಣ ತರುಣಿಯರಿಗೆ ಒಂದೆಡೆಗೆ ಒಡನಾಡುವದರಲ್ಲಿ ಅನಿಸುವ ಸ್ವಾಭಾವಿಕ ಸಂಕೋಚವು ಪರಕೀಯ ದೇಶದ ತರುಣ–ತರುಣಿಯರಿಗೆ ಹಾಗೆ ಒಡನಾಡುವಾಗ ಅನಿಸುವದಿಲ್ಲ ಬಹುಶಃ ಇದಕ್ಕೆ ಹೀಗೂ ಕಾರಣವಿರಬಹುದು, ಪರಕೀಯ ಮನಸ್ಸುಗಳು ಪರಸ್ಪರರತ್ತ ಒಮ್ಮೆಲೇ ಸೆಳೆಯಲ್ಪಡುವದಿಲ್ಲವೇನೋ, ಅದ್ದರಿಂದ ಒಂದು ವೇಳೆ ಭಾರತಿಯು ಭಾರತದಲ್ಲಿಯೇ ಒಬ್ಬ ಭಾರತೀಯ ತರುಣನ ಮನೆಯಲ್ಲಿ ಹೋಗಿ ಅವನ ಸಾನಿಧ್ಯದಲ್ಲಿ ನಿರಾತಂಕವಾಗಿ ಒಡನಾಡುತ್ತಿದ್ದಿಲ್ಲ. ಆದರೆ ಈ ಪರಕೀಯ ದೇಶದಲ್ಲಿ ಆಲ್ಬರ್ಟನ ಮನೆಯಲ್ಲಿ ಅವಳಿಗೆ ಯಾವ ಬಗೆಯ ಸಂಕೋಚವೂ ಅನಿಸಲಿಲ್ಲ. ಏಕೆಂದರೆ ಯಾವ ದಾರಿ ಪರಕೀಯವೋ, ಅಪರಿಚಿತವೋ, ಆ ದಾರಿಯಲ್ಲಿ ಹೋಗುವ ಪ್ರಸಂಗ ತನ್ನ ಮೇಲೆ ಎಂದೂ ಬರಲಾರದು– ಈ ಕುರಿತು ಅವಳಿಗೆ ಪೂರ್ತಿ ಮನವರಿಕೆ ಇತ್ತು.

*     *     *     *     *

ಆದರೆ ಆ ದಿನ ರಾತ್ರಿ ಈ ಘಟನೆ ನಡೆಯಿತು. ಅದು ನಿಜವಾಗಿಯೇ ನಡೆಯಿತೋ ಅಥವಾ ಒಂದು ಕಲ್ಪನೆಯಾಗಿತ್ತೋ ಎಂಬುದು ಅವಳಿಗೆ ತಿಳಿಯಲಿಲ್ಲ. ನಡೆದ ಘಟನೆ ನಿಜವೇ ಆಗಿದ್ದರೆ ತನಗೆ ಕೆಡುಕೆನಿಸೀತು; ಅದು ಕೇವಲ ಕಲ್ಪನೆಯಾಗಿದ್ದರೆ ತನಗೆ ಆನಂದವೆನಿಸೀತು— ಎಂದು ಅವಳು ಹಲವಾರು ಸಲ ಆಲ್ಬರ್ಟನಿಗೆ ಆಡಿ ತೋರಿಸಿದ್ದಳು ನಿಜ. ಆದರೆ ಅವಳ ಮನಸ್ಸಿನ ಪ್ರತಿಕ್ರಿಯೆ ಇದಕ್ಕೆ ತೀರ ವಿರುದ್ಧವಿತ್ತು. ಆ ಘಟನೆ ನಿಜವಾಗಿಯೂ ನಡೆದಿತ್ತು, ಎಂದು ಅವಳಿಗೆ ಗೊತ್ತಾದರೆ ಅವಳ ಮನಸ್ಸಿಗೆ ಒಳಒಳಗೇ ಹಿತವೆನಿಸಲಿತ್ತು. ಏನು ಚಮತ್ಕಾರಿಕವಾಗಿವೆ ಈ ತರುಣರ ಮನಸ್ಸುಗಳು ಮತ್ತು ಅವುಗಳ ಆಂದೋಲನಗಳು ! ಯಾವದು ಬೇಕೋ ಅದನ್ನು ಬೇಡವೆನ್ನುವದರಲ್ಲಿ, ಯಾವದು ಬೇಡವೋ ಅದನ್ನು ಬೇಕೆನ್ನುವದರಲ್ಲಿ ಅವರ ಹೇತುವೇನಿರುತ್ತದೋ ಯಾರಿಗೆ ಗೊತ್ತು ? ಅದ್ದರಿಂದಲೇ ಪ್ರಣಯಿಗಳ ನಕಾರಗಳನ್ನು ಹುಂಕಾರವೆಂದು ಎಣಿಸಲ್ಪಡುತ್ತಿರಬೇಕು.

ಭಾರತಿಯ ಮನಸ್ಸಿನ ಅವಸ್ಥೆ ಈ ರೀತಿ ಚಮತ್ಕಾರಿಕವಾಗಿತ್ತು. ಅವಳು ಆಲ್ಬರ್ಟನಿಗೆ ನಡುನಡುವೆ ಕೇಳುವಳು. "ಏನೋ. ನಿನಗೇನನಿಸು ಸುತ್ತದೆ, ಆ ಎಲ್ಲ ಪ್ರಕಾರ ಸುಳ್ಳೇ ? ಅದೊಂದು ಕನಸೇ ? ನನಗಂತೂ ಏನೂ ತಿಳಿಯುವದೇ ಇಲ್ಲ !"

ಇದಕ್ಕೆ ಅವನು ಗೊತ್ತು ಮಾಡಿದ್ದಂತೆ ಉತ್ತರ ಕೊಡುವನು. "ಯೋಗ್ಯ ವೇಳೆಗೆ ನಿನಗೆ ಎಲ್ಲವನ್ನೂ ಹೇಳುವೆನು !"

ಆತ ಹೀಗೆ ಗೊತ್ತುಮಾಡಿಟ್ಟಂತೆ ಉತ್ತರ ನೀಡುತ್ತಿದ್ದನೇನೋ ನಿಜ. ಆದರೆ ಅವನ ಮನಸ್ಸಿಗೂ ಒಂದು ಬಗೆಯ ಅಜ್ಞಾತವಾದ, ಅನಾಮಿಕವಾದ ತಲ್ಲಣ ಅಂಟಿಕೊಂಡಿತ್ತು "ಈ ಮುದ್ದು ಹುಡುಗಿ ಈ ಪ್ರಶ್ನೆಯನ್ನು ನನಗೆ ಹೀಗೆ ಯಾವಾಗಲೂ ಏಕೆ ಕೇಳಬೇಕು ? ಅವಳಿಗೆ ನಿಶ್ಚಿತವಾಗಿ ಯಾವ ಉತ್ತರ ಬೇಕಾಗಿದೆ ? ಅದರೊಳಗಿಂದ ಈಕೆ ಯಾವ ಅರ್ಥ ಹೊರಡಿಸುವಾಕೆ? ಇವಳ ಮನಸ್ಸಿನಲ್ಲಿ ಇದ್ದುದಾದರೂ ಏನು ?" ಈ ಪ್ರಶ್ನೆಗಳು ಅವನ ಮನಸ್ಸನ್ನು ಪೀಡಿಸಿದ್ದವು.

ಆ ಮನೆಯಲ್ಲಿ ಈ ಎರಡು ತರುಣ ಮನಸ್ಸುಗಳ ಮುಗ್ಗಟ್ಟು ನಡೆದಿತ್ತು. ಎರಡೂ ತರುಣ ಮನಸ್ಸುಗಳೂ ತಮ್ಮ ತಮ್ಮ ಸ್ಥಳದಲ್ಲಿಯೆ ನಿಂತು ತಮ್ಮ ತಮ್ಮ ದೃಷ್ಟಿಯಿಂದ ವಿಚಾರ ಮಾಡುತ್ತಿದ್ದವು. ಎರಡೂ ತರುಣ ಅಂತಃಕರಣಗಳಿಗೆ ಮದನನ ಬಾಣವು ತಾಗಿತ್ತು ಮತ್ತು ಅವುಗಳಿಗೆ ಗಾಯವಾಗಿತ್ತು. ಆ ತರುಣ ಮನಸ್ಸುಗಳಿಗೆ ಒಬ್ಬರೊಂದಿಗೊಬ್ಬರು ಮಾತಾಡಬೇಕೆಂದಿತ್ತು. ಶಂಕೆಗಳನ್ನು ಬಗೆಹರಿಸಿಕೊಳ್ಳಬೇಕೆಂದಿತ್ತು. ಒಬ್ಬರಿಗೊಬ್ಬರು ತೀರ ಹತ್ತಿರ ಸರಿಯಬೇಕೆಂದಿತ್ತು

* * *

ಆದರೆ ಪಿನ್ನಾ ಭಾರತದಿಂದ ಮರಳಿ ಬಂದಳು ಮತ್ತು ಮನೆಯಲ್ಲೆಲ್ಲ ವಿಷಾದದ ಕಳವಳ ಕವಿಯಿತು. ವಿಪರೀತದ ಘಟನೆಯೊಂದು ನಡೆದು ಹೋಗಿತ್ತು. ಫ್ರಾಂಜ ಮ್ಯುಲರ ಸನ್ಯಾಸಾಶ್ರಮ ಸ್ವೀಕರಿಸಿದ್ದರಿಂದ ಪಿನ್ನಾಳ ಸಂಸಾರ ಮುಗಿದಿತ್ತು. ಮನೆಯ ಮೇಲೆ ದುಃಖದ ನೆರಳು

ಜಾಚಿತ್ತು. ಇಂಥ ಸ್ಥಿತಿಯಲ್ಲಿ ಎಲ್ಲವೂ ತೆಪ್ಪಗೆ ಸುಮ್ಮನಾಗಿತ್ತು. ಆದರೆ ಇದ್ದ ಸ್ಥಳದಲ್ಲಿ ಆ ತರುಣರ ಮನಸ್ಸುಗಳು ಹೊಗೆಯಾಡುತ್ತಿದ್ದವು. ಪರಸ್ಪರರ ಪ್ರೇಮವನ್ನು ಅರಿತುಕೊಳ್ಳಲಿಕ್ಕೆ ಆತುರವಾಗಿದ್ದವು, ಆದರೆ ಮುಂದಿನ ಹೆಜ್ಜೆ ಇಡಲು ಶಕ್ಯವೇ ಇದ್ದಿಲ್ಲ.

ಕಾಲವು ಮುಂದೆ ಸರಿಯುತ್ತಿತ್ತು. ಕಾಲಾಂತರದಿಂದ ಮನೆಯ ಮೇಲೆ ಹಬ್ಬಿದ ದುಃಖದ ಮಂಜು ಕರಗಿ ಹೋಯಿತು. ಮತ್ತು ಆ ಎರಡು ತರುಣ ಮನಸ್ಸುಗಳು ತಿರುಗಿ ಜಾಗೃತವಾದವು. ಪ್ರೇಮದ ವ್ಯವಹಾರದಲ್ಲಿ ಅನಿಶ್ಚಿತ ಅವಸ್ಥೆ ದೀರ್ಘ ಅವಧಿಯು ಎಂದೂ ಸಹನವಾಗುವದಿಲ್ಲ. ಪ್ರೇಮದ ಗೊತ್ತು ಪತ್ತೆ ಹಚ್ಚಿಕೊಳ್ಳಲಿಕ್ಕೆ ತರುಣ ಪ್ರೇಮಿಕರು ಯಾವಾಗಲೂ ಉತ್ಸುಕರಿರುತ್ತಾರೆ.

ಒಂದು ದಿನ ಸಂಜೆ ಆಲ್ಬರ್ಟ ಮನೆಗೆ ಬಂದ. ಭಾರತಿ ತನ್ನ ಕೋಣೆಯಲ್ಲಿ ಒಬ್ಬಳೇ ಇದ್ದುದನ್ನು ಕಂಡು ಅಂದ. "ನಾ ನಿನಗೊಂದು ವಿನಂತಿ ಮಾಡಿಕೊಳ್ಳಲಿದ್ದೇನೆ"

ಅವಳು ಅವನ ಕಡೆಗೆ ಪ್ರಶ್ನಾರ್ಥಕ ಮುದ್ರೆಯಿಂದ ನೋಡಿದಳು. ಆಗ ಆತನೆಂದನು. "ನೇರಹೊರೆಯ ಹಳ್ಳಿಯಲ್ಲಿ ನಮ್ಮ ಕಂಪನಿಯು ಒಂದು ಕೆಲಸವನ್ನು ಆರಂಭಿಸಿದೆ. ನಾಲ್ಕು ದಿನ ಅಲ್ಲಿ ನನ್ನ ಬಿಡಾರ ಹೂಡಬೇಕು. ನನ್ನ ಸಂಗಡ ನೀ ಬರುವೆಯಾ ? ಅಲ್ಲಿ ನಿನಗೆ ನಿನ್ನ ಕೆಲಸವನ್ನು ಮಾಡಲು ಅನುಕೂಲ, ನಿನಗೇನು?, ಈ ವರೆಗೆ ಈ ನಗರದ ನಿರೀಕ್ಷಣೆ ಮಾಡಿದೆ. ಈಗ ಹಳ್ಳಿಯ ನಿರಿಕ್ಷಣೆ ಮಾಡಲು ಬಂದೀತು. ಭಾರಿ ಪ್ರಕೃತಿ ಸೌಂದರ್ಯದ ರಮಣೀಯ ಹಳ್ಳಿ, ಸೊಗಸಾಗಿ ಕಾಲ ಕಳೆಯಬಹುದು ಬರುವಿಯಾ ?"

ಭಾರತಿಗೆ ಇಲ್ಲ, ಒಲ್ಲೆ ಎಂದು ಅನುಮಾನಿಸಲು ಯಾವ ಕಾರಣವು ಇದ್ದಿಲ್ಲ. ಅವಳಿಗೆ ಅವನ ಸಹವಾಸವು ಇಷ್ಟವೇ ಇತ್ತು. ಅವಳು ಅವನ ಯೋಜನೆಗೆ ಕೂಡಲೆ ಒಪ್ಪಿಗೆ ಇತ್ತಳು. ಅವನಿಗೆ ಅದೆಷ್ಟು ಆನಂದ! ಅ ಮನಸ್ಸಿನಲ್ಲಿ ಯೋಜಿಸಿದ್ದು ಇನ್ನು ಸತ್ಯ ಸೃಷ್ಟಿಗೆ ಇಳಿಯಲಿತ್ತು.

ಆಗ ಆತ ಅಂದ. "ಈ ಹಳ್ಳಿಯ ಹೆಸರೇನೆಂದು ನಿನಗೆ ಗೊತ್ತೇ?"

ಭಾರತಿ ಅಂದಳು. "ನನಗೆಲ್ಲಿ ಗೊತ್ತಾಗಬೇಕು ?"

ಆಲ್ಬರ್ಟ ಅಂದ. "ನೆಕರ ವ್ಹಾಲಿಯಲ್ಲಿ ಹೈಲಬರ್ನ ಎಂಬ ಹೆಸರಿನ ಒಂದು ಹಳ್ಳಿ ಇದೆ. ಆ ಹಳ್ಳಿ ಒಂದು ಗುಡ್ಡದ ಮೇಲೆ ಇದೆ. ಕೆಳಗಿನಿಂದ ಹೊಳೆ ಹರಿಯುತ್ತದೆ. ಅಲ್ಲಿ ನಿಸರ್ಗ ಅಕ್ಷರಶಃ ಮಾತಾಡುತ್ತದೆ. ಆ ಸ್ಥಳದಲ್ಲಿ ಅನೇಕ ಮಿಥುನಗಳು 'ಹನಿಮೂನಿ'ಗೆ ಹೋಗುತ್ತಾರೆ."

ಭಾರತೀ ಖಿಲಕ್ಕನೆ ನಕ್ಕಳು ಮತ್ತು ಅಂದಳು. "ಹಾಗಾದರೆ ನಾವೇಕೆ ಅಲ್ಲಿಗೇ ಹೋಗಬೇಕು ?"

ಅವಳ ಮಾತಿನ ಇಂಗಿತ ಆಲ್ಬರ್ಟನ ಗಮನಕ್ಕೆ ಬಂದಿತು. ಅವನೂ ನಗುತ್ತ ಅಂದನು. "ಈ ಹಳ್ಳಿಗೆ ನಾವು ಏನು ಹೆಸರು ಇಟ್ಟಿದ್ದೇವೆ ಗೊತ್ತೇ? "ಲೀಬ ಡೋರ್ಫ.

ಭಾರತೀ ಅಂದಳು "ಇದೆಂಥ ವಿಚಿತ್ರ, ಹೆಸರು ?"

ಆತ ಮುನಮಾರೆ ನಕ್ಕು ಅಂದನು. "ಲೀಬಡೋರ್ಫ ಅಂದರೆ ಪ್ರಣಯದ ಗ್ರಾಮವೆಂದು !"

ಆಕೆ ಗಂಭೀರ ಆವಿರ್ಭಾವ ತಂದು ಕೊಂಡು ಕೇಳಿದಳು. "ಅಲ್ಲೇನು ಪ್ರಣಯದ ಬೆಳೆ ಬರುತ್ತದೆಯೇ ?"

"ಬೆಳೆ ಬರುವದಿದೆ ಈಗ"

ಆಲ್ಬರ್ಟನ ಈ ಮಾತಿಗೆ ಆಕೆ ನಕ್ಕಳು. ಆದರೆ ಅವಳು ಒಮ್ಮೆಲೆ ವಿಷಯವನ್ನು ಬದಲಿಸಿದಳು. ಅವನಿಗೆ ಅದು ಸೇರಲಿಲ್ಲ.

'ಲೀಬಡೋರ್ಫ' ಹಳ್ಳಿಗೆ ಹೋಗುವ ಹಂಚಿಕೆ ಗೊತ್ತು ಮಾಡುವಾಗ ಅವನು ಅವಳ ಮನಸ್ಸನ್ನು ತಪಾಸುಮಾಡಿ ನೋಡುತ್ತಿದ್ದನು. ತನ್ನನ್ನು ಪ್ರೀತಿಸುವ ತರುಣಿ ತನ್ನ ಸಂಗಡ ಒಬ್ಬಳೇ ಪ್ರವಾಸಕ್ಕೆ ಬರುವಳು, ಈ ಭಾವನೆ ಅದೆಷ್ಟು ಸುಖಕರವಾಗಿತ್ತು ! ಆದರೆ ಅವಳ ಈವರೆಗಿನ ಮಾತು ಕತೆಯಿಂದ ಮತ್ತು ಅವಳು ಮಾತಿನ ಒಳ್ಳೆ ಭರದಲ್ಲಿ ಈಗ ಒಮ್ಮೆಲೆ ವಿಷಯವನ್ನು ಬದಲಿಸುವದರಿಂದ ಅವಳ ಮನಸ್ಸಿನ ನಿಶ್ಚಿತವಾದ ಆಳ

ಅವನಿಗೆ ಹತ್ತಿದ್ದಿಲ್ಲ. ಪ್ರೇಮದಲ್ಲಿ ಸಿಲುಕಿದ ತರುಣರ ಮನಸ್ಸು ಎಷ್ಟು ನಾಜೂಕಿನ ಸ್ಥಿತಿಗೆ ಬಂದಿರುತ್ತವೆ ! ಅವರ ಮನಸ್ಸಿಗೆ ಪ್ರೇಮದ ಆಶ್ವಾಸನೆ ಭರವಸೆಯು ಮನವರಿಕೆ ಬೇಕಾಗಿರುತ್ತದೆ. ಪ್ರೇಮದ ವಿಷಯದಲ್ಲಿ ಅ ನಿಶ್ಚಿತ ಅಥವಾ ಅರೆಬರೆ ಪರಿಸ್ಥಿತಿ ಅವರ ಮನಸ್ಸಿಗೆ ಅಸಹ್ಯವಾಗುತ್ತದೆ ಆದ್ದರಿಂದಲೆ ಅವರು ಪ್ರೇಮದ ಗೊತ್ತು ಪತ್ತೆ ಖಚಿತ ಮಾಡಿಕೊಳ್ಳಲಿಕ್ಕೆ ಉತ್ಸಾಕರಾಗಿರುತ್ತಾರೆ.

ಭಾರತಿಯು ಕೆಲವು ದಿವಸಗಳ ಪೂರ್ವದಲ್ಲಿ ಅನುಭವಿಸಿದ್ದು ಸತ್ಯ ವಾಗಿತ್ತೋ, ಕೇವಲ ಭಾಸವಾಗಿತ್ತೋ ಈ ಸಂಗತಿಯ ಗೊತ್ತು ಪತ್ತೆ ಖಚಿತ ಮಾಡಿಕೊಳ್ಳಬೇಕೆಂಬ ಉತ್ಕಂಠೆ ಅವಳಿಗೆ ಬಲವಾಗಿ ಹತ್ತಿತ್ತು. ಅವಳು ಆಗಾಗ್ಗೆ ಆಲ್ಬರ್ಟನಿಗೆ ಆ ಬಗೆಗೆ ಪ್ರಶ್ನೆ ಕೇಳಿದ್ದಳು. ಅಂದಿನಿಂದ ಆಲ್ಬರ್ಟನ ಅಂತಃಕರಣವೂ ವಿದ್ಧವಾಗಿತ್ತು.

ತರುಣರ ಮನಸ್ಸಿಗೆ ಏನು ಬೇಕಾಗಿರುತ್ತದೋ ಅದನ್ನು ಒಪ್ಪಿ ಕೊಂಡು ಈ ತರುಣರು ಒಮ್ಮೆಲೆ ಬಿಡುಗಡೆ ಹೊಂದುವದಿಲ್ಲವೇಕೆ? ಬೇಕಾದು ದನ್ನು ಪ್ರಕಟವಾಗಿ ಒಪ್ಪಿ ಕೊಳ್ಳುವದರಲ್ಲಿ ಅವರಿಗೆ ಇಷ್ಟು ಸಂಕೋಚವೇಕೆ ಅನಿಸಬೇಕು ? ಕುಗ್ಗು ಏಕೆ ಅನಿಸಬೇಕು. ?

'ಲೀಬಡೊರ್ಫ' ಹಳ್ಳಿಗೆ ಹೋದ ಮೇಲೂ ಆ ಇಬ್ಬರ ಮನಸ್ಸಿನ ಅವಸ್ಥೆ ಹೀಗೆಯೇ ಅನಿಶ್ಚಿತವೇ ಉಳಿಯಿತು.

ನೇಕರ–ಸ್ಟೈನಾಚದ ತನಕ ಅವರು ಒಂದು ಸಣ್ಣ ಮೋಟರಬೋಟ ಬಾಡಿಗೆಗೆ ಹಿಡಿದಿದ್ದರು. ನೇಕರ ನದಿಯ ತಿಳಿಯಾದ ಜಲಾಶಯದಲ್ಲಿ ಅಕ್ಕ ಪಕ್ಕದಲ್ಲಿ ಕುಳಿತು ಪ್ರಯಾಣ ಮಾಡುವಾಗ ಅವರಿಬ್ಬರ ಮನಸ್ಸೂ ಹಿಗ್ಗಿ ಅರಳಿ ಹೋಗಿದ್ದವು. ತಮ್ಮ ತಾರುಣ್ಯ ಉಕ್ಕೇರಿ ಬರುತ್ತಿದೆ.– ಮತ್ತು ಆ ಉಕ್ಕೇರಿ ಬರುವ ತಾರುಣ್ಯಕ್ಕೆ ಯಥಾಯೋಗ್ಯ ಪ್ರತಿಧ್ವನಿಯೂ ದೊರೆಯು ತ್ತಿದೆ–ಎಂದು ಇಬ್ಬರಿಗೂ ಅನಿಸುತ್ತಿತ್ತು. ಆ ದಿನ ರಾತ್ರಿ ಅವಳಿಗೆ ಬಂದ ಸವಿಯಾದ ಅನುಭವ ಒಂದು ಭಾಸವೇ ಆಗಿತ್ತೆಂದು ಎಣಿಸಿದರೂ, ಇಷ್ಟು ಒಬ್ಬರಿಗೊಬ್ಬರು ಒತ್ತಿ ಹತ್ತಿರ ಕೂತುಕೊಳ್ಳುವ ಈ ಅನುಭವ ಅವರ ಆಯುಷ್ಯದಲ್ಲಿ ಇದೇ ಮೊದಲು "ಲೀಬಡೋರ್ಫ" ದಲ್ಲಿ ಆಗಲಿರುವ

ನಾಟಕಕ್ಕೆ ಇದೇ ನಾಂದಿಯೆಂಬಂತೆ ಅನಿಸಿತು! ತಪ್ಪಿ ಸ್ಪರ್ಶವಾದರೂ ಅದು ಇಬ್ಬರಿಗೂ ಬೇಕುಬೇಕೆಂಬ ಲವಲವಿಕೆ ಅನಿಸುತ್ತಿತ್ತು. ಮತ್ತು ನಡುವೆಯೇ ಗಾಳಿಯ ಸುಳಿಯೊಂದು ಸುಳಿದು ಬಂದರೂ, ಮೈ ನಿಮಿರಿದಂತೆ ಮಾಡಿ ಅವರು ಒಬ್ಬರಿಗೊಬ್ಬರು ಸಂಕೋಚವಿಲ್ಲದೆ ಒತ್ತಿಕೊಂಡೂ ಕೂಡ್ರುತ್ತಿದ್ದರು. ಆಮೇಲೆ ಬಹಳ ಹೊತ್ತು ಅವರ ನಡುವಿನ ಅಂತರ ಬೆಳೆಯುತ್ತಿದ್ದಿಲ್ಲ. ಮನಸ್ಸು ಮನಸ್ಸಿಗೆ ಈ ಮೊದಲೆ ದನಿಗೊಟ್ಟಿತ್ತು. ಈಗ ಮೈ ಮೈಗೆ ಪಡಿನುಡಿಯುತ್ತಿತ್ತು.

ಆ ದಿನ ಹುಣ್ಣಿವೆ; ಮತ್ತು ಅವ ಬೋಟು ಓಡುತ್ತಿದ್ದಾಗ ಜಲಾಶಯದಲ್ಲಿ ಬೆಳ್ಳಿಯೇ ಕರಗಿ ಹರಿದು ಹೋಗುವಂತೆ ಭಾಸವಾಗುತ್ತಿತ್ತು. ಇಡೀ ವಾತಾವರಣವು ಶಾಂತವಾಗಿತ್ತು. ಆದರೆ ನೀರು ಕತ್ತರಿಸುತ್ತ ಹೋಗುವ ಮೋಟರ ಬೋಟಿನ ಸದ್ದು ಆ ಶಾಂತ ವಾತಾವರಣವನ್ನು ಕತ್ತರಿಸುತ್ತ ನಡೆದಿತ್ತು. ಸುತ್ತು ಮುತ್ತಲಿನ ಪ್ರದೇಶವೆಲ್ಲ ಬೆಳ್ಳಿಯ ಮಳೆಯಲ್ಲಿ ಮೀಯುತ್ತಿತ್ತು. ಫಲವೃಕ್ಷಗಳ ಎಲೆಗಳು ಚಕಚಕ ಮಿನುಗುತ್ತಿದ್ದವು. ಅಲ್ಲಿ ಮರಗಳಲ್ಲಿ ತಾರೆಗಳೇ ಮಿನುಗುತ್ತಿರುವಂತೆ ಭಾಸವಾಗುತ್ತಿತ್ತು ಆದರೆ ಈ ಬೆಳದಿಂಗಳ ನಿಸರ್ಗ ರಮ್ಯತೆಯತ್ತ ಅವರಿಬ್ಬರ ಲಕ್ಷ್ಯವಾದರೂ ಎಲ್ಲಿತ್ತು? ಅಂದಾಗ ಆ ನಿಸರ್ಗದತ್ತ ನೋಡಿ ಏನಾದರೂ ಭಾಸವಾಗುವ ಮಾತಂತೂ ದೂರವೇ ಇತ್ತು. ಇಬ್ಬರದೂ ಒಂದು ಬೇರೆ ಪ್ರೇಮದ ವಿಶ್ವ ನಿರ್ಮಾಣವಾಗಿತ್ತು. ಆ ವಿಶ್ವದಲ್ಲಿ ಬೇರೆ ಯಾವ ಸಂಗತಿಗೂ ಸ್ಥಾನವಿದ್ದಿಲ್ಲ.

ನೇಕರ ಸ್ಟೈನಾಚದಿಂದ ಹೈಲಬರ್ನದ ತನಕ ಅವರು ದೊಡ್ಡ ಹಡಗದಲ್ಲಿ ಪ್ರಯಾಣ ಮುಂದರಿಸಬೇಕಾಯಿತು. ಹೈಲಬರ್ನತನಕ ನದಿಯ ನೀರಿಗೆ ಆಳ ಹೆಚ್ಚುತ್ತ ಹೋಗಿತ್ತು. ದೊಡ್ಡ ಹಡಗದಲ್ಲಿ ಪ್ರವಾಸ ಮಾಡುವಾಗ ಅವರಿಬ್ಬರ ಆ ಸಂಪುಟ ವಿಶ್ವ ಹಿಂದೆ ಬಿದ್ದಿತ್ತು. ಮತ್ತು ಅವರಿಬ್ಬರ ವಿಶ್ವದೊಳಗಿಂದ ಅನೇಕ ವಿಶ್ವಗಳು ಉಂಟಾಗಿದ್ದವು. ಆ ಪ್ರವಾಸದಲ್ಲಿಯೂ ಅನ್ಯೋನ್ಯರಲ್ಲಿಯೆ ಅನುರಕ್ತರಾದ ಅನೇಕ ಯುಗ್ಮಗಳು ಇದ್ದವು. ಆ ದೊಡ್ಡ ಹಡಗವು ಪ್ರೇಮದ ಸಾಮ್ರಾಜ್ಯವನ್ನೆ ಯಾವದೋ ಚೆಲುವಿನ ನಡುಗಡ್ಡೆಗೆ ಮಧುಚಂದ್ರ ವಿಹಾರಕ್ಕಾಗಿ ಒಯ್ಯುತ್ತಿತ್ತು.

ಅವು ಸುಗ್ಗಿಯ ದಿನಗಳಾಗಿದ್ದವು. ಆಳೆತ್ತರದ ಪೈರು ಹೊಲ ಗಳಲ್ಲಿ ನಿಂತು ತಲೆದೂಗುತ್ತಿದ್ದವು. ನಡುವೆಯೆ ಫರ, ಬೀಚ, ಪಿನೊ ಗ್ರಾಡ ಮುಂತಾದ ಎತ್ತರದ, ಸೈವಹಬ್ಬಿದ, ಗೋಲಾಕಾರದ ಅಥವಾ ಗಿಡ್ಡ ಮರಗಳು ಇಣುಕುತ್ತಿದ್ದವು. ಹಳ್ಳಿ ಹತ್ತಿರ ಬಂದಂತೆ ಆ ಪೈರುಗಳ ಆಚೆಗೆ ನಿಂತ ಮನೆಗಳು ಕೆಲವು ಕಾಣ ಹತ್ತಿದವು. ಅವು ಇಳುಕಲಾದ ಹಂಚು ಹೊದಿಸಿದ ಮನೆಗಳು. ಅಲ್ಲಲ್ಲಿ ಒಂದು ಹೊಗೆಗಿಂಡಿ ಹವೆಯಲ್ಲಿ ಎತ್ತರಕ್ಕೆ ಕತ್ತೆತ್ತಿ ನಿಂತದ್ದೂ ತೋರುತ್ತಿತ್ತು. ಸಣ್ಣ ಮಕ್ಕಳು ದೊಡ್ಡವರ ಉದ್ದ ಟೊಪ್ಪಿಗೆ ಹಾಕಿಕೊಂಡಂತೆ ಈ ಮನೆಗಳು ಭಾಸವಾಗುತ್ತಿದ್ದವು. ಊರಲ್ಲಿ ಹೋಗುವದಾದರೆ ಹೊಲಗಳ ಮೇರೆಗಳ ಮೇಲಿಂದ, ಕಿರಿಯಗ ಲಾದ ಕಾಲು ದಾರಿಗಳ ಮೇಲಿಂದ ಹೋಗಬೇಕಿತ್ತು. ಇಂಥ ದಾರಿಯಲ್ಲಿ ನಡೆಯುವಾಗ ಭಾರತಿಯು ಆಲ್ಬರ್ಟನಿಗೆ ಒತ್ತಾಗಿ ಅಂಟಿಕೊಂಡು ನಡೆಯು ತ್ತಿದ್ದಳು. ಆಗ ಆಲ್ಬರ್ಟ ಅವಳ ಬೆರಳುಗಳಲ್ಲಿ ತನ್ನ ಬೆರಳುಗಳನ್ನೂ ಅಭಾ ವಿತವಾಗಿ ಸಿಲುಕಿಸಿದನು. ಆದರೆ ಅವಳು ತನ್ನ ಕೈಯನ್ನು ಅವನ ಕೈಯೊಳ ಗಿಂದ ಬಿಡಿಸಿಕೊಂಡಳು. ಮತ್ತು ತುಸು ದೂರದಿಂದ ನಡೆಯ ಹತ್ತಿದಳು. ಇದು ಆಲ್ಬರ್ಟನಿಗೆ ಸ್ವಲ್ಪವೂ ಸೇರಲಿಲ್ಲ. ಪ್ರವಾಸದಲ್ಲಿ ಅವಳು ಅವ ನೊಂದಿಗೆ ಸಲಿಗೆಯಿಂದ ನಡೆದಿದ್ದಳು. ಅಂದಾಗ ಈಗಲೆ ಈ ಪರಕೀಯತೆ ಯಿಂದ ಏಕೆ ನಡೆಯುವದು? ಅವಳ ಈ ಪರಕೀಯತೆಯ ವರ್ತನೆ ಅವನಿಗೆ ಚುಚ್ಚಿತು. ಆತ ಕಳವಳಗೊಂಡ.

ಆದರೆ ಸಂಜೆಗೆ ಮಾತ್ರ ಅವನ ಈ ಕಳವಳ ಎಲ್ಲೋ ಮಾಯವಾಗಿ ಬಿಟ್ಟಿತು. ತನ್ನ ಕೆಲಸ ಮುಗಿಸಿ ಆತ ತಮ್ಮ ಚಿಕ್ಕ ಬಂಗಲೆಗೆ ಬಂದನು. ಆಗ ಒಳ್ಳೆ ಸಂಜೆಯಾಗಿತ್ತು, ಸೂರ್ಯ ಎಂದು ಮುಳುಗಿದನೋ ಅವನಿಗೆ ಗೊತ್ತಾಗಲಿಲ್ಲ. ದಿನವಿಡೀ ಆತ ಕೆಲಸದಲ್ಲಿ ಇಷ್ಟು ತೊಡಗಿದ್ದನಲ್ಲ ತನ್ನೊಂದಿಗೆ ಒಬ ತರುಣ ಹುಡುಗಿ ಈ ಹಳ್ಳಿಗೆ ಬಂದಿದ್ದು ತಾನು ಅವಳ ಪ್ರೇಮದಲ್ಲಿ ಸಿಲುಕಿದ್ದೇನೆ, ಈ ಸಂಗತಿಯು ನೆನಪು ಕೂಡ ಅವನಿಗೆ ಆಗಲಿಲ್ಲ.

ಹೈಲಬರ್ನದಲ್ಲಿ ಆಲ್ಬರ್ಟನ ಕೆಲಸದ ಸ್ವರೂಪ ಒಳ್ಳೆ ಮೋಜಿನ ದಾಗಿತ್ತು. ಅವನ 'ಕ್ರುಪ್' ಕಂಪನಿಯು ಒಡೆಯ ಆಲ್ಫ್ರೆಡ್ ಕ್ರುಪ ಮಹಾ

ಜಟಿಲ ವ್ಯಕ್ತಿತ್ವದ ಜನ ಯುದ್ಧ ಸಾಹಿತ್ಯದ ಪ್ರಚಂಡ ಉತ್ಪಾದನೆ ಮಾಡುವ 'ಕ್ರುಪ್' ಕಾರಖಾನೆಗೆ ಆತ ಈಗಿನ ಒಡೆಯ. ಲೂಟಿ ಕೆಲಸಗಾರರ ಸುಲಿಗೆ, ಗುಲಾಮ ಕೂಲಿಕಾರರ ದುಡಿತದ ದುರುಪಯೋಗ ಇತ್ಯಾದಿ ಆರೋಪಗಳಿಗಾಗಿ ಅವನಿಗೆ ೧೯೪೫ರಲ್ಲಿ ೧೨ವರ್ಷದ ಶಿಕ್ಷೆ ಆಗಿತ್ತು. ಅವನ ಪ್ರಚಂಡ ಆಸ್ತಿ ಸೊತ್ತು ಎಲ್ಲ ಜಪ್ತಾಗಿತ್ತು. ಆಗ ಅವನ ಈ ಖಟ್ಲೆ ಪ್ರಪಂಚ ತುಂಬ ಪ್ರಸಿದ್ಧಿ ಪಡೆದಿತ್ತು. ಆದರೆ ಆತ ಭೋಗಿಸಿದ ಶಿಕ್ಷೆ ಸಾಕೆಂದು ನಿರ್ಣಯಿಸಿ ೧೯೫೧ ರ ಪ್ರಾರಂಭಕ್ಕೆ ಅವನ ಬಿಡುಗಡೆ ಮಾಡಲಾಯಿತು. ಆ ಮೇಲೆ ಎರಡೇ ವರ್ಷಗಳಲ್ಲಿ ಆತ ಪಶ್ಚಿಮದ ರಾಷ್ಟ್ರ ಶಕ್ತಿಗಳೊಂದಿಗೆ ಒಪ್ಪಂದ ಮಾಡಿಕೊಂಡಿದ್ದನು. ಆ ಒಪ್ಪಂದಿನ ಕರಾರಿನಂತೆ ಆತ ತಿರುಗಿ ೧೪೦ ಲಕ್ಷ ಡಾಲರು ಬೆಲೆಯ ಸೊತ್ತಿಗೆ ಒಡೆಯನಾಗಿದ್ದನು. ಈ ಇಷ್ಟು ಅಪಾರ ಸಂಪತ್ತಿನ ವಿನಿಯೋಗವೇನು ಮಾಡಬೇಕೆಂಬುದೇ ಅವನ ಇದುರಿನ ಪ್ರಶ್ನೆಯಾಗಿತ್ತು. ಯುದ್ಧ ನಡೆಯುತ್ತಿರುತನಕ ಯುದ್ಧ ಸಾಮುಗ್ರಿಯ ಕಾರಖಾನೆಗಳು ಹಗಲೂ ಇರುಳೂ ನಡೆಯುತ್ತಿದ್ದವು. ಆ ಕಾರಖಾನೆಗಳಲ್ಲಿ ಮನುಷ್ಯರನ್ನು ಕೊಲ್ಲುವ ಶಸ್ತ್ರಾಸ್ತ್ರಗಳು ತಯಾರಾಗುತ್ತಿದ್ದವು. ಆದರೆ ಈಗ ಯುದ್ಧ ಮುಗಿದಿತ್ತು. ಲಕ್ಷಾಂತರ ಮಂದಿಯ ಸಂಹಾರವಾಗಿತ್ತು. ಮಾನವೀ ಸಂಹಾರ ಮಾಡಿ ಮಾಡಿ ಈ ಶಸ್ತ್ರಗಳು ಈಗ ದಣಿದಿದ್ದವು ಶಸ್ತ್ರಾಸ್ತ್ರಗಳ ಕಾರಖಾನೆಗಳಲ್ಲಿ ಯಂತ್ರಗಳ ಕೆಲಸ ಸಾಗಿಸಲಿಕ್ಕೆ ಈಗ ಕೈಗಳು ಉಳಿದಿದ್ದಿಲ್ಲ. ಮಾನವತೆಯೇ ಮೃತ್ಯುಮುಖದಲ್ಲಿ ಬಿದ್ದಿತ್ತು. ಅಂದಾಗ ಕ್ರುಪ ಕಾರಖಾನೆಗಳಿಗೆ ಕೆಲಸವೇನು ಉಳಿಯಬೇಕು?

ಕ್ರುಪ್‌ನ ತಂದೆ ತೀರಿದನು. ಸ್ವತಃ ಆಲ್ಫ್ರೆಡ್ ಕ್ರುಪ್‌ನ ಮನಸ್ಸು ಯುದ್ಧೋಪಯೋಗಿ ಕಾರಖಾನೆಗಳಿಂದ ಹೊರಗೆ ಬಿದ್ದಿತ್ತು. ಭಾರಿ ದೊಡ್ಡ ಮಾನವ ಸಂಹಾರ ಅವನು ಕಣ್ಣಾರೆ ಕಂಡಿದ್ದನು ದಿನೇ ದಿನೇ ಆಲ್ಫ್ರೆಡ ಅಂತರ್ಮುಖನಾಗುತ್ತ ನಡೆದಿದ್ದನು. ಇತ್ತೀಚೆಗೆ ಈ ಮಹಾಶಯನಿಗೆ ಜಲಪರ್ಯಟನದ ಅಥವಾ ಬರ್ಫದ ಮೇಲಿಂದ ಜಾರುತ್ತ ನಡೆಯುವ ಛಂದ ವಿಪರೀತ ಅಂಟಿಕೊಂಡಿತ್ತು. ನಟನಟಿಯರ ಸಹವಾಸದಲ್ಲಿಯೂ ಆತನ ಕಾಲಕ್ಷೇಪ ನಡೆಯುತ್ತಿತ್ತು. ಒಂದು ಚಿತ್ರಪಟದ ಕೆಲಸವನ್ನು ಆತ ಕೈಗೊಂಡಿದ್ದ. ಅದರ ದೃಶ್ಯಗಳನ್ನು ಚಿತ್ರೀಕರಿಸಲಿಕ್ಕೆ ಅವನಿಗೆ

ಕೆಲವು ಪ್ರಕೃತಿರಮ್ಯ ಸ್ಥಳಗಳು ಬೇಕಾಗಿದ್ದವು. ಹೈಲಬರ್ನದಲ್ಲಿ ಅಂಥ ರಮ್ಯ ಸೌಂದರ್ಯ ಸ್ಥಳಗಳು ಇರುವವೆಂದು ಅವನಿಗೆ ಗೊತ್ತಿತ್ತು. ಆ ಕೆಲಸಕ್ಕಾಗಿ ಆತ ಆಲ್ಬರ್ಟನನ್ನು ಕಳುಹಿಸಿದ್ದನು

ಹೈಲಬರ್ನಕ್ಕೆ ಬಂದಮೇಲೆ ಬಹಳಷ್ಟು ನಿಸರ್ಗರಮ್ಯ ಸ್ಥಾನಗಳನ್ನು ನೋಡುವದಿತ್ತು. ಹದಿನೈದು ದಿನವಾದರೂ ಅವನು ಆ ಭಾಗದಲ್ಲಿ ಉಳಿಯುವದಿತ್ತು ದಿನವೆಲ್ಲ ಆತ ಒಬ್ಬನೇ ಅಲೆದಾಡುತ್ತಿದ್ದ. ಭಾರತಿಯನ್ನು ಬಿಟ್ಟು ಒಂದು ಕ್ಷಣವೂ ದೂರ ಹೋಗಕೂಡದೆಂದು ಅವನಿಗೆ ಅನಿಸುತ್ತಿತ್ತು. ಅವಳ ಸಹವಾಸದ ಸೆಳೆತ ಹೆಚ್ಚುತ್ತಲೇ ಇತ್ತು.

ಆದರೆ ತನ್ನ ಕೆಲಸ ಮುಗಿಸಿ ಆತ ಮನೆಗೆ ಮರಳಿದನೆಂದರೆ, ಅವನ ಅಂತಃಕರಣಕ್ಕೆ ಒಂದು ಅನನುಭೂತ ಆನಂದ ಉಕ್ಕಿ ಬರುತ್ತಿತ್ತು. ಏಕೆಂದರೆ ಮನೆಯಲ್ಲಿ ಭಾರತಿಯ ಸಹವಾಸ ಯಥೇಷ್ಟವಾಗಿ ತನಗೆ ಸಿಗುವದು ಎಂಬುದರ ಸುಖ ಅವನಿಗೆ ಅನಿಸುತ್ತಿತ್ತು. ಆ ಅವಳ ಸಹವಾಸದಲ್ಲಿ ಯಾವ ಯಾವ ದಟ್ಟ ಬಣ್ಣಗಳು ಬೆರಕೆ ಆಗಲಿವೆಯೆಂಬ ಊಹೆ ಆತ ಮನಸ್ಸಿನಲ್ಲಿಯೇ ಕಟ್ಟುತ್ತಿದ್ದನು.

ಆದರೆ ಇಂದು ಮುಂಜಾನೆ ಭಾರತಿಯು ಕಾಣಿಸಿದ ಸಿಡಿದು ನಿಂತಂಥ ವೃತ್ತಿ ಅವನಿಗೆ ತಾಪದಾಯಕವೆನಿಸಿತು. ಇಂದು ಮುಂಜಾನೆಯೇ ಆಕೆ ತನ್ನ ಕೈಯನ್ನು ಅವನ ಕೈಯೊಳಗಿಂದ ಬಿಡಿಸಿಕೊಂಡಿದ್ದು, ಮತ್ತು ತುಸು ದೂರದಿಂದ ನಡೆದದ್ದು; ಆಲ್ಬರ್ಟನಿಗೆ ಅದು ಎಳ್ಳಷ್ಟೂ ಸೇರಿದ್ದಿಲ್ಲ. ತನ್ನ ಸಹವಾಸ ಬೇಡವೆನಿಸುವ ತರುಣಿಯ ಸಾನ್ನಿಧ್ಯದಲ್ಲಿ ಇನ್ನೂ ಹೆಚ್ಚು ಕಾಲ ಕಳೆಯುವದರಲ್ಲಿ ಏನು ಸಾಧಿಸಿದಂತೆ ? ಆದ್ದರಿಂದ ತನ್ನ ಕೆಲಸವೆಲ್ಲ ಮುಗಿಸಿ ಮನೆ ಸೇರುವದೇನು ಹಾಳು—ಹೀಗೂ ಅವನ ಮನಸ್ಸಿಗೆ ಬರುತ್ತಿತ್ತು.

ಇಂಥ ದ್ವಿಧಾ ಮನಃಸ್ಥಿತಿಯಲ್ಲಿ ಆತ ಬಂಗಲೆಗೆ ಬಂದನು. ಆಗ ಅವನನ್ನು ಸ್ವಾಗತಿಸಲಿಕ್ಕೆ ಭಾರತಿಯು ಹೊರಗಿನ ವ್ಹರಾಂಡಾದಲ್ಲಿ ನಿಂತಿದ್ದಳು. ಅವಳು ನಕ್ಕು ಅವನನ್ನು ಸ್ವಾಗತಿಸಿದಳು. ಅವಳು ತನ್ನ ದಾರಿಯನ್ನೆ ನೋಡುತ್ತಿರಬೇಕು, ಎಂದು ಅವನಿಗೆ ಅನಿಸಿತು. ಅವನಿಗೆ ಆನಂದ

ವಾಯಿತು. ಮತ್ತು ಅವನ ಮನಸ್ಸಿನೊಳಗಿನ ಉದಾಸೀನತೆಯ ವಿಚಾರಗಳು ಎಲ್ಲಿಂದೆಲ್ಲಿಯೋ ಪಲಾಯನ ಮಾಡಿದವು.

ಅವರಿಗೆ ಉಳಿಯಲಿಕ್ಕೆ ನಾಲ್ಕು ಕೋಣೆಗಳ ಹಂಚಿನ ಬಂಗಲೆ ಸಿಕ್ಕಿತ್ತು. ಆ ಬಂಗಲೆಗೆ ಮೂರು ದಿಕ್ಕಿನಿಂದ ವ್ಹರಾಂಡಾ ಇತ್ತು. ಬಹಳ ದೊಡ್ಡ ಅಡುಗೆಯ ಮನೆ ಹಿಂದುಗಡೆಗೆ ಇತ್ತು. ಆ ಪಾಕಶಾಲೆಯ ಉದ್ದಕ್ಕೂ ಮುಂಬದಿಗೆ ಮೂರು ಚಿಕ್ಕ ಕೋಣೆಗಳನ್ನು ಕಟ್ಟಿತ್ತು. ಆ ಕೋಣೆಗಳ ಇದುರಿಗೂ ಉಳಿದ ಎರಡು ಮಗ್ಗಲಿಗೂ ವ್ಹರಾಂಡಾ (ಜಗಲಿ) ಗಳಿದ್ದವು.

ಆಲ್ಬರ್ಟನನ್ನು ಕಂಡೊಡನೆ ಭಾರತಿಯು ಅವನನ್ನು ನಗೆಮೊಗದಿಂದ ಸ್ವಾಗತಿಸಿದಳು. ಮತ್ತು ಒಳಗೆ ಅಡುಗೆಯ ಕೋಣೆಯೊಳಗೆ ಓಡಿದಳು. ತನ್ನ ಮೈ ಮೇಲಿನ ಬಟ್ಟೆಗಳನ್ನು ಹಾಗೆಯೇ ಇಟ್ಟು ಅವನು ಅವಳ ಬೆನ್ನಿಗೆ ಅಡುಗೆಯ ಕೋಣೆಗೆ ಹೋದನು. ಅದೇ ವೇಳೆಗೆ ಭಾರತೀ ಅಡುಗೆಯ ಮನೆಯಿಂದ ನಡುವಿನ ಕೋಣೆಗೆ ಬರುತ್ತಿದ್ದಳು. ಕೋಣೆಯ ಬಾಗಿಲಲ್ಲಿ ಇಬ್ಬರೂ ಒಬ್ಬರಿಗೊಬ್ಬರು ಇದಿರಾದರು. ಅವರ ಕಣ್ಣಿಗೆ ಕಣ್ಣು ಕೂಡಿದವು.

ಆಗ ಅದೆಷ್ಟು ಚಂದ ಕಾಣುತ್ತಿದ್ದಳು ಭಾರತೀ! ದಾಳಿಂಬದ ಬಣ್ಣದ ತೀರ ಸಾದಾ ಸೀರೆಯನ್ನು ಅವಳು ಉಟ್ಟಿದ್ದಳು. ಮತ್ತು ಅದೇ ಬಣ್ಣದ ಪ್ರತಿಬಿಂಬ ಅವಳು ಕೆನ್ನೆಗಳಲ್ಲಿ ಬಿದ್ದಿತ್ತು. ಅವಳ ಹುಬ್ಬು ತುಸು ಗೀರಿ ಇಟ್ಟಂತೆ ತೋರುತ್ತಿತ್ತು. ಮತ್ತು ಅವಳ ಕಣ್ಣು ಎರಲೆಯ ಕಣ್ಣುಗಳಂತೆ ಕಂಡವು. ಎಂಥ ವಿಲಕ್ಷಣ ಮಾದಕತೆ ಇತ್ತು ಅವಳ ಕಣ್ಣಲ್ಲಿ! ಅವಳ ಮೇಲಿನ ತುಟಿಯ ಮೇಲೆ ಒಂದು ಸೂಕ್ಷ್ಮ ಎಳ್ಳು ಇತ್ತು. ಅವಳ ಕೆಂದನೆಯ ಕೇಶಕಲಾಪವು ಕಿವಿಗಳ ಮೇಲಿಂದ ತುಸು ಕೆಳವರೆಗೆ ಇಳಿದಿದ್ದಿತು. ಅವಳ ಹಣೆಯ ಮೇಲೆ ಉಂಗುರು ಗುರುಳುಗಳು ತುಂಬಿಗಳು ಕಿಕ್ಕಿರಿದಂತೆ ತೋರುತ್ತಿದ್ದವು. ಅವುಗಳಲ್ಲಿ ಕೆಲವು ತುಂಟ ತುಂಬಿಗಳು ಅವಳ ಅಗಲವಾದ ಹಣೆಯ ಮೇಲೆ ಇಳಿದು ಅವಳ ಕಣ್ಣುಗಳಲ್ಲಿ ತಮ್ಮದೇ ಪ್ರತಿಬಿಂಬವನ್ನು ಕಂಡಂತೆ ಸಂಭ್ರಮ ಗೊಂಡಿದ್ದವು.

ಭಾರತಿಯ ಈ ಅನುಪಮ ಸೌಂದರ್ಯವನ್ನು ಇಷ್ಟು ಹತ್ತಿರದಿಂದ ಕಂಡಾಗ ಆಲ್ಬರ್ಟ ದಿಗಿಲುಗೊಂಡನು. ಅವನ ನೀಲ ಕಣ್ಣುಗಳಲ್ಲಿ ಪ್ರೀತಿಯ ಮಾದಕತೆಯು ಅರಿವಾಗುತ್ತಿತ್ತು. ಅವನ ನೀರಡಿಸಿದ ಕಣ್ಣುಗಳು ಭರಭರನೆ ಭಾರತಿಯ ಸೌಂದರ್ಯದ ರಸಪಾನವನ್ನೇ ಆರಂಭಿಸಿದವು. ಆತ ಅವಳನ್ನು ದಿಟ್ಟಿಸಿ ನೋಡುತ್ತಿದ್ದ ಮತ್ತು ಒಂದೊಂದೇ ಹೆಜ್ಜೆ ಮುಂದರಿಯುತ್ತಿದ್ದ. ಒಮ್ಮೆಲೇ ಅವನ ದೃಷ್ಟಿ ಅವಳ ತುಟಿಗಳ ಮೇಲೆ ಸ್ಥಿರವಾಯಿತು. ಅವಳ ತುಟಿಯ ಮೇಲಿನ ಆ ಎಳ್ಳನ್ನು ನೋಡಿ ಆತ ಮನಸ್ಸಿನಲ್ಲಿಯೇ ಅಂದನು. "ಅರೇ ! ಈ ಎಳ್ಳು ಈ ತನಕ ನನಗೆ ಹೇಗೆ ಕಂಡು ಬರಲಿಲ್ಲ ? " ಅದೇ ವೇಳೆಗೆ ಅದೇಕೋ ಏನೋ ಭಾರತಿಯು ಖಿಲಕ್ಕನೆ ನಕ್ಕಳು. ಅವನಿಗೆ ಕುಂದಕಲಿಕೆಗಳ ದರ್ಶನವಾಯಿತು.

ಆಗ ಮಾತ್ರ ಅವನ ಪ್ರಜ್ಞೆ ಜಾಗೃತವಾಯಿತು. ಅವನ ಮನಸ್ಸಿನ ಮೇಲಿನ ಹಿಡಿತ ಪೂರ್ತಿ ಹಾರಿತು. ಪ್ರೀತಿಯ ಮಂತ್ರದಿಂದ ಮುಗ್ಧನಾಗಿ ಆತ ಹೆಜ್ಜೆ ಎತ್ತಿದನು ಮತ್ತು ಮುಂದೆ ಸರಿದನು. ಆದರೆ ಅಷ್ಟರಲ್ಲಿ ಭಾರತಿಯು ಅವನತ್ತ ಬೆನ್ನು ಹೊರಳಿಸಿದಳು ಮತ್ತು ತಿರುಗಿ ಅಡುಗೆಯ ಕೋಣೆಯಲ್ಲಿ ಓಡುತ್ತ ಹೋದಳು.

ಆಗುವದಾದರೂ ಏನಿತ್ತು ?—

ಅವಳ ಬೆನ್ನ ಮಗ್ಗುಲ ಆಕೃತಿಯತ್ತ ನೋಡಿ ಆತ ಅಂದನು. "ನಾನೆಂಥ ಮೂರ್ಖ ! ನಾನೇಕೆ ಅವಳನ್ನು ಅಡ್ಡಗಟ್ಟಲಿಲ್ಲ ? ತೋಳತೆಕ್ಕೆಯಲ್ಲಿ ಅವಳನ್ನು ಬಿಗಿದೇಕೆ ಇಡಲಿಲ್ಲ ? ಪಟಪಟನೆ ಏಕೆ ಮುತ್ತಿಡಲಿಲ್ಲ ?

ಮತ್ತು ಆತ ಅಡುಗೆಯ ಕೋಣೆಯೊಳಗೆ ಹೋದನು. ಮತ್ತು ಅವಳ ಹತ್ತಿರ ಹೋಗಿ ನಿಂತನು. ಅನ್ಯೋನ್ಯ ಅನುರಕ್ತರಾದ, ಆದರೆ ಆ ಸಂಗತಿಯ ಪೂರ್ತಿ ಮನವರಿಕೆ ಇಲ್ಲದ ಇಬ್ಬರು ಪ್ರೇಮಿಕರು ಹತ್ತಿರ ಹತ್ತಿರ ನಿಂತಿದ್ದರು. ಪ್ರೇಮದ ಚದುರಂಗ ಪಟದ ಮೇಲೆ ಮೋಹದ ಪ್ಯಾದೆ ಮುಂದೆ ಸರಿಯಲು ಆತುರವಾಗಿತ್ತು.

ಭಾರತಿಗೂ ಇದೆಲ್ಲ ಅರಿವಾಗುತ್ತಿತ್ತು. ಭೀತಿ ಮತ್ತು ಪ್ರೀತಿ ಇವುಗಳ ಸಂಗಮ ಅವಳಲ್ಲಿ ಆಗಿತ್ತು. ಕೊಂಚ ಕುತ್ತಿಗೆ ಹೊರಳಿಸಿ ಆಕೆ

ಪರಿಸ್ಥಿತಿಯು ವೇಧವನ್ನು ತೆಗೆದುಕೊಂಡಳು. ಅವಳ ಈ ಕೊಂಕು ಕಟಾಕ್ಷದಿಂದಲೂ ಆತ ಪೂರ್ತಿ ಪರವಶನಾಗಿ ಬಿಟ್ಟ. ಆತ ಇನ್ನಿಷ್ಟು ಮುಂದೆ ಸರಿದ.

ಈಗೇನು ಮಾಡಬೇಕೆಂಬುದೇ ಆಲ್ಬರ್ಟನಿಗೆ ತೋಚಲಿಲ್ಲ.

ಆತ ಮೆಲ್ಲಗೆ, ಕರೆದನು. 'ಭಾರತೀ'.

ಅವನ ದನಿ ಆರ್ದ್ರವಾಗಿತ್ತು. ಅವನ ಗೊಗ್ಗರು ಕಂಠದಲ್ಲಿ ಪ್ರೀತಿಯ ಅಮಲು ಪೂರ್ತಿ ತುಂಬಿತ್ತು, ಅವನ ಕಡೆಗೆ ನೋಡಿದೆಯೆ ಭಾರತಿಯು ಬೆದರಿ ಕೇಳಿದಳು "ನಿನಗೇನು ಬೇಕು ?."

ಇದಕ್ಕೆ ಆಲ್ಬರ್ಟ ಅಂದನು. "ಛೀ ಛೀ! ಏನೂ ಬೇಡ! ಯಾಕೆ, ಏನು?"

ಮತ್ತು ಆತ ಬೆನ್ನ ಹಿಂದಿನಿಂದ ಒಮ್ಮೆಲೆ ಅವಳ ಕೊರಳಲ್ಲಿ ಕೈಗಳನ್ನು ತೊಡರಿಸಿದನು -ಅವಳ ಕನಸು ಮನಸ್ಸಿನಲ್ಲಿಯೂ ಇಲ್ಲದೆ !

ಅವಳು ಅವನ ಕೈಗಳನ್ನು ಬೆದರಿ ಬೆಚ್ಚಿಬಿದ್ದು ಕಿತ್ತೊಗೆದಳು. ಮತ್ತು ಕಕುಲಾತಿಯಿಂದ ಅಂದಳು, 'ನೀನು ಹೀಗೆ ಮಾಡಬೇಡ! ಛೀ, ಛೀ! ಬೇಡ, ಬೇಡವೇ ಬೇಡ ! ಇದೇನು ವಿಪರೀತ ? ಆದರೆ ಸಿಟ್ಟಾಗಬೇಡ ಮತ್ತೆ ನನ್ನ ಮೇಲೆ !"

ಹೀಗೆ ಅನ್ನುವಾಗ ಅವಳ ದನಿಯಲ್ಲಿ ಕಂಪ ತುಂಬಿತು. ಅವಳು ಈಗಲೇ ಅಳಲಿಕ್ಕೆ ಹತ್ತುವಳೆಂಬಂತೆ ಕಂಡಿತು.

ಆತ ಮತ್ತೆ ಹಗುರಾಗಿ ಕರೆದ, "ಭಾರತೀ" !

ಅವಳು ಒಮ್ಮೆಲೇ ಕಟ್ಟೆಗೆ ಅನಿಸಿಕೊಂಡು ಸೆಟೆದು ನಿಂತಳು. ಅವನ ಕಡೆಗೆ ಕಂಗೆಟ್ಟ ಕಣ್ಣಿನಿಂದ ನೋಡುತ್ತ ಅಂದಳು, "ಆಲ್ಬರ್ಟ, ನೋಡಿ ದೆಯಾ ? ನಾ ನಿನಗಾಗಿ ಏನು ತಯಾರಿಸಿದ್ದೇನೆ."

ಆಲ್ಬರ್ಟ ಉತ್ತರ ನೀಡಲಿಲ್ಲ. ಆತ ಬರೆ ಅವಳನ್ನು ಉನ್ಮತ್ತನಾಗಿ ದಿಟ್ಟಿಸುತ್ತಿದ್ದ. ಅವನಿಗೆ ಕೇವಲ ಅವಳ ಚೆಲುವು ಅರಿವಾಗುತ್ತಿತ್ತು. ಕೇವಲ ಭಾರತಿಯು ಕಾಣುತ್ತಿದ್ದಳು. ಅವಳ ಪ್ರಶ್ನೆ ಅವನ ತಲೆಯಲ್ಲಿ ಹೊಕ್ಕಿದ್ದೇ ಇಲ್ಲ. ಅವನ ಈ ನೋಟಕ್ಕೆ ಭಾರತಿ ಪೂರ್ತಿ ಹೆದರಿದಳು. ಆದರೆ

ವಿಷಯವನ್ನು ಬದಲಿಸಲಿಕ್ಕೆ ಅವನ ಕಣ್ಣು ತಪ್ಪಿಸಿ ಕೊಂಡು ಆಕೆ ಬೆನ್ನು ಹೊರಳಿಸಿದಳು, ಮತ್ತು ಮುಂದಿದ್ದ ಪ್ಯಾನ್‌ಸೊಳಗಿಂದ ಪೊಟೆಟೊ—ಪ್ಯಾಟೀಸ ತೆಗೆದಳು. ಅದನ್ನು ಅವನಿಗೆ ಕಾಣಿಸುತ್ತ ಅಂದಳು. "ಆಲ್ಬರ್ಟ ಇದು ನೋಡು ನಾನಿಂದು ನಿನ್ನ ಮೆಚ್ಚಿಗೆಯ ಬಟಾಟೆಯ ಪೆಟಿಸ್ ಮಾಡಿದ್ದೇನೆ!"

ಇಷ್ಟರಲ್ಲಿ ಆಲ್ಬರ್ಟ ಅವಳನ್ನು ಹಿಂದಿನಿಂದ ತನ್ನ ಬಾಹುಪಾಶದಲ್ಲಿ ಬಿಗಿದಪ್ಪಿ ಹಿಡಿದೇ ಬಿಟ್ಟನು. ಮತ್ತು ಅಂದನು "ಭಾರತೀ ನೀ ನನಗೆ ಮೆಚ್ಚಿಗೆ....ಬಲು ಬಲು ಮೆಚ್ಚಿಗೆ....ಬಟಾಟೆ ಪೆಟೀಸ್ ನೀ ತಿನ್ನು....ಇಂದು ನಾ ನಿನ್ನ ತಿನ್ನುತ್ತೇನೆ...."

ಅವನ ತುಟಿಗಳ ಸ್ಪರ್ಶ ಅವಳ ಬಿಳಿ–ಬಿಳಿಯಾದ ಕತ್ತಿನ ಮೇಲೆ ಅನಿಸುತ್ತಿತ್ತು. ಒಂದು ಕ್ಷಣ ಆ ಸ್ಪರ್ಶದಿಂದ ಭಾರತೀ ಮೈ ಮರೆತಳು ನಾಚಿದಳು, ನಿಮಿರಿದಳು. ಅವಳ ಕೆನ್ನೆಗಳಲ್ಲಿ ಕೆಂಪು ಹಬ್ಬಿತು. ಮರು ಕ್ಷಣಕ್ಕೆ ಆಕೆ ಗಾಬರಿಯಾಗಿ ಅಂದಳು. "ಆಲ್ಬರ್ಟ ಪ್ಲೀಜ ಬಿಡು ನನ್ನ. ಇದೇನು ನಿನ್ನ ಸಲ್ಲದ ಹಟ? ಹೀಗೆ ಮಾಡಬೇಡ! ಆಲ್ಬರ್ಟ ಪ್ಲೀಜ್ಸ....s"

ಆಲ್ಬರ್ಟ ಅವಳನ್ನು ತನ್ನ ಅಪ್ಪುಗೆಯೊಳಗಿಂದ ಒಮ್ಮೆಲೇ ದೂರ ಸರಿಸಿದನು. ಅವನು ಏನೂ ಅನ್ನಲಿಲ್ಲ. ತೆಪ್ಪಗೆ ನೊಂದ ಮೋರೆ ಮಾಡಿ ಕೊಂಡು ಭಾರವಾದ ಮಂದ ಹೆಜ್ಜೆ ಹಾಕುತ್ತ ಹಿಂದಕ್ಕೆ ತಿರುಗಿದನು ಅವನ ಆ ನಡೆತೆಯೂ ಅವಳಿಗೆ ಅಸಹ್ಯವಾಯಿತು. ಅವಳು ಓಡುತ್ತಲೇ ಅವನ ಬಳಿಗೆ ಹೋದಳು. ಮತ್ತು ಇಷ್ಟೇ ಅಂದಳು. "ಆಲ್ಬರ್ಟ!"

ಅವಳ ದನಿಯಲ್ಲಿ ಕಂಪನವಿತ್ತು.

ಆಲ್ಬರ್ಟ ಬರೆ ನೋಡಿದ. ತನ್ನ ದೃಷ್ಟಿ ಮತ್ತೆ ಅವಳತ್ತ ಹೊರಳಿಸಿದ. ಅವಳು ಕಾತರ ಸ್ವರದಲ್ಲಿ ಕೇಳಿದಳು. "ಆಲ್ಬರ್ಟ, ನನ್ನ ಮೇಲೆ ಕೋಪಿಸಿದೆಯೊ?"

ಅವಳ ಆ ಕಾತರ ದನಿಗೆ ಆಲ್ಬರ್ಟ ಕರಗಿದನು. ಆತ ಅಂದ, "ಛೇ ಛೇ! ನಾನೇಕೆ ನಿನ್ನ ಮೇಲೆ ಕೋಪಿಸಲಿ? ತಿರುಗಿ ನನಗೇ ಭಯವಾಯಿತು— — ನೀನೇ ಕೋಪ ಮಾಡಿಕೊಂಡಿಯೋ ಎಂದು!"

ಹೀಗೆಂದು ಆತ ಮುಗುಳು ನಗೆ ನಕ್ಕನು.

ಭಾರತಿ ತಟ್ಟನೆ ಅಂದಳು. "ಆಲ್ಬರ್ಟ, ನಾ ಬಲ್ಲೆ, ನಿನ್ನ ಭಾವನೆ. ಆದರೆ ನೀನು ನನ್ನ ಅರಿತು ಕೊ—ಅರಿತು ಕೊ."

ಹೀಗೆ ಅನ್ನುವಾಗ ಅವಳ ದನಿ ನಿಜವಾಗಿಯೂ ಅಳುಬರುಕವಾಯಿತು. ಕಟ್ಟು ಒಡೆದು ಕೋಡಿಪಡಿಯುವದೊಂದೇ ಉಳಿದಿತ್ತು.

ಅವಳ ಮಾತಿನಿಂದ ಆತ ತುಸುರೇಗಿದಂತೆ ಆಗಿದ್ದ. ಆದರೆ "ಆಲ್ಬರ್ಟ ನಾ ಬಲ್ಲೆ ನಿನ್ನ ಭಾವನೆ, ನನ್ನ ಅರಿತು ಕೊ...." ಎಂಬ ಅವಳ ಮಾತಿನಿಂದ ಅವಳ ಹೃದಯದಲ್ಲಿ ಪ್ರೀತಿಯ ತರಂಗಗಳು ಏಳುತ್ತಿದ್ದುದರ ಸಾಕ್ಷಿ ಅವನಿಗೆ ಸಿಕ್ಕಂತೆ ಆಯಿತು. ಮತ್ತು ಅವನ ಆಶೆಯ ತಳಿರು ಇನ್ನಿಷ್ಟು ನವಿರಾಯಿತು.

ನನ್ನ ಭಾವನೆಗಳನ್ನು ಈಕೆ ಅರಿತಿದ್ದಾಳೆಂತಾಯಿತು ! ಅವನಿಗೆ ಹಿತವೆನಿಸಿತು. ಅವನು ಭಾರತಿಯತ್ತ ನೋಡಿದನು. ತನ್ನ ನೋಟದಿಂದಲೆ ಅವಳನ್ನು ಮುದ್ದಾಡುತ್ತ ಆತ ಅಂದನು. "ಭಾರತೀ ನೀನು ನನ್ನವಳೇ, ಅಂದಾಗ ನಮ್ಮ ಮಂದಿಯ ಭಾವನೆ ನಾವು ಅರಿಯದಿದ್ದರೆ ಇನ್ನಾರು ಅರಿಯಬೇಕು ?

ಅವನ ಕಣ್ಣಲ್ಲಿ ಕೇವಲ ನಿರ್ಮಲ ಪ್ರೀತಿ ಇತ್ತು.

ಅವನ ಆ ನೋಟ ಅವಳಿಗೆ ಅದೆಷ್ಟು ಧೈರ್ಯ ನೀಡಿತು ! ಅವಳು ಮೇಜಿನ ಮೇಲೆ ತಿಂಡಿ ತಿನಿಸು ಇಡಲು ಆರಂಭಿಸಿದಳು. ಎಲ್ಲ ಪದಾರ್ಥಗಳನ್ನು ಇಟ್ಟಾಯಿತು. ಆಲ್ಬರ್ಟ ಒಂದೊಂದೇ ಪದಾರ್ಥದ ಬಟ್ಟಲನ್ನು ಎತ್ತಿ ನೋಡುತ್ತಿದ್ದ, ಅವನಿಗೆ ತನ್ನ ಮೆಚ್ಚಿಗೆಯ ಟೊಮೆಟೊ ಸೂಪ ಕಂಡಿತು ! ಆತ ಒಮ್ಮೆಲೆ ಕೂಗಿದ. 'ಓ ಟೊಮೆಟೊ ಸೂಪ ! ಭಾರತೀ ನೀನೆಷ್ಟು ಒಳ್ಳೆಯವಳು ! ಕೇವಲ ಇಂಗಿತಜ್ಞೆ. ನನ್ನ ಮನಸ್ಸು ಪೂರಾ ಅರಿತಿರುವಿ !"

ಅವನ ಆ ಮಾತಿನಿಂದ ಭಾರತೀ ತುಂಬ ಅರಳಿದಳು. ಅವಳ ಮನಸ್ಸಿನಲ್ಲಿ ಕವಿದ ಮಂಜೆಲ್ಲ ಕರಗಿ ಚೆದರಿ ಹೋಯಿತು. ಉಳಿದದ್ದು ಸ್ವಚ್ಛ

ತಿಳಿ ಬೆಳದಿಂಗಳು.... ಅವಳು ಖುಷಿಯಲ್ಲಿ ನಲಿದಳು. ಮೇಜಿನ ಬಳಿಗೆ ಖುರ್ಚಿ ಎಳೆದುಕೊಂಡು ಅವಳು ಕುಳಿತಳು. ಭಾರತಿಯ ಕಾಲು ತಿಳಿಯದೆ ಆಲ್ಬರ್ಟನಿಗೆ ತಾಗಿತು. ಆಲ್ಬರ್ಟ ತುಂಟತನದಿಂದ ಭಾರತಿಯ ಕಡೆಗೆ ನೋಡಿದ. ಅವನ ನೋಟದಲ್ಲಿ ಪ್ರಶ್ನೆಯಿತ್ತು, 'ಈಗ ಯಾರು ?'

ಭಾರತಿ ಒಮ್ಮೆಲೆ ನಾಚಿದಳು. ತುಟಿಗಳನ್ನು ಮೊಗ್ಗಿಯಂತೆ ಮುದುಡಿ ಅಂದಳು, 'ಸಾರಿ !'

ಆಲ್ಬರ್ಟನಿಗೆ ತುಂಬ ತಮಾಷೆ ಅನಿಸಿತು. ತುಸು ಹೊತ್ತು ಹಿಂದೆ ನಡೆದ ಘಟನೆಯ ವಿಷಾದವು ಪೂರ್ತಿ ಮನಸ್ಸಿನಿಂದ ದೂರವಾಯಿತು,

* * *

ಆಲ್ಬರ್ಟನ ನೋಟವು ಕಿಟಕಿಯ ಹೊರಗಡೆಗೆ ನಟ್ಟಿತ್ತು. ಕಿಟಕಿಯ ಕಾಜಿನೊಳಗಿಂದ ಹೊರಗೆ ದೂರದವರೆಗಿನ ಪ್ರದೇಶ ಕಾಣುತ್ತಿತ್ತು. ಚಂದ್ರ ಆಗ ತಾನೇ ಮೂಡುತ್ತಿದ್ದ. ಮತ್ತು ಇಡಿಯ ಸುತ್ತುಮುತ್ತು ಚಂದ್ರನ ಕೋಮಲ ಕಿರಣಗಳಲ್ಲಿ ಮಿಂದೆದ್ದಿತ್ತು.

ಕಿಟಕಿಯ ಹೊರಗೆ ಬೆರಳೆತ್ತಿ ತೋರಿಸಿ ಆಲ್ಬರ್ಟ ಅವಳಿಗೆ ಅಂದನು. "ಇದು ನೋಡು, ಆ ಎತ್ತರದ ಗಿಡವಿದೆಯಷ್ಟೇ. ಅದರಾಚೆಗೆ ಒಂದು ಮೀನದ ಆಕಾರದ ಕೆರೆ ಇದೆ....ಆ ಕೆರೆಯಲ್ಲಿ ಬಣ್ಣ ಬಣ್ಣದ ಮೀನು ಇವೆ. ಕೆರೆಯ ಸುತ್ತಲೂ ಮೀನಿನ ಆಕಾರದಲ್ಲಿಯೆ ಮರಗಳು ನಿಂತಿವೆ. ಕೆರೆಗೂ ಮೀನಿನ ಆಕೃತಿಯ ಕೆತ್ತನೆಗೆಲಸದ ಕಲ್ಲು ಸುತ್ತಲೂ ಹಾಸಿದೆ. ಬಹಳ ಚೆಂದವಿದೆ. ಆ "ಶೂಟಿಂಗ ಸ್ಪಾಟ ಒಂದೆರಡು ದಿನಗಳಲ್ಲಿಯೇ ನೋಡಲು ಹೋಗಬೇಕು ಆ ಸ್ಥಳವನ್ನು !"

ಆತ ತಡೆದನು. ಮತ್ತು ಕಿಟಕಿಯ ಹೊರಗಿಟ್ಟ ನೋಟವನ್ನು ಅವಳ ಮೇಲೆ ನಟ್ಟು ಅಂದನು, "ನೀನು ಬರುವೆಯಾ ?"

ಅವಳು ನಕ್ಕು ಅಂದಳು, "ಬರ್ತೇನಲ್ಲ! ಏಕೆ, ನಾನು ಬರಲಿಕ್ಕಿಲ್ಲವೆಂದು ನಿಮಗೆ ಅನಿಸಿತೇ ?"

ಆಲ್ಬರ್ಟ, "ಹಾಗಲ್ಲ ! ಆದರೇ...."

ಮುದ್ದಿನ ದನಿಯಲ್ಲಿ ಭಾರತಿ ಅಂದಳು. "ಹಾಗೆಲ್ಲದಿದ್ದರೆ ಇನ್ನು ಹೇಗೋ !"

ಅವಳ ಆ ಅವಿರ್ಭಾವವನ್ನು ನೋಡಿ ಆಲ್ಬರ್ಟನೂ ಹಿಗ್ಗಿದನು. ಮುಂದಕ್ಕೆ ಎರಗಿ ಅಂದು "ಗಲ್ಲ ಚಿವುಟಿ ಹೇಳಲೋ ಹೇಗೆಂದು ?"

ಭಾರತೀ ಗಲ್ಲ ಉಬ್ಬಿಸಿ ಅಂದಳು "ಏ, ಹೀಗೇನಾದರೂ ಮಾಡಿದಿಯಾದರೆ, ನಾ ಒಲ್ಲೆ, ಬಿಡು........"

"ಆಯ್ತು ಮಾರಾಯ್ತೀ! ನಮ್ಮ ಪಾಡು ನಮಗಿರಲಿ, ನಾವು ಹಾಗೇನೂ ಮಾಡುವದಿಲ್ಲ. ಸಂನ್ಯಾಸಿಯಂತೆ ಕೂತಿರುತ್ತೇನೆ. ಆಯಿತೇ ಹಾಗಾದರೆ? "

ಆಲ್ಬರ್ಟನ ಈ ಮಾತಿಗೆ ಭಾರತಿ ಮಂದವಾಗಿ ನಕ್ಕಳು. ಮನಸ್ಸಿನಲ್ಲಿಯೆ ಅಂದಳು," ಓ, ಇವನಿಗೆ ಕೋಪವೂ ಚೆಂದವಾಗಿಯೇ ಬರುತ್ತದೆ!"

ಅವನ ಕೋಪ ನೀಗಿಸಲಿಕ್ಕೆ ಆಕೆ ಅಂದಳು, "ನಾವು ಆ ಮೀನಿನ ಕೆರೆಯನ್ನು ನೋಡೋಣ. ಆದರೆ ಇಂದು ನಿನ್ನ ಮೆಚ್ಚಿಗೆಯ ಟೊಮೆಟೊ ಸೂಪ ಮಾಡಿಸಿದ್ದೇನೆ. ಈ ಬಟಾಟೇ-ಪೆಟೀಸ್, ಮತ್ತು ಈ ಫ್ರಾಯ್ ಮಾಡಿದ ಮೀನು! ಇದೆಲ್ಲ ಮೊದಲು ತಿಂದಾದರೂ ನೋಡು, ನಾವು ಭಾರತದಲ್ಲಿ ಇಂಥ ಪದಾರ್ಥಗಳನ್ನು ನಮ್ಮ ಮನೆಯಲ್ಲಿ ದಿನಾಲು ಮಾಡುತ್ತೇವೆ ನಮ್ಮ ಭಾಗದಲ್ಲಿಯಂತೂ ಮೀನಿಗೆ ಕೊರತೆಯೇ ಇಲ್ಲ! "

ಈಗ ಭಾರತೀ ಮಾತಾಡುತ್ತಿದ್ದಳು. ಅವನು ಮಾತಾಡುತ್ತಿದ್ದಿಲ್ಲ. ಭಾರತಿಯ ನಡತೆ ಕಡಿದು ಬಿಟ್ಟಂತೆ ಕಾಣುತ್ತಿತ್ತು ಆದರೆ ಮಾತು ಮಾತ್ರ ಸವಿ ಸವಿಯಾಗಿ ಆಡುತ್ತಿದ್ದಳು. ಕೇವಲ ಬಾಯಲ್ಲಿ ಮೆಲ್ಲುವ ಕಲ್ಲು ಸಕ್ಕರೆಯಂತೆ! ಮಾತಾಡುವಾಗ ಆಕೆ ನಡು ನಡುವೆ ನಗುತ್ತಿದ್ದಳು. ಆದರೆ ಆಲ್ಬರ್ಟ ಮುನಿದಂತೆ ಕೂತಿದ್ದನು. ಅವನಿಗೆ ಏನು ಬೇಕಿತ್ತೋ ಅದೇ ಸಿಗುತ್ತಿದ್ದಿಲ್ಲ! ಆದ್ದರಿಂದ ಆತ ತುಸು ಅಸ್ವಸ್ಥನಾಗಿದ್ದನು. ಗಾಬರಿಗೊಂಡಿದ್ದನು.

ಭಾರತೀ ಅವನ ಇದುರಿಗೇ ಕುಳಿತಿದ್ದಳು. ಅವಳ ಕಾಲಿನ ಸ್ಪರ್ಶ ಅವನಿಗೆ ನಡು ನಡುವೆ ಆಗುತ್ತಿತ್ತು. ಆದರಿಂದ ಆಲ್ಬರ್ಟ ಇನ್ನಿಷ್ಟೂ

ಅಸ್ವಸ್ಥನಾಗುತ್ತಿದ್ದ. ಭಾರತಿಯ ಸ್ಪರ್ಶದಿಂದ ಅವನ ಮನಸ್ಸು ಕರಗುತ್ತಿತ್ತು. ಎದುರಿಗೆ ಜೇನಿನ ಹುಟ್ಟು ತೂಗುತ್ತಿರುವಾಗ ಜೇನ್ನೊಣ ಎಂದಾದರೂ ಸ್ವಸ್ಥ ಕೂತಿರಬಹುದೇ? ಆಲ್ಬರ್ಟನ ಸ್ಥಿತಿಯೂ ಹಾಗೆಯೇ ಆಯಿತು! ಆತ ಒಮ್ಮೆ ಅವಳ ಕಡೆಗೆ ನೋಡಿದನು. ಅವಳೂ ಸಹಜವಾಗಿ ಅವನ ಕಡೆಗೆ ನೋಡಿದಳು. ಆ ಅನಾಹೂತವಾಗಿ ಕೂಡಿದ ನಯನ ಮಿಲನದಿಂದ ಆಲ್ಬರ್ಟನ ಮನದಲ್ಲಿ ವಿಲಕ್ಷಣ ಕೋಲಾಹಲವೆದ್ದಿತು. ಅವನ ಮನಸ್ಸಿನಲ್ಲಿ ದ್ವಂದ್ವವೇ ನಡೆದಿತ್ತು. ಅವನ ಒಂದು ಮನಸ್ಸು ಹೇಳುತ್ತಿತ್ತು, 'ಎಲೋ, ಇನ್ನಾದರೂ ಈ ಮೋಹದಿಂದ ದೂರವಿರು. ಈ ಮೋಹದ ಸುಳಿಯಲ್ಲಿ ಸಿಲುಕಿದಿಯಾದರೆ ನಿನ್ನ ಘಾತವೇ ಆದೀತು!" ಆದರೆ ಇನ್ನೊಂದು ಮನಸ್ಸು ಗಾಬರಿಯಾಗಿ ಅನ್ನುತ್ತಿತ್ತು "ಛೀ ಹುಚ್ಚಾ, ನೀನು ನಿಜವಾಗಿಯೂ ಮೂರ್ಖ! ಅಲ್ಲೋ, ತರುಣರು ಇದುರಿಗೆ ತಾನಾಗಿ ಬಂದ ಮೋಹದ ಬಟ್ಟಲನ್ನು ತುಟಿಗೆ ಹಚ್ಚಬಾರದೆಂದರೆ, ಯಾರು! ಮುದುಕರು ಹಾಗೆ ಮಾಡಬೇಕೇ? ಅರೇ, ಎಂಥ ಸುಂದರ ಸಂಧಿ ಒದಗಿ ಬಂದಿದೆ. ಅದನ್ನು ಕಳೆದುಕೊಂಡು, ನಡೆದು ಬಂದ ಸುಖವನ್ನು ಒದೆಯ ಬೇಡ!''

ಮತ್ತು ಈ ದ್ವಂದ್ವದಲ್ಲಿ ತರುಣ ಮನಸ್ಸಿನ ದನಿಯು ಘೋರ್ಗರೆವ ಬಿರುಗಾಳಿಯಂತೆ ಬೆಳೆಯುತ್ತ ಹೋಯಿತು! ಅಷ್ಟರಲ್ಲಿ ಭಾರತಿಯು ಎದ್ದಳು. "ನೋಡಲ್ಲ. ಚಮಚಿ ತೆಗೆದುಕೊಳ್ಳಲು ಮರೆತೇ ಹೋದೆ. ಆ ಗಡಿ ಬಿಡಿಯಲ್ಲಿ ಅವಳ ಸೆರಗು ಜಾರಿತು ಮತ್ತು ಆಲ್ಬರ್ಟನ ತರುಣ ಮನಸ್ಸಿಗೆ ಅದೊಂದು ಆಹ್ವಾನವೇ ಸಿಕ್ಕಂತೆ ಆಯಿತು. ಆತ ಪ್ರೇಮಮೇಲಿ ಬಂದಂತೆ ದಿಗ್ಗನೆ ಎದ್ದನು ಮತ್ತು ಅವಳ ಪಕ್ಕದಲ್ಲಿ ಹೋಗಿ ಕೂತನು. ಕೂತಲ್ಲಿಂದಲೆ ಅವಳನ್ನು ಹತ್ತಿರಕ್ಕೆ ಎಳೆದುಕೊಳ್ಳುತ್ತ ಆತ ಅಂದನು. "ಭಾರತೀ, ನೀ ನನಗೆ ಬಹಳ ಸೇರುತ್ತೀ,.... ಬಹಳ ಸೇರುತ್ತೀ....ಎಷ್ಟೆಂದು ಹೇಳಲಿ? ''

–ಹೀಗೆ ಹೇಳುತ್ತ ಆತ ಅವಳ ಮೋರೆಯನ್ನು ಚಟ್ಟನೆ ತನ್ನ ಕಡೆಗೆ ಹೊರಳಿಸಿದನು. ತನ್ನ ಎಡಗೈಯಿಂದ ಅವಳನ್ನು ಬಿಗಿದಪ್ಪಿದನು. ಅವನ ಅಪ್ಪಿಗೆಯೊಳಗಿಂದ ಬಿಡಿಸಿಕೊಳ್ಳಲು ಅವಳು ಹೆಣಗಿದಳು. ಆದರೆ ಅವನ

ಆ ಮೊಸಳೆಯ ಹಿಡಿತವನ್ನು ಆ ಕೋಮಲಾಂಗಿಯು ಬಿಡಿಸಿಕೊಳ್ಳಲು ಶಕ್ಯಳಾಗಲಿಲ್ಲ. ಆಕೆ ಬರೆ ಬಾಯಿಂದ ಗೊಣಗಿದಳು. "ಬೇಡವೊss, ಬೇಡವೋss. ಅವಳ ಎಡ ಮಗ್ಗಲಲ್ಲಿ ನಟ್ಟ ಬೆರಳುಗಳು ಮುಂದೆ ಮುಂದೆ ಸರಿಯುತ್ತಿದ್ದವು. ಮತ್ತು ಮುಟ್ಟಬಾರದ ಸ್ಥಳದಲ್ಲಿ ನಟ್ಟಿ ನಿಲ್ಲಲು ನೋಡುತ್ತಿದ್ದವು. ಆಲ್ಬರ್ಟ ಅವಳನ್ನು ಇನ್ನಿಷ್ಟು ಹತ್ತಿರಕ್ಕೆ ಎಳೆದನು.

ಆತನು ಅಂದನು ''ಈಗ ನಾನು ನಿನ್ನ ಯಾವ ಮಾತನ್ನೂ ಕೇಳಲಾರೆ ನೋಡು"! ಚಟ್ಟನೆ ಅವಳ ಗದ್ದವನ್ನು ಆತ ಮೇಲಕ್ಕೆತ್ತಿದನು. ಬಾಯಿಂದ ಗೊಣಗುತ್ತಿದ್ದನು, "ಮಾಯ್ ಸ್ವೀಟ ಡಾರ್ಲಿಂಗ್" ಮತ್ತು ಹುಚ್ಚನಂತೆ ಒಂದೇ ಸವನೆ ಅವಳನ್ನು ಮತ್ತೆ ಮತ್ತೆ ಮುತ್ತಿಡ ಹತ್ತಿದನು. ಭಾರತಿಗೆ ಒಂದು ಕ್ಷಣದ ಬಿಡುವೂ ಆತ ನೀಡಲಿಲ್ಲ. ಅವಳು ದೂರ ಸರಿಯುವ ಪ್ರಯತ್ನ ಮಾಡಿದಳು. ಆದರೆ ಅದು ನಿಷ್ಫಲವಾಯಿತು. ಅವನ ಆ ಧೀರ್ಘ ಚುಂಬನಗಳಿಂದ ಆಕೆ ಅಕ್ಷರಶಃ ಉಸಿರುಗಟ್ಟಿ ಹೋದಳು. ಸಹನವಾಗದೆ ಅವಳು ಬಾಯಿಯಿಂದ "ಈsss!" ಎಂದು ದೀರ್ಘ ಚೀತ್ಕಾರ ತೆಗೆದಳು. ಆತ ಮೃದುವಾಗಿ ಕೇಳಿದ. "ಏನಾಯಿತು?" ಅವಳು ಒಮ್ಮೆಲೆ ಅವನ ಕಡೆಗೆ ನೋಡಿದಳು. ಅವನ ಕಣ್ಣಿನಲ್ಲಿ ಒಂದು ಸಮಾಧಾನ ಕಂಡಿತು. ಮರುಕ್ಷಣವೆ ತುಂಟತನ ಅಲ್ಲಿ ತೇಲಾಡಿತು. ಅವಳು ಮುದ್ದಿನಿಂದ ಕೇಳಿದಳು. "ಇದೇನೋ ಹೀಗೆ?

ಆತ ತಟ್ಟನೆ ಕೇಳಿದ, "ಹೀಗೆಂದರೆ ಹೇಗೆ"?

ಅವನ ಪ್ರಶ್ನೆಯಿಂದ ಆಕೆ ನಾಚಿದಳು. ಮತ್ತು 'ನಾ ವೊಲ್ಲೆ ಹೋಗು' ಎನ್ನುತ್ತ ಅವನ ಮಗ್ಗಲಲ್ಲಿ ಇನ್ನಿಷ್ಟು ಒಲಿದಳು. ಅವನ ಹಿಡಿತ ಇನ್ನಿಷ್ಟು ಬಿಗಿಯಾಯಿತು. ಅವನು ತನ್ನ ಬಾಯಿಯನ್ನು ಅವಳ ಕಿವಿಯ ಹತ್ತಿರ ಸರಿಸಿದನು ಮತ್ತು ಮೆಲ್ಲಗೆ ಪಿಸುಗುಟ್ಟನು. "ಭಾರತೀ ನೆನಪಿದೆಯೇ ನಿನಗೆ ಆ ಸಂಜೆ"?

ಅವನ ಆ ಪ್ರಶ್ನೆಯಿಂದ ಎಚ್ಚರ ಬಂದಂತೆ ನಟಿಸಿ ಭಾರತಿಯೆಂದಳು. "ಆಲ್ಬರ್ಟ, ಬಿಡು ನನ್ನ! ಹೀಗೇಕೆ ಮಾಡುತ್ತೀ? ಹೀಗೆಲ್ಲ ನಡೆಯು ಬೇಡಪ್ಪಾ!"

ಆತ ಅವಳಿಗೆ ಕೇಳಿದ, "ಭಾರತಿ, ತೀರ ನಿಜವನ್ನೆ ಹೇಳು. ಇಂತಹ ದೇನೂ ನಿನಗೆ ಸೇರುವದಿಲ್ಲ"?

ಅವನ ಈ ಪ್ರಶ್ನೆಯಿಂದ ಅವಳು ಗೊಂದಲಗೊಂಡಳು, ಬೆದರಿದಂತಾ ದಳು. ಅವಳೆಂದಳು, "ಏ, ನೀನೇಕೆ ನನ್ನ ಅರಿತು ಕೊಳ್ಳುವದಿಲ್ಲ? ನನ್ನ ತಾಯ್ನಾಡನ್ನು ಬಿಟ್ಟು ನಾನು ಇಲ್ಲಿ ಬಂದದ್ದು ನಿಮ್ಮೆಲ್ಲರ ನಂಬಿಗೆಯಿಂದ! ಮತ್ತೆ ನೀನು ಇದೇನು ಹೀಗೆ ಮಾಡುವಿ? ಅಲ್ಲಾ, ಹೀಗೆ ನಡೆಯುವಾಗ ನೀನು ನನ್ನ ಮನಸ್ಸಿನ ವಿಚಾರ ಮಾಡಿದೆಯಾ? ಆಲ್ಬರ್ಟ, ನಾನು ಭಾರತೀ ಯಳು. ಕುಮಾರಿಯಾಗಿದ್ದಾಗ ಹೀಗೇನಾದರೂ ಮಾಡುವದು ನಮಗೆ ಪಾಪ ವೆನಿಸುವದು! ನಮಗೆ, ಕುಮಾರಿಕೆಗಳಿಗೆ ಅಮೂಲ್ಯ ಧನವೆನಿಸುವ ವಸ್ತುವನ್ನು ನೀನು ಮನ, ಮಾನೆ ಲೂಟಿ ಮಾಡುವಿ!-ಪ್ರೇಮದ ಹೆಸರಿನಲ್ಲಿ! ಅಲ್ಲಾ, ನಾವು ಭಾರತೀಯ ತರುಣಿಯರು ಪ್ರೇಮಿಸುತ್ತೇವೆ. ಆದರೆ ಅದು ಮನಸ್ಸಿನಿಂದ! ದೇಹದಿಂದ ಅಲ್ಲವೆ ಅಲ್ಲ!

ಅವನು ಅವಳನ್ನು ತನ್ನ ಆಲಿಂಗನದಿಂದ ಭಾರವಾದ ಮನಸ್ಸಿನಿಂದ ಬಿಡುಗಡೆ ಮಾಡಿದನು ಮತ್ತು ಅಂದನು, "ನಿಮ್ಮ ಭಾರತೀಯ ತರುಣಿಯರ ಪ್ರೇಮದ ತತ್ವಜ್ಞಾನವನ್ನು ನನಗೆ ಹೇಳುವದು ಬೇಡ! ನಿನ್ನ ಭಾರತೀಯ ತರುಣಿಯರು ನನಗೆ ಒಳ್ಳೆ ಪರಿಚಿತರಿದ್ದಾರೆ. ನಾನು ನಿಮ್ಮ ಸಂಸ್ಕೃತ ಸಾಹಿತ್ಯ ಬಹಳ ಓದಿದ್ದೇನೆ. ಆ ಸಾಹಿತ್ಯದಲ್ಲಿಯ ಭಾರತೀಯ ಸ್ತ್ರೀಯರ ಆದರ್ಶವನ್ನು ನಾನು ನೋಡಿದ್ದೇನೆ. ನಿಮ್ಮ ಕುಂತೀ ನನಗೆ ಗೊತ್ತು, ಶಕುಂತಲೆಯೂ ಗೊತ್ತು, ಮತ್ತು ನಮ್ಮ ವ್ಹರ್ಜಿನ್ ಮೇರಿಯೂ ಚೆನ್ನಾಗಿ ಗೊತ್ತು. ಅಲ್ಲೇ, ಪ್ರಪಂಚದಲ್ಲಿ ಎಲ್ಲೂ ಹೋಗು. ಪ್ರೇಮದ ಸಮೀಕರಣ ಗಳು ನಿನಗೆ ಎಲ್ಲ ಕಡೆಗೂ ಒಂದೇ ಸಮ ಕಾಣುವವು! ಸುಮ್ಮನೆ ನಾವು ಭಾರತೀಯ ತರುಣಿಯರು - ಎಂಬೆಲ್ಲ ತಕರಾರು ತೆಗೆಯಬೇಡ! ಹೇಳು ನೋಡುವಾ. ಶಕುಂತಲೆ ಪ್ರೇಮ ಮಾಡಿದ್ದಿಲ್ಲವೇ? ಉಷೆ ಅನಿರುದ್ಧನ ಮೇಲೆ....ಗೌರಿ ಶಿವನ ಮೇಲೆ ..ಸೀತೆ ರಾಮನ ಮೇಲೆ.....

"ಸರಿ....ಸರಿ....ಸರಿ" ಅವನನ್ನು ನಡುವೆಯೆ ತಡೆದು ಭಾರತಿ ಅಂದಳು. "ಅಲ್ಲೊ, ನನಗೆ ಎಷ್ಟು ಸಾಮಾನ್ಯಗಳನ್ನು ಹೇಳಲು ಹೊರಟಿರುವಿ?

ಆದರೆ ಇವರೆಲ್ಲರೂ ತಮ್ಮ ಪ್ರಿಯಕರನಿಗೆ ಮನಸ್ಸು ಕೊಟ್ಟಿದ್ದರು ಮತ್ತು ಆಮೇಲೆ ತಮ್ಮ ತನುಲತೆ !"

"ಅಂದರೆ? ನೀನು ನನಗೆ ನಿನ್ನ ಮನಸ್ಸು ಕೊಟ್ಟಿದ್ದೀ ಇಲ್ಲ ಹಾಗಾದರೆ"?

ಆತ ಒಂದು ಗಂಭೀರ ನಿಟ್ಟುಸಿರು ಬಿಟ್ಟ. ಅವನ ನಿಟ್ಟುಸಿರಿನಲ್ಲಿಯ ಅಸಂತೋಷ ಅವಳಿಗೆ ಅನಿಸಿತು. ಭಾರತೀ ಕ್ಷಣ ಕಾಲ ಗೊಂದಲ ಗೆಟ್ಟಳು. ತನ್ನದು ಏನೋ ಎಲ್ಲೋ ತಪ್ಪಿತು, ನಿಜ, ಇಷ್ಟು ಅವಳಿಗೆ ಅರಿವಾಯಿತು.

ಅವಳ ಮನಸ್ಸು ಅವಳ ವಿರುದ್ಧ ಬಂಡೆದ್ದಿತು. ಅದು ಅಂದಿತು, ನಿಜವನ್ನೇ ಹೇಳು, ಭಾರತೀ, ನೀನು ನಿನ್ನ ಮನಸ್ಸನ್ನು ಆಲ್ಬರ್ಟನಿಗೆ ಕೊಟ್ಟಿಲ್ಲ ? ನೀನು ಅವನ ಪ್ರೇಮದಲ್ಲಿ ಸಿಲುಕಿಲ್ಲ ? ನಿನಗೆ ಆಲ್ಬರ್ಟ ಬೇಕೆಂದು ಅನಿಸುವದಿಲ್ಲ ? ಹಾಗಾದರೆ ನಿನ್ನ ಪ್ರೇಮವನ್ನು ಏಕೆ ಅಲ್ಲಗಳೆಯುವಿ ? ಕೇಳು ನಿನ್ನ ಮನಸ್ಸನ್ನು !

ಅವಳಿಗೆ ತನ್ನ ಪ್ರೇಮವನ್ನು ಅಲ್ಲಗಳೆಯಲು ಆಗಲಿಲ್ಲ. ಮನವಾರೆ ಆತ ಅವಳಿಗೆ ಬಹಳ ಬಹಳ ಬೇಕೆನಿಸುತ್ತಿದ್ದ. ಆದರೆ ಅವಳ ಅಂಜುಬುರುಕ ಅಳುಕಿನ ಸ್ವಭಾವ ಅವಳನ್ನು ದೂರ ದೂರ ಜಗ್ಗುತ್ತಿತ್ತು. ಈಗಲೂ ಆಲ್ಬರ್ಟನ ಅಸಂತೋಷ ನೋಡಿ, ಹೀಗೆಯೇ ಓಡಿ ಹೋಗಿ ಅವನ ಕೊರಳಿಗೆ ತೆಕ್ಕೆ ಬಿದ್ದು "ಅರೇ, ನನ್ನ ಮನಸ್ಸು ಎಂದೋ ಕದ್ದು ಓಡಿದಿ ಮತ್ತೆ ತಿರುಗಿ ನನ್ನನ್ನೇ ಕೇಳುತ್ತೀಯಾ ?" ಎಂದೆನ್ನಬೇಕು ಎನಿಸಿತು. ಆದರೆ ಅವಳ ದೇಶದ ನೀತಿಬಂಧನಗಳು ಅವಳಿಗೆ ಹಾಗೆ ಮಾಡಲು ಕೊಡುತ್ತಿದ್ದಿಲ್ಲ. ಅವಳ ಮನಸ್ಸಿನೊಳಗಿನ ಕನಸು ಮನಸ್ಸಿನಲ್ಲಿಯೇ ಆರುತ್ತಿದ್ದವು. ಅವಳು ಅವನಲ್ಲಿ ಪ್ರೇಮ ಮಾಡುತ್ತಿದ್ದಳು. ಇಷ್ಟೇ ಅಲ್ಲ, ಅವಳು ಅವನಲ್ಲಿ ಪೂರ್ತಿ ಅನುರಕ್ತಳಾಗಿದ್ದಳು. ಆದರೆ ಅವಳಿಗೆ ಅವನ ಪ್ರೇಮದ ಆಶ್ವಾಸನೆ ಬೇಕಿತ್ತು. ಇಬ್ಬರ ದೇಹಗಳ ನಡುವಿನ ದೂರತ್ವ ಇಲ್ಲವಾಗುವದಕ್ಕೆ ಮುಂಚೆ, ಮನಸ್ಸುಗಳ ನಡುವಿನ ದೂರತ್ವ ಕರಗಿ ಹೋದ ಬಗೆಗೆ ಭರವಸೆ ಬೇಕಾಗಿತ್ತು. ಅವಳು ನಗುನಗುತ್ತ ಅಂದಳು. "ಆದರೆ ನಾನು ನನ್ನ ಮನಸ್ಸು ನಿನಗೆ

ಕೊಟ್ಟಿನೋ ಕೊಟ್ಟಿಲ್ಲವೋ–ಅದರ ಸ್ಪಷ್ಟ ಕಬೂಲಿಯ ಜವಾಬು ಯಾವಾಗ ಕೊಟ್ಟಿದ್ದುಂಟು ?"

ಅವಳ ಮನಸ್ಸಿನೊಳಗಿನ ಕ್ಷಣ ಕಾಲದ ಬಂಡಾಯದಿಂದ ಆಕೆ ತುಸು ತುಂಟಳಂತೆ ಆಗಿದ್ದಳು. ಅವಳ ಆ ತುಂಟತನ ಕಂಡು ಆಲ್ಬರ್ಟ ಹಿಗ್ಗಿದನು. "ಹೂವಿನ ಕಂಪು ನಾಜೂಕಾಗಿಯೇ ಹೀರಬೇಕು." ಎಂದು ಮನದಲ್ಲಿಯೆ ಪಿಸುಗುಡುತ್ತ ಆತ ಒಮ್ಮೆಲೆ ನಕ್ಕನು. ಅವನ ಮನಸ್ಸಿನೊಳಗಿನ ಶಂಕೆ ಕುಶಂಕೆಗಳ ಕಾರ್ಮೋಡಗಳೆಲ್ಲ ಮಾಯವಾದವು. ಆತ ನಗುತ್ತ ಅಂದ," ಕಬೂಲಿಯ ಜವಾಬು? ಅಲ್ವೇ ಪ್ರೇಮದ ವ್ಯವಹಾರಗಳೆಲ್ಲ ಗಣಿತದಂತೆ ಆಗುತ್ತವೆಯೇ ? ಗಣಿತ ಬಿಡಿಸುವಾಗ ಅದರ ಒಂದೂ ಹೆಜ್ಜೆ ತಪ್ಪಬಾರದು. ಇಲ್ಲವಾದರೆ ಗಣಿತವೇ ತಪ್ಪಿ ಹೋಗುತ್ತದೆ. ಆದರೆ ಇಲ್ಲಿ ಈ ಪ್ರೇಮದ ಗಣಿತದಲ್ಲಿ ಒಂದು ಹೆಜ್ಜೆ ತಪ್ಪಿದರೂ ನಡೆಯುತ್ತದೆ. ಇಷ್ಟೇ ಅಲ್ಲ; ಒಂದೆರಡು ಹೆಜ್ಜೆ ತಪ್ಪಿ ಹೋದರೆ ನಾವು ಉತ್ತರಕ್ಕೆ ಹೆಚ್ಚು ಹತ್ತಿರ ಬರುತ್ತೇವೆ!"

ಭಾರತೀ ಅವನ ಕಡೆಗೆ ಕೌತುಕದಿಂದ ನೋಡುತ್ತ "ಎಷ್ಟು ಚೆಂದ ಮಾತಾಡುತ್ತಾನೆ !" – ಎಂಬ ಭಾವ ಅವಳ ಕಣ್ಣಿನಲ್ಲಿ ತುಂಬಿ ತುಳುಕಾಡುತ್ತಿತ್ತು.

ಆತ ತಟ್ಟನೆ ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದು ಕೊಂಡನು. ಮತ್ತು ಅದನ್ನು ತನ್ನ ಎದೆಯ ಹತ್ತಿರ ಒಯ್ಯುತ್ತ ಅಂದನು, "ಭಾರತೀ, ನೀನು ನಿನ್ನ ಮನಸ್ಸಿನ ಸ್ಪಷ್ಟ ಸಾಕ್ಷಿ ಕೊಡಲಿಲ್ಲವೆಂದ ಮಾತ್ರಕ್ಕೆ ನನಗೆ ನಿನ್ನ ಪ್ರೇಮ ತಿಳಿದೇ ಇಲ್ಲವೆಂದು ತಿಳಿಯುವಿಯಾ ?"

ಅವಳ ಅಂಗೈಗಳ ಮೇಲೆ ತನ್ನ ತುಟಿಗಳನ್ನು ಸರಿದಾಡಿಸುತ್ತ ಆತ ಅಂದ. "ಈ ನಿನ್ನ ಸ್ಪರ್ಶ ನನಗೆ ನಿನ್ನ ಮನಸ್ಸಿನ ಗೌಪ್ಯವನ್ನು ಹೇಳುತ್ತದೆ. ಈ ನಿನ್ನ ಹೊಳೆಯುವ ಕಣ್ಣುಗಳು ನನ್ನೊಂದಿಗೆ ಎಷ್ಟೆಲ್ಲ ಮಾತಾಡುತ್ತವೆ. ... ಒಮ್ಮೊಮ್ಮೆ ಕದ್ದು ಮುಚ್ಚಿ ಕಿಟಕಿಯ ಓರೆ ಬಾಗಿಲದೊಳಗಿಂದ........ ಹೌದೋ ಅಲ್ಲ ?"

ಆಗ ಮಾತ್ರ ಭಾರತಿ ನಿಜವಾಗಿಯೂ ನಾಚಿದಳು. ಅವನ ನೋಟ ಮೆಲ್ಲಗೆ ಸರಿಯುತ್ತ ಸರಿಯುತ್ತ ಅವಳ ತುಟಿಯ ಮೇಲೆ ಸ್ಥಿರವಾಯಿತು. ಅವನ ಆ ನೋಟದಿಂದ ಅವಳ ತುಟಿ ಅದರಿತು. ಅಷ್ಟರಲ್ಲಿ ಆತ ಅಂದ: "ನೋಡು ನೋಡು, ನಿನ್ನ ತುಟಿಗಳು ನನಗೆ ನಿನ್ನ ಪ್ರೇಮದ ಪಿಸು ಮಾತು ಗಳನ್ನು ಹೇಳುತ್ತಿವೆ ಭಾರತೀ, ಇವೆಲ್ಲ ಮಾತು ಯಾರಾದರು ಪ್ರತ್ಯಕ್ಷ ಅಡಿಯೇ ಹೇಳುವರೇ ? ಹಾಗಾದರೆ ಅದರಲ್ಲಿ ಏನು ಸ್ವಾರಸ್ಯ ಉಳಿದಂತೆ ? ಆಗ ಅದೆಂಥ ಪ್ರೀತಿ ? ಒಮ್ಮೆ ಅಂತಃಕರಣವು ಅಂತಃಕರಣವನ್ನು ಸ್ಪರ್ಶ ಮಾಡಿ ದರೆ ಸಾಕು, ಮಾತು ಮೂಕವಾಗುತ್ತವೆ. ಮೂಕ ಮಾತುಗಳೇ ಅಂತಃಕರಣ ವನ್ನು ಎಚ್ಚರಿಸುತ್ತವೆ. ಮತ್ತು ಪ್ರೇಮದ್ದೇ ಒಂದು ತುಂಬ ವಾಚಾಳಿಯಾದ ಭಾಷೆ ಆರಂಭವಾಗುತ್ತದೆ. !"

ಭಾರತೀ ನಾಚುತ್ತ ಅಂದಳು. "ಹುಂ, ಹುಂ, ಸಾಕಾಯಿತು. ಈ ಕಾವ್ಯ !"

ಅವಳ ಈ ಮಾತಿಗೆ ಆತ ನಕ್ಕು ಅಂದನು. "ಅಲ್ಲೇ, ಪ್ರೇಮದಲ್ಲಿ ಸಿಲುಕಿದ ಪ್ರತಿಯೊಬ್ಬ ಮನುಷ್ಯ ಕವಿ ಆಗೇ ಆಗುತ್ತಾನೆ !"

* * * *

ಆ ರಾತ್ರಿ ಆಲ್ಬರ್ಟ ಪ್ರೇಮದ ಉನ್ಮಾದದಲ್ಲಿಯೇ ತೇಲಾಡುತ್ತಿದ್ದ. ಅವನಿಗೆ ಭಾರತಿಯ ಪ್ರೇಮದ ಸಾಕ್ಷಿ ಮನದಟ್ಟಾಗಿತ್ತು. ಅವಳ ಮನಸ್ಸು ಅವನಿಗೆ ತಿಳಿದಿತ್ತು. ಅಂತಃಕರಣಕ್ಕೆ ಅಂತಃಕರಣವು ಸೇರಿತ್ತು. ಮನಸ್ಸಿಗೆ ಮನಸ್ಸಿನ ಭಾಷೆ ಅರಿವಾಗಿತ್ತು.

ತರುಣ-ತರುಣಿಯರ ಪ್ರೇಮದ ಪ್ರಾಥಮಿಕ ಅವಸ್ಥೆಯಲ್ಲಿ ಒಂದು ಬಗೆಯ ಮನಸ್ಸಿನ ಪಾವಿತ್ರ್ಯ ವಿರುತ್ತದೆ. ಆದರೆ ಮನಸ್ಸಿನ ಗುರುತು ಮನಸ್ಸಿಗೆ ಆಯಿತೆಂದರೆ, ಆ ಪ್ರೇಮದ ಸ್ವರೂಪ ಕೇವಲ ಮಾನಸಿಕವಾಗಿ ಉಳಿಯುವದಿಲ್ಲ. ಮನಸ್ಸು ಸ್ವಾಧೀನವಾದ ಮೇಲೆ ದೇಹವೂ ಸ್ವಾಧೀನ ವಾಗಬೇಕೆಂದು ಅನಿಸುತ್ತದೆ. ಅಂಥ ವೇಳೆಗೆ ಪ್ರಾಥಮಿಕ ಅವಸ್ಥೆಯಲ್ಲಿ

ಪ್ರೇಮದಲ್ಲಿ ಇದ್ದ ದೈವೀ ವೃತ್ತಿಯು ಇಲ್ಲವಾಗುತ್ತದೆ. ಮತ್ತು ಪ್ರೇಮಿ ಕರ ಮನಸ್ಸಿನಲ್ಲಿ ಪಶುವೃತ್ತಿ ಜಾಗೃತವಾಗುತ್ತದೆ.

*　　*　　*　　*

ಆ ರಾತ್ರಿಗೆ ಅದೇ ಒದಗಿ ಬಂದಿತ್ತು. ಆಲ್ಬರ್ಟನ ಕೆಲಸ ಮುಗಿಯುತ್ತ ಬಂದಿತ್ತು. ಮೀನಾಕೃತಿ ಕೆರೆಯ 'ಶೂಟಿಂಗ ಸ್ಪಾಟ' ನೋಡಲಿಕ್ಕೆಂದು ಅವನು ಭಾರತಿಯನ್ನು ತನ್ನ ಸಂಗಡ ಒಯ್ದಿದ್ದನು. ಕಳೆದ ೧೫ ದಿನ ಅವರು ಜತೆಯಲ್ಲಿಯೇ ತಿರುಗಾಡುತ್ತಿದ್ದರು ಅವರ ಮನಸ್ಸುಗಳಂತೂ ಎಂದೋ ಕೂಡಿದ್ದವು. ಶರೀರಗಳ ಅಂತರವೂ ಕಡಿಮೆ ಕಡಿಮೆ ಆಗುತ್ತ ಬಂದಿತ್ತು. ಈಗ ಯಾವದೇ ಅಡ್ಡ ತೆರೆ ಉಳಿದಿದ್ದಿಲ್ಲ.

ಅದು ಕತ್ತಲೆಯ ರಾತ್ರಿ ಆಗಿತ್ತು. ಆ ಕತ್ತಲೆಯಲ್ಲಿ ಮಂಜು ಬೇರೆ ಕವಿದಿತ್ತು. ಅದರಿಂದ ಒಂದು ಬಗೆಯ ಉಸುರುಗಟ್ಟುವ ವಾತಾವರಣ ಉಂಟಾಗಿತ್ತು. ರಾತ್ರಿಯ ಊಟ ಮುಗಿದಿತ್ತು. ಆದರೂ ಭಾರತೀ ಇನ್ನು ಅಡುಗೆಯ ಮನೆಯಲ್ಲಿಯೇ ಏನೋ ಕೆಲಸ ಮಾಡುತ್ತಿದ್ದಳು. ಆಲ್ಬರ್ಟ ಒಮ್ಮೆಲೇ ಅವಳ ಇದುರಿಗೆ ಹೋಗಿ ನಿಂತನು. ಅವನ ಎದೆ ಡವಡವ ಗುಡು ತ್ತಿತ್ತು. ಆ ಸದ್ದು ಆತನಿಗೇ ಸ್ಪಷ್ಟ ಕೇಳಿ ಬರುತ್ತಿತ್ತು. ಅವನು ಅವಳ ಕಡೆಗೆ ದಿಟ್ಟಿಸಿ ನೋಡುತ್ತಿದ್ದನು. ಅವನ ದೃಷ್ಟಿಯಲ್ಲಿ ವಾಸನೆ ಇತ್ತು. ಅವಳೂ ಅವನತ್ತ ನೋಡುತ್ತಿದ್ದಳು. ಅವಳ ದೃಷ್ಟಿಯಲ್ಲಿ ಕಾರುಣ್ಯವಿತ್ತು. ಆ ಕಾರುಣ್ಯವನ್ನು ಕಂಡು ಆತ ಹಿಂಜರಿಯಲಿಲ್ಲ. ತಿರುಗಿ ಅವಳ ಹತ್ತಿರಕ್ಕೆ ಹೋದನು. ಏನೂ ಮಾತನಾಡದೆ ಅವಳು ಅವನಿಂದ ಒಮ್ಮೆಲೇ ದೂರ ಸರಿದಳು, ಮತ್ತು ಏನೂ ಮಾಡದೆ ಅವನು ಪಕ್ಕದ ಕೋಣೆಯನ್ನು ಹೊಕ್ಕನು.

ಅಡುಗೆಯ ಮನೆಗೆ ತಾಗಿ ಇದ್ದ ಮೊದಲನೆಯ ಕೋಣೆಯಲ್ಲಿ ತನ್ನ ಹಾಸಿಗೆಯಲ್ಲಿ ಮೈ ಚೆಲ್ಲಿದಾಗ ಅವಳಿಗೆ ಅನಿಸಿತು – ಆದರೆ ಏನನಿಸಿತೋ ಅವಳದು ಅವಳಿಗೇ ಅರಿವಾಗುತ್ತಿದ್ದಿಲ್ಲ. ಒಂದೇ ಸಮಯಕ್ಕೆ ಅವಳಿಗೆ ದೈವೀ ಪ್ರೇಮ ಮತ್ತು ಆಸುರೀ ವೃತ್ತಿಯ ಅನುಭವ ಬರುತ್ತಿತ್ತು. ಆ ದೈವೀ ಪ್ರೇಮ ದಿಂದ ಅವಳ ಮನಸ್ಸು ಸುಖಿಸುತ್ತಿತ್ತು. ಮತ್ತು ಆಸುರೀ ವೃತ್ತಿಯಿಂದ

ದುಃಖಿಸುತ್ತಿತ್ತು. ಅವಳಿಗೆ ಆ ಪ್ರೇಮದ ಹಸಿವಿತ್ತು. ಅದು ಅವಳಿಗೆ ಬೇಕೆನಿಸುತ್ತಿತ್ತು. ಆದರೆ ಆ ಆಸುರೀ ವೃತ್ತಿಯ ಬಗೆಗೆ ಅವಳಿಗೆ ತಿರಸ್ಕಾರ ವೆನಿಸುತ್ತಿತ್ತು ಆ ವೃತ್ತಿ ಅವಳಿಗೆ ಬೇಡವೆನಿಸುತ್ತಿತ್ತು. ಅವಳಿಗೆ ಅವನ ಪ್ರೇಮ ಬೇಕಿತ್ತು. ಆದರೆ ಅವನ ಆಸುರೀ ವೃತ್ತಿ ಬೇಡವಾಗಿತ್ತು. ಸುಖ ದುಃಖಗಳ ಎಂಥ ಚಮತ್ಕಾರಿಕ ಅನುಭವವನ್ನು ಅವಳು ಪಡೆಯುತ್ತಿದಳು! ಹಾಸಿಗೆಯಲ್ಲಿ ಬಿದ್ದಲ್ಲಿಯೇ ಅವಳು ನಡೆದ ಘಟನೆಯ ಬಗೆಗೆ ವಿಚಾರ ಮಾಡು ತ್ತಿದ್ದಳು. ಅವಳಿಗೆ ಅನಿಸುತ್ತಿತ್ತು ಆದರೆ ನಿಶ್ಚಿತವಾಗಿ ಏನೆನಿಸುತ್ತಿತ್ತೊ ಅದು ಅವಳದು ಅವಳಿಗೇ ಎಲ್ಲಿ ಗೊತ್ತಿತ್ತು ?

ಆಚೆಯ ಕೋಣೆಯಲ್ಲಿ ಇನ್ನೂ ದೀಪವಿತ್ತು. ಆಲ್ಬರ್ಟ ಏನೋ ಓದುತ್ತಿದ್ದ. ಪರಸ್ಪರರ ಪ್ರೇಮದ ಪ್ರತೀತಿ ಬಂದ ಮೇಲೂ ಇಂದು ಅವಳಿಗೆ ಅವನೊಂದಿಗೆ ಮಾತಾಡಬೇಕೆಂದು ಅನಿಸುತ್ತಿದ್ದಿಲ್ಲ. ಆಗ ಮಾತನಾಡುವ ಅಗತ್ಯವೇನೂ ಇದ್ದಿಲ್ಲ. ಅಂತೆಯೇ ಅವಳು ಸುಮ್ಮನೆ ಕೂತಿದ್ದಳೋ ಅಥವಾ ಅವನ ಈ ವರ್ತನೆಯಿಂದ ಅವಳ ಮನಸ್ಸಿನಲ್ಲಿ ಭೀತಿ ಉಂಟಾದ್ದ ರಿಂದ ಅವಳು ತೆಪ್ಪಗೆ ಕೂತಿದ್ದಳೋ,–ಇದು ಸಹ ಅವಳಿಗೇ ಅರಿವಾಗ ಲಿಲ್ಲ. ಆಲ್ಬರ್ಟನ ಮನಸ್ಸು ಅವಳಿಗೆ ಬೇಕಿತ್ತು, ಇದರಲ್ಲಿ ಸಂಶಯವೇ ಇದ್ದಿಲ್ಲ. ಅವನ ಮನಸ್ಸನ್ನು ಅವಳು ಗೆದ್ದಿದ್ದಳು. ಆದರೆ ಅವನ ಮೈ ಸಲಿಗೆಯು ಮಾತ್ರ ಅವಳಿಗೆ ಬೇಕಿದ್ದಿಲ್ಲ. ಕುಮಾರಿಕೆಯರಿಗೆ ಮನವಾರೆ ಬೇಕೆನಿಸುವ ಶಾರೀರಿಕ ಸುಖದ ಕುರಿತು ಅವರಿಗೆ ಒಂದು ಹೆಸರಿಲ್ಲದ ಹೆದರಿ ಕೆಯೂ ಅನಿಸುತ್ತಿರುತ್ತದೆ. ಅವಳ ಅವಸ್ಥೆಯೂ ಅದೇ ರೀತಿಯಾಗಿತ್ತು. ಆದರೆ ಅವನ ಮೈ ಸಲಿಗೆಯನ್ನು ತಪ್ಪಿಸಿಕೊಳ್ಳಲು ಅವಳಿಗೆ ಸಾಧ್ಯವಿತ್ತೇ ?

ಅಷ್ಟರಲ್ಲಿ ವಿದ್ಯುತ್ ಪೂರೈಕೆಯಲ್ಲಿ ಏನೋ ಕೆಟ್ಟಿತ್ತು. ಮತ್ತು ಅವಳ ಸುತ್ತಲೂ ಜಗತ್ತೆಲ್ಲ ಕಗ್ಗತ್ತಲಲ್ಲಿ ಪೂರ್ತಿ ಮುಳುಗಿ ಹೋಯಿತು. ಅವಳು ತನ್ನ ಹಾಸಿಗೆಯಿಂದ ಏಳಲೇ ಇಲ್ಲ. ಅವಳಿಗೆ ಏಳುವ ಇಚ್ಛೆಯೇ ಇದ್ದಿಲ್ಲ. ಕಗ್ಗತ್ತಲು ಕವಿದಿತ್ತು. ಹೊರಗೆ ಹೇಗೋ ಹಾಗೆಯೇ ಅವಳ ಮನ ದೊಳಗೂ ! ಇರುಳ ಕೀಟಗಳ ಕರ್ಕಶ ಕೀರಾಟ ಕಿವಿಯನ್ನು ತಿವಿಯುತ್ತಿತ್ತು. ಉಳಿದುದೆಲ್ಲ ಶಾಂತವಾಗಿತ್ತು. ನೆರೆಯಲ್ಲಿಯೇ ಖಳಖಲ ಹರಿಯುತ್ತಿದ್ದ

ಹಳ್ಳದ ನೀರು ಸದ್ದು ಮಾಡುತ್ತಿತ್ತು. ಆ ಸಪ್ಪಳ ದೂರದಿಂದ ಬಂದಂತೆ ಅನಿಸುತ್ತಿತ್ತು. ಇರುಳ ಕೀಟಗಳ ಸದ್ದಿನಲ್ಲಿ ಆ ಸಪ್ಪಳ ಬಲು ಚಮತ್ಕಾರಿಕ ವಾಗಿ ಭಾಸವಾಗುತ್ತಿತ್ತು. ಅವಳು ಹಾಸಿಗೆಯಲ್ಲಿಯೇ ಬಿದ್ದುಕೊಂಡಿದಳು. ಅವಳು ಹೆದರಿಕೆಯಿಂದ ಮೈಗೆ ಹೊದಿಕೆಯನ್ನು ಸುತ್ತಿಕೊಂಡಳು. ಅವಳಿಗೆ ಕತ್ತಲೂ ಇನ್ನು ಹೆಚ್ಚಾದಂತೆ ಅನಿಸಿತು. ಉಸಿರು ಜೋರು ಜೋರಾಗಿ ನಡೆಯ ಹತ್ತಿತ್ತು. ಅದರೊಂದಿಗೆ ಅವಳ ಉಬ್ಬಿದ ಎದೆಯೂ ಮೇಲೆ ಕೆಳಗೆ ಆಗಹತ್ತಿತ್ತು. ಆದರೆ ಆ ಕತ್ತಲಲ್ಲಿ ಅದು ಯಾರಿಗಾದರೂ ಕಾಣು ವದು ಅಷ್ಟರಲ್ಲಿಯೇ ಇದೆ !

* * * *

ಆ ಕತ್ತಲೆಯಲ್ಲಿ ಭಾರತಿಯ ಮೈಗೆ ಆದ ಸ್ಪರ್ಶದಿಂದ ಅವಳು ಗಾಬರಿ ಆದಳು. ಕಂಗೆಟ್ಟು ಆಕೆ ಕೂಗುವಾಕೆ ಅಷ್ಟರಲ್ಲಿ ಎರಡು ಉನ್ಮಾದಕ ತುಟಿ ಗಳ ಹಿಡಿತದಲ್ಲಿ ಅವಳ ಕೋಮಲ ಮುಖವು ಸೆರೆ ಸಿಲುಕಿತು. ಆ ಉನ್ಮಾ ದಕ ಚುಂಬನದಿಂದ ಅವಳು ಬೆದರಿದಳು. ಅದಕ್ಕೂ ಮುಂದೆ ಏನಾಗು ವದೋ ಎಂಬ ಅರಿವಿನಿಂದ ಅವಳ ಎದೆ ಬಡಿದು ಕೊಳ್ಳಹತ್ತಿತ್ತು. ಆಲ್ಬರ್ಟ ಹೀಗೆ ಕತ್ತಲಲ್ಲಿ ಕಳ್ಳನಂತೆ ಬಂದು ದಾಳಿ ಮಾಡಬಾರದಾಗಿತ್ತು. ಅವನು ಹಾಗೆ ಬಂದದ್ದು ಅವಳಿಗೆ ತಪ್ಪೆನಿಸಿತ್ತು. ಅವಳ ದನಿ ಒಳ ಒಳಗೇ ಸೇದಿ ಕೊಳ್ಳುತ್ತಿತ್ತು. ಗಂಟಲು ಒಣಗಿತ್ತು. ಆ ಪರಿಸ್ಥಿತಿಯಲ್ಲಿಯೂ ಅವಳೆಂದಳು. "ಆಲ್ಬರ್ಟ, ಇಂಥ ತಿಳಿಗೇಡಿತನವೇನೂ ಮಾಡಬೇಡ. ನೀನು ಇಲ್ಲಿಂದ ಹೋಗು."

ಆದರೆ ಆಲ್ಬರ್ಟನು ಅವಳ ಬೆನ್ನಕೆಳಗಿಂದ ಕೈಗಳನ್ನು ಕೊಟ್ಟು ಅವಳನ್ನು ಹತ್ತಿರಕ್ಕೆ ಹಗುರಾಗಿ ಎಳೆದು ಕೊಂಡನು. ಮತ್ತು ನವಿರಾಗಿ ಅವಳ ಕೂದಲ ಮೇಲಿಂದ ಕೈ ಬಾಚುತ್ತ ಅಂದನು. "ಭಾರತೀ, ನನ್ನ ಹೆದರಿಕೆಯೇ ನಿನಗೆ ? "

ಭಾರತೀ ಮಾತಾಡಲಿಲ್ಲ. ಅವಳಿಗೆ ನಂಬಿಕೆ ಅನಿಸುತ್ತಿದ್ದಿಲ್ಲ. ಆದ್ದ ರಿಂದಲೇ ಅವಳ ಮನಸ್ಸು ಆಲ್ಬರ್ಟನಲ್ಲಿ ನಟ್ಟಿದ್ದರೂ ಮೋಹಕ್ಕೆ ವಶಳಾಗಿ ಅವಳು ಆಲ್ಬರ್ಟನಿಗೆ ತನ್ನ ಮೈಯನ್ನು ಒಡ್ಡಲು ಸಿದ್ಧಳಿದ್ದಿಲ್ಲ. ಅವಳು

ಅವನಿಂದ ಮೊದಲು ಮದುವೆಯ ವಚನ ಪಡೆಯುವವಳಿದ್ದಳು. ಅವನನ್ನು ವಚನದ ಬಂಧನದಲ್ಲಿ ಸಿಲುಕಿಸುವವಳಿದ್ದಳು. ಆ ಮೇಲೆಯೇ ಅವನಿಗೆ ತನ್ನ ಸರ್ವಸ್ವವನ್ನು ಕೊಡಲಿದ್ದಳು. ಆದರೆ ಆಗ ಘಟಿಸುತ್ತಿದ್ದುದೆಲ್ಲವೂ ಹೇಗೆ ಅನಪೇಕ್ಷಿತವಾಗಿತ್ತು!

ಅವಳು ಮಾತಾಡುತ್ತಿಲ್ಲ, ಎಂಬುದನ್ನು ಕಂಡು ಆಲ್ಬರ್ಟ ಅವಳನ್ನು ತನ್ನೆದೆಗೆ ಇನ್ನೂ ಬಿಗಿದಪ್ಪಿಕೊಂಡು ಅಂದನು, "ಭಾರತೀ ನಾ ನಿನಗೆ ಮೋಸಮಾಡಲಾರೆ ಎಂದೆಂದಿಗೂ ಮಾಡಲಾರೆ.... ನನ್ನ ಮುದ್ದು ಭಾರತಿಯನ್ನು ದುಃಖದಲ್ಲಿ ನೂಕಿ ನನಗೇನು ಸುಖ ಸಿಕ್ಕೀತು ?"

ಮತ್ತು ಒಮ್ಮೆಲೇ ಅತ ಕಕುಲಾತಿಯಿಂದ ಅಂದ. "ಭಾರತೀ, ನೀನು ನನ್ನನ್ನು ಮಂದನೆಂದು ತಿಳಿದಿಲ್ಲವಷ್ಟೇ ?"

ಆಗ ಭಾರತಿಗೆ ತನ್ನ ಬಗೆಗೇ ನಾಚಿಕೆ ಅನಿಸಿತು. ಅವನ ತುಟಿಯ ಮೇಲೆ ತನ್ನ ಬೆರಳಿಟ್ಟು ಅಂದಳು. "ಶೂಃ! ಹೀಗೆ ಹುಚ್ಚನಂತೆ ಏನಾದರೂ ಅನ್ನಬೇಡ !"

ಅವಳ ಆ ಮಾತಿನಿಂದ ಅವನಿಗೆ ಧೈರ್ಯ ಬಂತು. ಮತ್ತು ಆತ ಒಳ್ಳೆ ರಂಗಿನಲ್ಲಿಯೂ ಬಂದ. ಅವನಂದ, "ನಿನಗೆ ಹಿಂದೆ ಹೀಗೇ ಭಾಸವಾಗಿತ್ತು ಅಲ್ವೇ ? ನಿನ್ನ ಮನಸ್ಸು ಆಗ ಸಂಭ್ರಮಗೊಂಡಿತ್ತು, ಅಲ್ವೇ ? ನಾನು ನಿನಗೆ ಅನ್ನುತ್ತಿದ್ದೆ, ಯೋಗ್ಯ ವೇಳೆ ಬಂದಾಗ ಎಲ್ಲವನ್ನು ಹೇಳುವೆನೆಂದು !"

ಭಾರತಿಯು ಉಗುಳು ನುಂಗಿ ನಡುಗುವ ದನಿಯಲ್ಲಿ ಕೇಳಿದಳು, "ಹಾಗಾದರೆ ಅದು ಪ್ರತ್ಯಕ್ಷವೇ ಆಗಿತ್ತೊ, ಅಥವಾ ಭಾಸವಾಗಿತ್ತು?"

ಅವಳ ಬಡಿದುಕೊಳ್ಳುವ ಎದೆಯ ಮೇಲೆ ಕೈಯಿಟ್ಟು ಅವನು ಅಂದನು. "ತೀರ ಮಳ್ಳಿ ನೀನು! ಎಷ್ಟು ಹೆದರಿದಿ ! ಎಲ್ಲ ಹೇಳುತ್ತೇನೆ. ಆ ದಿನ ನಿನಗೆ ಆದದ್ದು ಭಾಸವೇ ಆಗಿತ್ತು. ಅದೆಲ್ಲ ಕನಸಾಗಿತ್ತು. ಆದರೆ ಇಂದು ಇದು ಭಾಸವಲ್ಲ..... ನಿನಗೆ ಅಂದು ಬಿದ್ದ ಕನಸು ಈಗ ನಿಜವಾಗುತ್ತಿದೆ."

ಹೀಗೆ ಅನ್ನುವಾಗ ಅವನ ದನಿ ಒಮ್ಮೆಲೇ ಬಿಗಿದಂತೆ ಆಯಿತು. ಅವನ ಆಲಿಂಗನ ಬಲಿಷ್ಠವಾಯಿತು. ನನಗೆ ಇದು ಬೇಕು ಇದು ಬೇಕು.... ಎಂದು ಅವಳ ಕಿವಿಯಲ್ಲಿ ಪಿಸುಗುಡುತ್ತ ಆತ ಅವಳ ಎಲ್ಲ ಅಂಗಾಗಗಳ ಮೇಲೆ ಲುಬ್ಧ ಕೈಗಳನ್ನು ಆಡಿಸಹತ್ತಿದನು. ಉನ್ಮತ್ತ ಸ್ವೈರ ಓಡಾಡುವ ಹೆಗ್ಗಡ ಲನ್ನು ಈ ಭೂಮಿಯು ತನ್ನ ಅಂಕೆಯಲ್ಲಿ ತರಲು ಶಕ್ಯವಿದ್ದಿಲ್ಲ. ರೋಮ ರೋಮದಲ್ಲಿ ಮಘಮಘಿಸುವ ವಾಸನೆಗಳನ್ನು ಅವಳು ತಡೆ ಹಿಡಿಯುವದು ಸಾಧ್ಯವಿದ್ದಿಲ್ಲ. ಅವಳು ಬರೇ ಪಿಸುಗುಡುತ್ತ ಉಳಿದಳು, ''ಆಲ್ಬರ್ಟ, ಹೀಗೇನೂ ಮಾಡಬೇಡ....ಬೇಡ, ನಿಜವಾಗಿಯೂ ಮಾಡಬೇಡ .... ಈಗ ಬೇಡ.... ಸದ್ಯ ಇಲ್ಲಿಯಾದರೂ ಬೇಡ .... ''

ಆದರೆ ಅವಳ ಶಬ್ದಗಳು ಅವಳ ತುಟಿಗಳಲ್ಲಿಯೇ ಉಳಿದವು.

ಆಲ್ಬರ್ಟ ಅವಳ ಯಾವ ಮಾತನ್ನೂ ಕೇಳಲಿಲ್ಲ. ಭ್ರಮರದಂತೆ ಅವಳ ದೇಹದ ಎಸಳು ಎಸಳಿನ ಜೇನನ್ನು ಅವನು ಹೀರುತ್ತಿದ್ದನು. ಅವನ ಮನಸ್ಸಿನ ಮೇಲೆ ಕ್ಷಣ ಕ್ಷಣಕ್ಕೂ ಆ ಮದಿರೆಯ ಅಮಲು ಏರುತ್ತಿತ್ತು. ಅವನ ಸ್ಪರ್ಶಕ್ಕೆ ಭಾರತಿಯೂ ಕರ್ಪೂರದಂತೆ ಕರಗುತ್ತಿದ್ದಳು. ಅವಳ ಪ್ರತೀಕಾರ ಕುಂಟಹತ್ತಿತ್ತು, ಊನವಾಯಿತು. ಆಲ್ಬರ್ಟನ ಅಮಲು ಅವಳ ಮನಸ್ಸಿನ ಮೇಲೂ ಏನೋ ನಂಜು ಏರಿಸಿತು. ಅನಾಮಿಕವಾದ ಸುಖದಿಂದ ಆಕೆ ಕಣ್ಣು ಮುಚ್ಚಿಕೊಂಡಳು. "ನನ್ನ ಮುದ್ದು ಭಾರತೀ" ಈ ಶಬ್ದಗಳಿಂದ ಅವಳು ಮಂತ್ರಮುಗ್ಧಳಾಗಿ ಆರಿ ಹೋಗುತ್ತಿದ್ದಳು. ಮತ್ತು ತನ್ನ ಅಸ್ತಿತ್ವವನ್ನೇ ಮರೆತು ಹೋದಳು. ಅವಳು ಅರಿವಿಲ್ಲದೆ ಅವನ ಕೊರಳಲ್ಲಿ ತನ್ನ ತೋಳು ಸಿಲುಕಿಸಿದಳು. ಅನಾಹುತವಾಗಿಯೇ ಅವನನ್ನು ತನ್ನ ಕಡೆಗೆ ಎಳೆದು ಕೊಂಡಳು ಮತ್ತು ಅವನ ಕಿವಿಯಲ್ಲಿ ಪಿಸುಗುಟ್ಟಿದಳು, "ಆಲ್ಬರ್ಟ, ನಾನು ಸರ್ವಸ್ವೀ ನಿನ್ನವಳೇ !"

ಭಾರತಿಯ ಈ ಉನ್ಮತ್ತ ಆಶ್ವಾಸನದಿಂದ ಆಲ್ಬರ್ಟ ಇನ್ನಿಷ್ಟು ಮೈ ಮರೆತನು. ತಾರುಣ್ಯದ ಕಟ್ಟು ಒಡೆಯಿತು. ಮತ್ತು ಕಾಮ ವಾಸನೆಯ ಹುಚ್ಚು ಹಳ್ಳ ಮುನ್ನುಗ್ಗಿತು. ತಾರುಣ್ಯದ ಉನ್ಮಾದಕ ಪ್ರವಾಹದಲ್ಲಿ ಆಲ್ಬರ್ಟ ಮತ್ತು ಭಾರತಿ ಇಬ್ಬರೂ ಸಿಲುಕಿದರು. ಅದರಲ್ಲಿಯೇ ಅವರಿಬ್ಬರೂ ಕೊಚ್ಚಿ

ಹೋದರು. ಹಸಿದು ಲವಲವಿಸುವ ತಾರುಣ್ಯದ ದಾಹವು ಶಮನ ಹೊಂದಿತು. ಪ್ರಪಂಚದ ದೃಷ್ಟಿಯಿಂದ ಯಾವದು ಒದಗಬಾರದೋ ಅದು ಒದಗಿ ಹೋಗಿತ್ತು.....ಯೌವನದ ದೃಷ್ಟಿಯಿಂದ ಇದರಲ್ಲಿ ಯಾರದೂ ತಪ್ಪು ಇದ್ದಿಲ್ಲ.....ತಾರುಣ್ಯ ಹೀಗೆಯೇ ಪ್ರಮಾದಕರವಾಗಿರುತ್ತದೆ !

ತುಂಬ ಹೊತ್ತಾದ ಮೇಲೆ ದೀಪಗಳು ಬಂದವು. ಝಗ್ಗನೆ ಹೊತ್ತಿದ ಬೆಳಕು ಕತ್ತಲನ್ನೇ ನುಂಗಿ ಬಿಟ್ಟಿತು. ಬೆಳಕಾದೊಡನೆಯೇ ಆಲ್ಬರ್ಟ ಭಾರತಿಯ ಕಡೆಗೆ ನೋಡಿದನು. ಅವಳು ನಾಚಿಕೆಯಿಂದ ಸಿಗ್ಗಾಗಿ ಬಿಟ್ಟಿದ್ದಳು. ಅವಳು ಒಮ್ಮೆಲೆ ಅವನನ್ನು ದೂರ ನೂಕಿದಳು. ಕಾಲ ಬುಡಕ್ಕೆ ಬಿದ್ದ ಹೊದಿಕೆಯನ್ನು ಬಿಗಿಯಾಗಿ ಸುತ್ತಿಕೊಂಡಳು. "ಓss!" ಎಂದು ತೃಪ್ತಿಯ ದನಿದೆಗೆಯುತ್ತ ಆಲ್ಬರ್ಟ ತನ್ನ ಕೋಣೆಗೆ ಹೊರಟು ಹೋದನು.

ಆಲ್ಬರ್ಟ ಹೊರಟು ಹೋದನು ಮತ್ತು ಭಾರತಿಗೆ ತಾನು ಒಬ್ಬಂಟಿಗಳಾಗಿದ್ದೇನೆಂದು ಅವಳಿಗೆ ಬರಿದೆ ಅನಿಸಹತ್ತಿತು. ಅವಳಿಗೇರಿದ ಪ್ರೀತಿಯ ಉನ್ಮಾದವು ಎಚ್ಚರ ತಂದಿತ್ತು. ಅವಳು ಒಮ್ಮೆಲೆ ಅಸ್ವಸ್ಥಳಾದಳು. "ಇಲ್ಲ ಇಲ್ಲ ಹೀಗೆ ಆಗಬೇಕಿದಿದ್ದಿಲ್ಲ. ಆ ಕ್ಷಣಿಕ ಸುಖಕ್ಕೆ ನಾನು ಹೇಗೆ ಬಲಿಯಾದೆ"? ಅವಳಿಗೆ ಆಲ್ಬರ್ಟನ ಕೈ ತನ್ನ ಎಲ್ಲ ಅಂಗಗಳ ಮೇಲಿಂದ ಆಡಿದ ನೆನಪಾಯಿತು. ಅವಳ ಮೈಗೆ ನಡುಕವೇರಿತು. ತನ್ನ ವಿಚಾರ ಶಕ್ತಿಯನ್ನೇ ಯಾರೋ ಕಿತ್ತು ಒಗೆದಂತೆ ಅವಳಿಗೆ ಭಾಸವಾಯಿತು. ಅವಳು ತನ್ನ ಅಂಗೈಯಲ್ಲಿ ಬಾಯಿಯನ್ನು ಒಮ್ಮೆಲೆ ಅಡಗಿಸಿ ಬಿಕ್ಕಿ ಬಿಕ್ಕಿ ಅಳಹತ್ತಿದಳು—ಅಭಾವಿತವಾಗಿ ಘಟಿಸಿದ ಪ್ರಮಾದ ಆ ಕಣ್ಣೀರಿನಲ್ಲಿ ತೊಳೆದು ಹೋಗುತ್ತಿರುವಂತೆ ಅನಿಸಿತು. ಅವಳು ತೀರ ದಣಿದು ಹೋದಳು. ಅವಳು ತನ್ನ ಮೋರೆಯನ್ನು ಮಿದು ಪಾದ ದಿಂಬಿನಲ್ಲಿ ಅಡಗಿಸಿದಳು. ಆ ದಿಂಬು ಅವಳ ದುಃಖವನ್ನೂ ಒತ್ತಿ ಹೀರಿ ಅವಳಿಗೆ ಧೈರ್ಯ ಕೊಡುವಂತೆ, ಸಾಂತ್ವನೆ ಮಾಡುವನಂತೆ ಅನಿಸಿತು. ಅದು ನಿದ್ದೆಯ ರೆಕ್ಕೆಯಡಿಗೆ ಅವಳಿಗೆ ಮಮತೆಯ ಕಾವನ್ನು ಕೊಡಹತ್ತಿತು.

ನಡೆದ ಸಂಗತಿಯ ಅರ್ಥ ಆಲ್ಬರ್ಟನಿಗೆ ತಿಳಿಯದಾಯಿತು. ನಡೆದ ಘಟನೆ ಆನಂದ ನೀಡುವಂತಹದೋ ದುಃಖ ಉಂಟು ಮಾಡುವಂತಹದೋ ಅವನಿಗೆ ತಿಳಿಯಲಿಲ್ಲ.

ಇರಳು ಕೀಟಗಳು ಕಿರ್ರನೆ ಕಿರುಚುತ್ತಿದ್ದವು. ಹಳ್ಳದಲ್ಲಿ ನೀರು ಖಳ ಖಳ ಸಪ್ಪಳ ಮಾಡುತ್ತಿತ್ತು. ಅವನು ಮನಸ್ಸಿನಲ್ಲಿಯೇ ಅನ್ನುತ್ತಿದ್ದ, "ತರುಣರ ಆಯುಷ್ಯದಲ್ಲಿ ಹೀಗೆಯೇ ನಡೆಯುವದು! ಹೀಗೆಯೇ ಆಗುವದು! ಉಪವಾಸದ ಹೊಟ್ಟೆಗೆ ಉಪದೇಶ ಮಾಡಲು ಉಂಡು ತುಂಬಿದ ಹೊಟ್ಟೆಗೆ ಎಲ್ಲಿಯ ಅಧಿಕಾರ? ತಾರುಣ್ಯದಲ್ಲಿ ಇದು ಹೀಗೆಯೇ ಘಟಿಸುವದು!"

*  *  *  *  *

ಈ ಅವರ ಅಲ್ಪ ವಾಸ್ತವ್ಯದಲ್ಲಿ ಏನು ಆಗಲಿತ್ತೋ ಅದು ಆಗಿ ಹೋಯಿತು. ಕೇವಲ ಮನಸ್ಸು ಮನಸ್ಸನ್ನು ಗೆದ್ದಿದ್ದಲ್ಲದೆ ಮೈಯೂ ಮೈಯನ್ನು ಗೆದ್ದಿತ್ತು. ಎಲ್ಲವೂ ನಡೆದು ಹೋಗಿತ್ತು. ಈಗ ಉಳಿದದ್ದು ಕೇವಲ ಲಗ್ನ-ಬಂಧನದ ಲೌಕಿಕ ವ್ಯವಹಾರ ಒಂದೇ!

ಮನೆಗೆ ಹಿಂದಿರುಗಿ ಬರುವಾಗ ಅವರ ಮನಸ್ಸಿಗೆ ಆನಂದವಾಗುತ್ತಿತ್ತೋ ಇಲ್ಲವೋ, ಅದು ಅವರದು ಅವರಿಗೆ ತಿಳಿಯುತ್ತಿದ್ದಿಲ್ಲ. ತಿಳಿಯುತ್ತಿದ್ದದ್ದು ಇಷ್ಟೇ-ಮನಸ್ಸಿನ ದೈವೀ ಪ್ರೇಮಕ್ಕೆ ದೇಹದ ಅಸುರೀ ಲಾಲಸೆಯು ಕುಂದನ್ನು ತಂದಿತ್ತು. ಆದರೂ ಲಗ್ನ ಮಾಡಿಕೊಂಡಾಗ ಎಲ್ಲವೂ ಮುಗಿಯುವದು. ಮನೆಗೆ ಹೋದಮೇಲೆ ತಮ್ಮ ಮದುವೆಯ ಯೋಜನೆಯನ್ನು ಅವರು ಏರ್ನಾಳಿಗೆ ತಿಳಿಸುವವರಿದ್ದರು.

ಮನೆಗೆ ಹೋದಾಗ ಅವರು ಕಂಡದ್ದೇನು? ಏರ್ನಾ ಬೇರೊಂದು ದುಃಖದಲ್ಲಿ ಮಗ್ನಳಾಗಿದ್ದಳು. ಅವಳು ತಲೆಯೆತ್ತಿಯೂ ಅವರ ಕಡೆಗೆ ನೋಡಲಿಲ್ಲ. ತಲೆತಗ್ಗಿಸಿ ಅವಳು ಅಳುತ್ತಿದ್ದಳು.

ಅವಳ ದುಃಖವು ಅಂತಹದೇ ಇತ್ತು!

## ಭಾಗ: ೪

ಫ್ರಾಂಕಫರ್ಟ ವಿಮಾನ ನಿಲ್ದಾಣದಲ್ಲಿ ಆಲ್ಬರ್ಟನಿಗೆ ಬೀಳ್ಕೊಡಲಿಕ್ಕೆ ಭಾರತಿಯೊಬ್ಬಳೇ ಉಪಸ್ಥಿತಳಿದ್ದಳು.

ವಿಮಾನ ನಿಲ್ದಾಣಕ್ಕೆ ಬರಲು ಆತ ತನ್ನ ತಾಯಿಯನ್ನು ಕೇಳಿದ್ದ. ಆಗ ಏರ್ನಾ ಬರೇ ನಕಾರಾರ್ಥಕವಾಗಿ ತಲೆ ಅಲ್ಲಾಡಿಸಿದ್ದಳು. ಅವಳ ನಕಾರದ ಕಾರಣ ಸ್ಪಷ್ಟವೇ ಇತ್ತು. ಮಾನಫ್ರೆಡ್ ಮ್ಯುಲರರ ಅಸ್ಥಿಗಳನ್ನು ತೆಗೆದುಕೊಂಡು ಫ್ರಾಂಜ ಮ್ಯುಲರ ಭಾರತಕ್ಕೆ ವಿಮಾನ ಮಾರ್ಗವಾಗಿ ಹೊರಟಾಗ ಏರ್ನಾ ಅವರಿಗೆ ಬೀಳ್ಕೊಡಲು ವಿಮಾನ ನಿಲ್ದಾಣಕ್ಕೆ ಹೋಗಿದ್ದಳು. ಈಗ ಆಲ್ಬರ್ಟನನ್ನು ಬೀಳ್ಕೊಡಲಿಕ್ಕೆ ಹೋಗುವದರ ಅರ್ಥವೆಂದರೆ ಆ ಬೇಡವಾದ ಕಟು ನೆನಪಿಗೆ ಹೊಸ ಕುದಿಯನ್ನು ತರುವದೇ ಆಗಿತ್ತು. ಆದ್ದರಿಂದ ವಿಮಾನ ನಿಲ್ದಾಣಕ್ಕೆ ಹೋಗಬಾರದೆಂದೇ ಆಕೆ ನಿರ್ಧರಿಸಿದಳು. ಆಲ್ಬರ್ಟನಿಗೆ ಅವಳು ಪ್ರಕಟವಾಗಿ ಆಡಿ ತೋರಿಸಲಿಲ್ಲ. ಆದರೂ ಅವನಿಗೆ ಅವಳು ಬರಲೊಪ್ಪದ ಕಾರಣವು ಸಹಜವಾಗಿಯೇ ತಿಳಿಯುವಂತಿತ್ತು. ಆಗ ಅವನೂ ಅವಳಿಗೆ ಬಹಳ ಆಗ್ರಹ ಮಾಡಲಿಲ್ಲ.

ಆಲ್ಬರ್ಟನಿಗೆ ನಿರೋಪ ಕೊಡಲಿಕ್ಕೆ ಭಾರತಿಯು ಮಾತ್ರ ವಿಮಾನ ತಳಕ್ಕೆ ಹೋಗುವದೆಂದು ನಿರ್ಧಾರವಾಗಿತ್ತು.

ಹೈಡೆಲಬರ್ಗ ಬಿಡುವ ಮುಂಚಿನ ದಿನ ಮಧ್ಯಾಹ್ನ ಆತ ಅವಳ ಕೋಣೆಯೊಳಗೆ ಹೋಗಿದ್ದ. ಊರಿನಿಂದ ತುಸು ದೂರವಿರುವ 'ರೆಸ್ಟೊರಾಂ ರಿಸೆನೊಪ್' ಎಂಬ ಕೆಫೆಯಲ್ಲಿ ಆದಿನ ಅವರು ಮಧ್ಯಾಹ್ನದ ಊಟ ಮುಗಿಸಿದ್ದರು. ಆ 'ಹಾಟೆಲ್' ಒಂದು ಸಣ್ಣ ದಿಬ್ಬದ ಬುಡಕ್ಕೆ ಇತ್ತು. ಹಾಟೆಲ್ ಇದುರಿನಿಂದ ಒಂದು ಉಪರಸ್ತೆ ಹಾದಿತ್ತು. ಆ ರಸ್ತೆಯ ಆಚೆಗೆ ಅಡ್ಡ ಸುತ್ತು ಹಾಕಿ ನೇಕರ ನದಿಯು ಹರಿಯುತ್ತಿತ್ತು. ಮಧ್ಯಾಹ್ನಕ್ಕೆ ಆ ರಸ್ತೆಯಲ್ಲಿ ಏನೂ ಜನ ಸಂದಣಿ ಸಂಚಾರವಿದ್ದಿಲ್ಲ. ಒಂದೆಡೆಗೆ ಒಂದು ಮರದ ತೊಲೆಯ ಮೇಲೆ ಕೆಲ ಹೆಂಗಸರೂ ಗಂಡಸರೂ ಕೂತಿದ್ದರು. ಆದರೆ ತುಸು ಹೊತ್ತಿನ ಮೇಲೆ ಅವರೂ ಎದ್ದು ಹೋದರು. ರಸ್ತೆ ಮತ್ತೆ ನಿರ್ಜನವಾಯಿತು. ಹಾಟೆಲಿನ ಇದುರಿನ ಈ ರಸ್ತೆಯನ್ನು ದಾಟಿ ಹೋದರೆ, ನದಿಯ ತೀರದಲ್ಲಿ ಸಾಕಷ್ಟು ಮೇಲುಗಡೆಗೆ ಒಂದು ಹಳೆಯ ಓಕ ಮರವಿತ್ತು. ಆ ಮರದಡಿಗೆ ಒಂದು ಪ್ರಚಂಡ ಶಿಲೆ ಇತ್ತು. ಮಧ್ಯಾಹ್ನದ ಊಟ ಮುಗಿಸಿದ ಮೇಲೆ ಆಲ್ಬರ್ಟ ಮತ್ತು ಭಾರತೀ ಆ ಶಿಲಾಖಂಡದ ಮೇಲೆ ಹೋಗಿ ಕೂತರು.

ಇದುರಿಗೆ ನೇಕರ ಹೊಳೆ ಶಾಂತ-ಮಂದವಾಗಿ ಹರಿಯುತ್ತಿತ್ತು. ಅದರ ಪೃಷ್ಠ ಭಾಗದ ಮೇಲೆ ತೇಲುವ ಅಲೆಗಳು ಮೀನುಗಳಂತೆ ಹೊಳೆಯುತ್ತಿದ್ದವು. ನದಿಯ ಆಚೆಗೆ ಒಂದು ಸ್ಥಳದಲ್ಲಿ ಅಲ್ಪಾಯಿನ್, ಓಕ ಮತ್ತು ಫರಮರಗಳು ಕಿಕ್ಕಿರಿದು ನಿಂತಿದ್ದವು. ತಮ್ಮ ಕತ್ತು ಎತ್ತರಕ್ಕೆ ಎತ್ತಿ ತಮ್ಮ ಅಸ್ತಿತ್ವವನ್ನು ಪ್ರದರ್ಶಿಸಬೇಕೆಂದು ಅವುಗಳಲ್ಲಿ ತಾಮೇಲೆ ತಾಮೇಲೆಂದು ಸ್ಪರ್ಧೆ ಹತ್ತಿದಂತೆ ಕಾಣುತ್ತಿತ್ತು.

ಎಲ್ಲವೂ ಶಾಂತವಾಗಿತ್ತು. ಆ ಶಾಂತತೆಯ ಭಂಗ ಮಾಡಬೇಕೆಂದು ಯಾರಿಗೂ ಅನಿಸುತ್ತಿದ್ದಿಲ್ಲ. ಕೈಗೆ ತುಸು ಬಿಡುವಿದ್ದು ಬಹಳಷ್ಟು ಮಾತಾಡಬೇಕೆಂದಿದ್ದರೆ ಏನೂ ಮಾತುಕತೆ ಸಾಗುವದಿಲ್ಲ. ಆಲ್ಬರ್ಟ ಮತ್ತು ಭಾರತೀ ಇವರ ಮನಸ್ಸಿನ ಸ್ಥಿತಿಯೂ ಅದೇ ಆಗಿತ್ತು. ಎಷ್ಟೋ ಹೊತ್ತು ಯಾರೂ ಏನೂ ಆಡಲಿಲ್ಲ. ಶೀಘ್ರದಲ್ಲಿಯೆ ಆಗಲಿರುವ ವಿಯೋಗದ ಕೊರೆತ-ಮಿಡಿತ ಇಬ್ಬರ ಮನಸ್ಸಿನಲ್ಲಿಯೂ ಒತ್ತಿ ಬಂದಿತ್ತು. ಯಾರ

ಬಾಯಿಯಿಂದಲೂ ಮಾತು ಮೂಡಲಿಲ್ಲ. ಕೆಲ ಹೊತ್ತು ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತ ಕೂತರು. ಅವಳ ಮೇಲ್ತುಟಿಯ ಮೇಲಿದ್ದ ಎಳ್ಳು ಅವನಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ತನ್ನ ತುಟಿಯಿಂದ ಆ ತಿಲವನ್ನು ಮುಚ್ಚಿ ಹಾಕುವ ಮೋಹ ಅವನಿಗೆ ಆಗಲೇ ಇಲ್ಲ. ಅವನ ಮನಸ್ಸು ಮೋಹದ ಆಚೆಗೆ ಮುಟ್ಟಿತ್ತು. ಅವನಿಗೆ ಸಿಗಬೇಕಾಗಿದ್ದುದ್ದು ಸಿಕ್ಕಿ ಹೋಗಿತ್ತು. ಆದ್ದರಿಂದ ಅತೃಪ್ತಿಯ ಹೊಟ್ಟೆಯಲ್ಲಿ ಹುಟ್ಟುವ ಆಸೆಬುರಕತನ ಆ ಗಳಿಗೆಗೆ ಅವನಲ್ಲಿ ಉಳಿದಿದ್ದಿಲ್ಲ. ಒಂದು ಬಗೆಯ ತೃಪ್ತಿಯಿಂದಲೇ ಅವನು ಅವಳ ಕಡೆಗೆ ಬರೇ ನೋಡುತ್ತ ಕುಳಿತಿದ್ದ. ಎಷ್ಟು ಚೆಂದ ಹುಡುಗಿ ಇವಳು ! ಏಷ್ಟು ನಿಷ್ಪಾಪ! ಆದರೆ ಇವಳು ಪ್ರತ್ಯಕ್ಷವಾಗಿ ನನ್ನವಳಾಗುವದು ಯಾವಾಗ?

ಈ ವಿಚಾರದೊಡನೆಯೆ ಅವನ ಮನಸ್ಸಿನಲ್ಲಿ ಹೀಗೂ ಒಂದು ವಿಚಾರ ಬರುತ್ತಿತ್ತು. ಈ ಹುಡುಗಿ ಇನ್ನು ಭವಿಷ್ಯ ಕಾಲದಲ್ಲಿ ನನ್ನವಳಾಗಬೇಕೆಂಬ ಪ್ರಶ್ನೆ ಎಲ್ಲಿ ಬರುತ್ತದೆ ? ಇವಳು ಎಂದೋ ನನ್ನವಳಾಗಿ ಬಿಟ್ಟಳು. ಅವರಿಬ್ಬರು ಕೂತ ಆ ಸ್ಥಳವು ತೀರ ಏಕಾಂತವಾಗಿತ್ತು. ಅತ್ತ ಯಾರೂ ಸುಳಿಯಬಹುದೆಂಬ ಸಂಭವವೇ ಇದ್ದಿಲ್ಲ. ಆದರೆ ಇಂಥ ಈ ರಮ್ಯ ಏಕಾಂತದಲ್ಲಿ ಭಾರತಿಯನ್ನು ಹತ್ತಿರ ಸೆಳೆದುಕೊಳ್ಳುವ, ಅವಳನ್ನು ಮುತ್ತಿಡುವ ಇಚ್ಛೆ ಅವನಿಗೆ ಆಗಲಿಲ್ಲ. ಹೈಲಬರ್ನದ ತನ್ನ ವಾಸ್ತವ್ಯ ಮುಗಿಸಿ ತಿರುಗಿ ಬಂದಂದಿನಿಂದ ಅವನ ಮನಸ್ಸಿಗೆ ಒಂದು ಶಲ್ಯ ಸತತ ಚುಚ್ಚುತ್ತಿತ್ತು. ತನ್ನ ಕೃತ್ಯದ ಕುರಿತು ಅವನಿಗೆ ಪಶ್ಚಾತ್ತಾಪವೆನಿಸಹತ್ತಿತ್ತು. ತನ್ನ ಕೈಯಿಂದ ಒಂದು ವಿಪರೀತ ತಪ್ಪು ಘಟಿಸಿತು. ಮತ್ತು ಭಾರತಿಯ ಸಲುವಾಗಿಯೇ ಅಲ್ಲ ತನ್ನ ಸ್ವಂತದ ಕಲ್ಯಾಣಕ್ಕಾಗಿಯೂ ಆ ತಪ್ಪಿನ ಪರಿಮಾರ್ಜನೆ ತನ್ನ ಕೈಯಿಂದ ಆಗಲೇಬೇಕು – ಎಂದು ಅವನಿಗೆ ಅನಿಸಹತ್ತಿತು.

ಆದ ತಪ್ಪಿನ ಪರಿಮಾರ್ಜನೆಗೆ ಒಂದೇ ಹಾದಿ ಇತ್ತು. ಆ ಹಾದಿಯಿಂದ ಹೋಗುವ ಯೋಜನೆ ಅವರಿಬ್ಬರೂ ದೃಢಮಾಡಿದರು. ಬೇಗನೆ ಮದುವೆ ಮಾಡಿಕೊಂಡು ಅವರು ಮುಕ್ತರಾಗುವವರಿದ್ದರು. ಆದರೆ, ಹೈಲಬರ್ನದ

ಮುಕ್ಕಾಮು ಮುಗಿಸಿ ಅವರು ಮನೆಗೆ ಮರಳಿದಾಗ ಏರ್ನಾ ಒಂದು ಬೇರೆಯೇ ದುಃಖದಲ್ಲಿ ಮುಳುಗಿದ್ದಳು. ಅವಳು ಸರಿಯಾಗಿ ಕತ್ತೆತ್ತಿಯೂ ಅವರ ಕಡೆಗೆ ನೋಡಲಿಲ್ಲ. ತಲೆ ತಗ್ಗಿಸಿ ಅವಳು ಅಳುತ್ತಲೇ ಇದ್ದಳು.

ಆಲ್ಬರ್ಟನ ಕಡೆಗೆ ನೋಡದೆಯೇ ಅವಳು ಅವನ ಕೈಗೆ ಒಂದು ಪತ್ರವನ್ನು ಕೊಟ್ಟಳು. ಅರುಣಾಚಲದ ಆಶ್ರಮದಿಂದ ಆ ಪತ್ರ ಬಂದಿತ್ತು.

ಆ ಪತ್ರದಲ್ಲಿ ವಿದ್ಯಾನಂದ ಸ್ವಾಮಿ ಬರೆದಿದ್ದರು. "ನಿಮಗೆ ಈ ವಾರ್ತೆ ತಿಳಿಸುವ ಯೋಗ ನನಗೆ ಬರಬೇಕು-, ಇದು ನಿಜವಾಗಿಯೂ ನನ್ನ ದುರ್ಭಾಗ್ಯವೆಂದೇ ಭಾವಿಸುತ್ತೇನೆ. ನಾಲ್ಕೇ ದಿನಗಳ ಹಿಂದೆ ಫ್ರಾಂಜ ಮ್ಯುಲರ ರಕ್ತದ ಒತ್ತಡದ ಆಘಾತದಿಂದ ಬೇನೆ ಬಿದ್ದರು. ಮತ್ತು ಅದರಲ್ಲಿಯೇ ತ್ವರಿತವಾಗಿ ಅವರ ಅಂತ್ಯವಾಯಿತು.

ಆ ಪತ್ರದಲ್ಲಿ ವಿದ್ಯಾನಂದರು ಮುಂದೆ ಬರೆದಿದ್ದರು. "ಎಂಥ ಯೋಗಾಯೋಗವಿದು ನೋಡಿ! ಮ್ಯುಲರ ಸಾಹೇಬರಿಗೆ ಭಾರತದ ಬಗೆಗೆ ಎಂಥಹುಚ್ಚು ಮತ್ತು ಈ ಭಾರತ ಭೂಮಿಲ್ಲಿಯಯೇ ಅವರ ಅಂತ್ಯವಾಗಬೇಕೆಂದರೆ, ಇದು ಒಂದು ಯೋಗಾಯೋಗವಲ್ಲದೇ ಮತ್ತೇನು ? ನಿಮ್ಮ ಮನಃಪೂರ್ವಕ ಸಮ್ಮತಿ ಇಲ್ಲವೆಂದು ಕಂಡು ಬಂದಾಗ ಅವರು ಸನ್ಯಾಸ ದೀಕ್ಷೆ ತೆಗೆದುಕೊಳ್ಳುವದನ್ನು ತಮ್ಮ ಮನಸ್ಸಿನಿಂದ ಪೂರ್ತಿ ತೆಗೆದು ಹಾಕಿದರು. ಆದರೆ ಅನಂತರ ಧ್ಯಾನ ಧಾರಣೆಯಲ್ಲಿ ಅವರು ಪೂರ್ತಿ ಲಕ್ಷ್ಯ ಹಾಕಿದರು. ಇತ್ತೀಚೆಗಂತೂ ಮೂರು ಮೂರು ತಾಸು ಅವರ ಆಸನಕ್ಕೆ ಚ್ಯುತಿ ಒದಗುತ್ತಿದ್ದಿಲ್ಲ. ಅವರ ಎಲ್ಲ ಅಂಗಗಳಿಗೂ ತಪಸ್ಸಿನ ತೇಜವೊಂದು ಏರಿತ್ತು ! ಆದರೆ ಈಗ ಅನಿಸುತ್ತದೆ, ಈ ಯೋಗಿ ಸ್ವರೂಪದ ದೀಪ ಆರುವ ಮುಂಚೆ ದೊಡ್ಡದಾಗುತ್ತಿತ್ತು, ಅವರು ಬೇನೆ ಬಿದ್ದರು ಮತ್ತು ತಾನು ಇನ್ನು ಆ ಬೇನೆಯಿಂದ ಏಳಲಿಕ್ಕಿಲ್ಲವೆಂದು ತಿಳಿದು ಬಂದಾಗ ಅವರು ಅಂದರು, 'ನಾನೆಷ್ಟು ಭಾಗ್ಯಶಾಲಿ ! ಈ ಪವಿತ್ರ ಭಾರತ ಭೂಮಿಯಲ್ಲಿ ದೇಹವನ್ನಿಡುವ ಪುಣ್ಯ ನನ್ನದಾಗುತ್ತದೆ. ನನ್ನ ಪ್ರಿಯ ತಂದೆಯವರ ಅಸ್ಥಿ ನಿಮ್ಮ ಗಂಗೆಗೆ ಸೇರಿದವು. ಈಗ ನನ್ನ ಅಸ್ಥಿಗಳೂ ಅಲ್ಲಿಯೇ ಸೇರುವವು! ನನಗೆ ಮೋಕ್ಷ ದೊರೆಯದಿದ್ದರೂ ಅಡ್ಡಿ ಇಲ್ಲ. ಆದರೆ ನನಗೆ ನಿಮ್ಮ ಇದೇ ಪುಣ್ಯ ಭೂಮಿಯಲ್ಲಿ

ಪುನರ್ಜನ್ಮ ದೊರೆಯಬೇಕು!' ಅವರ ಇಚ್ಛೆಯಂತೆಯೇ ನಾವು ನಮ್ಮ ಈ ಅರುಣಾಚಲಂದ ಪರಮ ಪಾವನ ಭೂಮಿಯಲ್ಲಿ ಅವರ ಪಾರ್ಥಿವ ದೇಹದ ದಹನ ಮಾಡಿದೆವು. ಮತ್ತು ಅವರ ಇಚ್ಛೆಯಂತೆಯೇ ಅವರ ಅಸ್ಥಿಗಳನ್ನು ಗಂಗೆಯಲ್ಲಿ ವಿಸರ್ಜನ ಮಾಡಿಬಿಟ್ಟೆವು."

ಹೈಲಬರ್ನದಲ್ಲಿ ಈ ಪ್ರಣಯಿ ಯುಗಲವು ಪರಸ್ಪರರ ಬಗಲಲ್ಲಿ ವಿರಮಿಸಿದಾಗ ಅದೇ ವೇಳೆಗೆ ಏರ್ನಾ ಪತಿವಿಯೋಗದ ದುಃಖದಲ್ಲಿ ಮುಳುಗಿದ್ದಳು. ಯಾವ ಹೆಣ್ಣಿಗೂ ಪತಿಯ ನಿಧನದ ದುಃಖ ಅಸಹ್ಯವಾಗುವದು ಸಹಜ. ಆದರೆ ಅದರಲ್ಲಿಯೂ ಏರ್ನಾಳ ದುಃಖದ ಧಾರೆ ಇನ್ನೂ ತೀವ್ರವಾಗಿತ್ತು. ಮ್ಯುಲರ ಕುಟುಂಬದ ಎರಡನೆಯ ವಾರಸದಾರನೂ ಗಂಗೆಯನ್ನು ಸೇರಿದನು. ಮಾನಫ್ರೆಡ್ ಮತ್ತು ಫ್ರಾಂಜ ಮ್ಯುಲರ ಇವರ ಅಸ್ಥಿಗಳು ಒಂದರ ಬೆನ್ನಿಗೆ ಒಂದು ಭಾರತೀಯ ಭೂಮಿಯಲ್ಲಿ ಬಿದ್ದವು. ಗಂಗೆಗೆ ಕೂಡಿದವು. ಏರ್ನಾಳಿಗೆ ಈ ಘಟನೆಯಿಂದಲೆ ಅಪರಂಪಾರ ದುಃಖವಾಯಿತು.

ಆಲ್ಬರ್ಟನನ್ನು ಕಂಡ ಕ್ಷಣಕ್ಕೆ ತಲೆ ಕೆಳಗೆ ಹಾಕಿ ಏರ್ನಾ ಅಳುತ್ತ ಕೂತಿದ್ದಳು. ನಿಜ, ಆದರೆ ಆಮೇಲೆ ದುಃಖದಲ್ಲಿ ಕೊರಳವಟ್ಟ ಮುಳುಗಿದ ನಂತರ ಮನುಷ್ಯನ ಬಾಯಿಯಿಂದ ಹೊರ ಹೊಮ್ಮುವ ಉದ್ವೇಗದ ಉದ್ಗಾರಗಳೇ ಅವಳ ಬಾಯಿಯಿಂದ ಹೊರಬಿದ್ದವು. ಅವಳೆಂದಳು, "ದೈವವು ಹೀಗೆ ನನ್ನ ಸೇಡು ತೀರಿಸಿಕೊಂಡಿದೆ. ಭಾರತದ ಬಗೆಗೆ ನನ್ನ ಮನದಲ್ಲಿ ಇಷ್ಟು ದ್ವೇಷವಿತ್ತು. ಆ ದ್ವೇಷಕ್ಕಾಗಿ ಯಾವದೋ ಅಜ್ಞಾತ ದುಷ್ಟ ಶಕ್ತಿಯು ಹೀಗೆ ಪೂರ್ತಿ ನನ್ನ ಸೇಡು ತೀರಿಸಿಕೊಂಡಿದೆ. ಅಲ್ಬ್, ನಿಜವಾಗಿಯೂ ನನಗೆ ಇದು ಸಹನವಾಗುವದಿಲ್ಲವೋ. ........ ಏನು ಮಾಡಲಿ ಹೇಳು."

ಹೀಗೆಂದು ಅವಳು ಅಳುತ್ತ ಕೂತಳು.

ತಾಯಿಯ ಆ ಶೋಕವನ್ನು ಕಂಡು ಆಲ್ಬರ್ಟನೂ ಗದ್ಗದಿತನಾದನು. ಭಾರತಿಯ ಬಾಯಿಯಿಂದಂತೂ ಶಬ್ದಗಳೇ ಬರಲಿಲ್ಲ. ಅವರಿಬ್ಬರಿಗೂ ವಿಪರೀತ ನಾಚಿಕೆ ಅನಿಸಿತು. ಈ ಹೆಂಗಸು ಇಲ್ಲಿ ಇಂಥ ಅಪಾರ ಶೋಕದಲ್ಲಿ ಮುಳುಗಿರುವಾಗ ತಾವು ಅಲ್ಲಿ ಪರಸ್ಪರರನ್ನು ಅಪ್ಪಿಕೊಳ್ಳುತ್ತಿದ್ದೆವು. ಅಲ್ಲದ ಸಲ್ಲದ ಕೃತ್ಯಗಳಲ್ಲಿ ತೊಡಗಿದ್ದೆವು. ಈ ದುಃಖ, ಈ ವಿಷಾದ,

ಅವರು ಏನು ಮಾಡಿದರೂ ಮನಸ್ಸಿನಿಂದ ದೂರ ತಳ್ಳಲಾರದು. ತಮ್ಮ ಈ ಅಪಕೃತ್ಯದ ಪರಿಮಾರ್ಜನೆ ಮಾಡಲಿಕ್ಕೆ ಅವರಿಬ್ಬರೂ ಪರಸ್ಪರರಿಗೆ ಮದುವೆಯ ವಚನ ಕೊಟ್ಟಿದ್ದರು. ಆದರೆ ಮನೆಯಲ್ಲಿ ಬಂದ ಮೇಲೆ ಏರ್ನಾಳ ಅವಸ್ಥೆಯನ್ನು ನೋಡಿದಾಗ ಅವರು ಯಾವ ಬಾಯಿಯಿಂದ ತಮ್ಮ ಮದುವೆಯ ಸಂಕಲ್ಪವನ್ನು ಅವಳಿಗೆ ಹೇಳಬೇಕು ?

ಆಗ ಅವರಿಗೆ ಏನ್ನೂ ಮಾತಾಡಲು ಬರಲಿಲ್ಲ. ಮತ್ತು ಎರಡು ತಿಂಗಳು ದಾಟಿದಾಗ ಅವರು ತಮ್ಮ ಮದುವೆಯ ಸಂಕಲ್ಪವನ್ನು ಏರ್ನಾಳ ಹತ್ತಿರ ಆಡಿ ತೋರಿಸಿದರು. ಆಗ ಏರ್ನಾಳಿಗೆ ಏನೂ ಮಾತಾಡಲು ಆಗಲಿಲ್ಲ. ಕಾಲಗತಿಯಿಂದ ಯಾವ ದುಃಖವೂ ಹಗುರಾಗುವದು. ಹಾಗೆ ಏರ್ನಾಳ ದುಃಖವೂ ಹಗುರಾಗಿರಬೇಕೆಂದು ಭಾವಿಸಿ ಅವರು ಅವಳ ಬಳಿಗೆ ಲಗ್ನದ ಪ್ರಸ್ತಾಪವನ್ನು ಎತ್ತಿದರು. ಅದನ್ನು ಅವರು ಎತ್ತಲೇ ಬೇಕಿತ್ತು. ಹೈಲಬರ್ನದಲ್ಲಿ ನಡೆದ ಘಟನೆಗಳ ನಂತರ ಆಲ್ಬರ್ಟ ಭಾರತಿಗೆ ಲಗ್ನದ ವಚನ ನೀಡಿದ್ದನು. ಅದನ್ನು ಪಾಲಿಸಲೇ ಬೇಕಿತ್ತು.

ಆದರೆ ಅವರ ಲಗ್ನದ ಮಾತು ಕೇಳಿದಾಗ ಏರ್ನಾ ಸಂತಾಪದಿಂದ ಆಪಾದಮಸ್ತಕ ನಡುಗ ಹತ್ತಿದಳು. ಅವಳ ಮುಖ ಮುದ್ರೆಯಲ್ಲಿ ಸಂತಾಪ ತುಂಬಿ ಬಂದದ್ದು ನೋಡಿ ಆಲ್ಬರ್ಟನಿಗೆ ಮುಂದೆ ಒಂದು ಶಬ್ದವನ್ನೂ ಉಚ್ಚರಿಸಲು ಧೈರ್ಯವಾಗಲಿಲ್ಲ. ಸಾಮಾನ್ಯವಾಗಿ ತನ್ನ ತಾಯಿಗೆ ಒದಗಿದ ಇಂಥ ದುಃಖವನ್ನು ಕಂಡಾಗ ಆತ ತನ್ನ ಸುಖದ ಯಾವದೇ ವಿಚಾರವನ್ನು ಒದ್ದು ಒಗೆಯಬಹುದಿತ್ತು. ಆದರೆ ಪರಿಸ್ಥಿತಿಯು ಇಂದು ಭಾರತಿಯೊಂದಿಗೆ ಮದುವೆ ಮಾಡಿಕೊಳ್ಳುವದನ್ನೂ ಅಪರಿಹಾರ್ಯಗೊಳಿಸಿತ್ತು. ಅದರಿಂದ ಬಿಡುಗಡೆಗೆ ಬೇರೆ ದಾರಿ ಇದ್ದಿಲ್ಲ. ಒಬ್ಬ ತರುಣಿಯು ಶರೀರದ ಎಲ್ಲ ಸುಖವನ್ನೂ ಸೂರೆ ಮಾಡಿದ ಮೇಲೆ ಅವಳನ್ನು ಮದುವೆಯಾಗದೆ ಗಾಳಿಗೆ ತೂರುವದೆಂದರೆ ಶುದ್ಧ ಲಫಂಗತನ, ವಿಶ್ವಾಸಘಾತ. ಅದು ಪಶು ವೃತ್ತಿಯಾಗುತ್ತಿತ್ತು. ಆಲ್ಬರ್ಟನಲ್ಲಿ ಆ ರಾತ್ರಿ ಕೆಲಹೊತ್ತಾದರೂ ಪಶು ವೃತ್ತಿಯೇ ಜಾಗೃತವಾಗಿತ್ತು. ಆದರೂ ಅದರ ಪರಿಮಾರ್ಜನೆ ಮಾಡಲಿಕ್ಕೆ ಸತ್ ಪ್ರವೃತ್ತಿ ಅವನಲ್ಲಿ ಖಚಿತವಾಗಿಯೂ ಇತ್ತು.

ಆದರೆ ಆ ದುಃಖದಲ್ಲಿ ತನ್ನ ತಾಯಿಗೆ ಆತ ಏನು ಹೇಳಬಲ್ಲ? ವಸ್ತುತಃ ತನ್ನ ಪ್ರೀತಿಯ ತಂದೆಯ ನಿಧನದಿಂದ ಅವನಿಗೂ ಮನವಾರೆ ದುಃಖವಾಗಿತ್ತು. ಆದರೆ ಆ ವಿಶಿಷ್ಟ ಪರಿಸ್ಥಿತಿಯಲ್ಲಿ ಅವನು ತನ್ನ ದುಃಖವನ್ನು ತಡೆ ಹಿಡಿಯಬೇಕಾಯಿತು. ಮತ್ತು ಭಾರತಿಯ ಭಾವೀ ಸುಖದ ವಿಚಾರ ಮಾಡಲೇ ಬೇಕಾಯಿತು. ಅದೇ ರೀತಿ ಆತ ತನ್ನ ತಾಯಿಯ ದುಃಖವನ್ನು ತಡೆದುಕೊಂಡಿದ್ದ. ಆದರೆ ಆತ ನನ್ನ ತಾಯಿಯ ದುಃಖದ ಇದುರು ಏನುಮಾಡಬಲ್ಲ? ಮುಂಚಿನಂತೆ ಒದಗಿ ಬಂದ ಸಂಗತಿಗಳನ್ನೂ ಅವಳಿಗೆ ಆತ ಯಾವ ಬಾಯಿಯಿಂದ ಹೇಳಬಲ್ಲ? ಈಗಂತೂ ಆ ಘಟನೆಗೆ ಎರಡು ತಿಂಗಳು ಕಳೆದಿತ್ತು. ಈಗಲೂ ತಾಯಿಯ ಮುಂದೆ ಆತ ಏನು ಹೇಳುವವನಿದ್ದ ?

* * * * *

ಅವನ ಲಗ್ನದ ಸಂಕಲ್ಪ ಕೇಳಿದೊಡನೆ ಏರ್ನಾ ಸಿಟ್ಟಿನಿಂದ ಕೆಳಗೆ ಕುಸಿದು ಬೀಳುವಳೋ ಎಂದೆನಿಸಿತು. ಅವಳು ಥರಥರ ನಡುಗುತ್ತಿದ್ದಳು. ಕೈಗಳನ್ನು ಬೀಸುತ್ತಿದ್ದಳು. ಆದರೆ ಅವಳ ಬಾಯಿಯಿಂದ ಮಾತೇ ಹೊರಡುತ್ತಿದ್ದಿಲ್ಲ. ಭಾರತಿಯ ಕಡೆಗೆ ನೋಡಿ ಅವಳು ಹೇಗೋ ಅಂದಳು, "ನೀ ಹೊರಟು ಹೋಗು ನನ್ನ ಮನೆಯಿಂದ. ನಿನ್ನನ್ನು ಆ ದಿನ ಸಂಜೆಗೆ ಮನೆಯೊಳಗೆ ತೆಗೆದುಕೊಂಡೆ. ಅದು ನನ್ನದೇ ತಪ್ಪು! ಹೌದು, ನನ್ನದೇ! ಆದರೆ ಘಾತವು ನನ್ನದೇ ಆಯಿತು. ನಡೆ, ಇಲ್ಲಿಂದ ಹೊರಟು ಹೋಗು!"

ತನ್ನ ಬಲಗೈಯ ತೋರು ಬೆರಳಿನಿಂದ ಆಕೆ ಭಾರತಿಗೆ ಬಾಗಿಲ ನಿಟ್ಟನ್ನು ತೋರಿಸಿದಳು. ಈ ಪ್ರಸಂಗದಿಂದ ಆಲ್ಬರ್ಟ ಗೊಂದಲಗೆಟ್ಟು ಹೋದನು. ಏನು ಮಾತಾಡಬೇಕೆಂಬುದೇ ಅವನಿಗೆ ಹೊಳೆಯದು. ಆದರೆ ಅವನಿಗೆ ತಿಳಿಸಿ ಹೇಳಿ ಒಡಂಬಡಿಸುವಂತೆ ಏರ್ನಾ ಆಲ್ಬರ್ಟನ ಕಡೆಗೆ ನೋಡುತ್ತ ಅಂದಳು, "ಮಗು, ಈಗ ಮಾತ್ರ ನಡುವೆ ಬೀಳಬೇಡ! ಈ ಪೀಡೆ ಮನೆ ಹೊರಗೆ ಬಿತ್ತೆಂದರೆ ನಿನಗೆ ನಾಲ್ಕು ದಿನ ಸುಖವಾಗಿ ಕಳೆಯುವವು. ನಾಲ್ಕು ಸುಖದ ದಿನಗಳನ್ನು ನೀನು ಕಾಣುವಿ. ಅಲ್ಲೋ, ನಾ ಸುಳ್ಳು ಹೇಳುವದಿಲ್ಲ. ಆದರೆ ಆ ಮಾಟದ ದೇಶದ ಈ ಹೆಣ್ಣು ನಮ್ಮ ಮನೆಗೆ ಬಂದಳು ಮತ್ತು ನಮ್ಮ

ಮನೆ ಅಧೋಗತಿಗೆ ಹೋಯಿತು. ಈ ಮನೆಯೊಳಗಿನ ಸುಖ ಗೂಳೆ ಕಿತ್ತು ಹೋಯಿತು. ದಾರಿ ಸಿಕ್ಕತ್ತ ಹೊರಟು ಹೋಯಿತು. ಘಾತ ಮಾಡಿದ್ದಾಳೆ ಈ ಭಾರತದ ಹುಡುಗಿ. ನೀನು ಇವಳ ಮೋಹದಲ್ಲಿ ಬೀಳ ಬೇಡ. ಪ್ರತ್ಯಕ್ಷ ಸಂಕಟದೊಂದಿಗೆ ಮದುವೆ ಮಾಡಿಕೊಳ್ಳ ಬೇಡ.

ಆಲ್ಬರ್ಟನಿಗೆ ಅನಿಸಿತು, ಅವಳಿಗೆ ಅನ್ನಬೇಕು, "ಯಾರು ಯಾರ ಘಾತ ಮಾಡಿದರು ? ಭಾರತಿಯು ನನ್ನನ್ನೋ, ನಾನೇ ಭಾರತಿಯನ್ನೋ ?, ನಿಜವಾಗಿ ನಾನೇ ಅವಳ ಘಾತವನ್ನು ಮಾಡಿದೆನು. ನಾನೇ ಅವಳ ಆಯುಷ್ಯ ದಲ್ಲಿ ಸಂಕಟವನ್ನು ನಿರ್ಮಾಣ ಮಾಡಿದೆನು. ಬೇಕಾದರೆ ನನ್ನನ್ನೂ ಈ ಮನೆಯಿಂದ ಹೊರದೂಡು. ಅವಳನ್ನು ಮನೆಯಲ್ಲಿ ಇಟ್ಟುಕೋ. ಅವಳು ಹೋದರೆ ಮನೆಯ ಭಾಗ್ಯವೇ ಹೊರಗೆ ಹೋದೀತು".

ಆದರೆ ಪ್ರಕಟವಾಗಿ ಆತ ಏನೂ ಹೇಳದಾದ.

*   *   *   *

ಮ್ಯುಲರ ಕುಟುಂಬದಿಂದ ಭಾರತೀ ಹೊರಬಿದ್ದಳು. ಅವಳು ಅಕ್ಷರಶಃ ಬೀದಿಯಲ್ಲಿ ಬಿದ್ದಂತೆ ಆದಳು. ಎಂಥ ವಿಚಿತ್ರ ದೈವಗತಿ ಅವಳದು ! ಅಪರಾಧ ಬೇರೆಯೇ ವ್ಯಕ್ತಿ ಮಾಡಿದ್ದು. ಆದರೆ ಅದರ ದಂಡ ಅವಳ ಹಣೆಗೆ ಬಡಿಯಿತು. ಆದರೂ ಈ ಕುರಿತು ಆಕೆ ಅಲ್ಬರ್ಟನನ್ನು ಏನೂ ದೂಷಿಸಲಿಲ್ಲ. ತನ್ನ ಭಾಗ್ಯದ ಭಾಗವಾಗಿ ಬಂದದ್ದೆಲ್ಲ ತಾನು ಸುಮ್ಮನೆ ಭೋಗಿಸಲೇಬೇಕು ಎಂದು ಆಕೆ ಸಾಮಾನ್ಯವಾಗಿ ಒಪ್ಪುತ್ತಿದ್ದಳು. ಹಾಗೆ ಒಪ್ಪುವದರಲ್ಲಿ ಅವಳಿಗೆ ಪರಮಾವಧಿಯ ದುಃಖವೂ ಆಗುತ್ತಿತ್ತು. ಆ ದುಃಖವನ್ನು ಆಕೆ ಸುಮ್ಮನೆ ಅವಳ ಸಹನ ಮಾಡುತ್ತಿದ್ದಳು. ಆದರೆ ಈ ವೇಳೆಗೆ ಅತ್ಯಂತ ಚಮತ್ಕಾರಿಕವಾಗಿತ್ತು, ಪರಿಸ್ಥಿತಿಮತ್ತು ಇಂಥ ಚಮ ತ್ಕಾರಿಕ ಪರಿಸ್ಥಿತಿಯಲ್ಲಿ ಅವಳು ಬೀದಿಗೆ ಬಂದಿದ್ದಳು.

ಅವಳು ಬೀದಿಗೆ ಬಂದಾಗ ಅವಳ ಹೊಟ್ಟೆಯಲ್ಲಿ ಅವಳ ತಾಯ್ತನದ ಅಂಕುರ ಬೆಳೆಯುತ್ತಿತ್ತು........

ತಾಯ್ತನ !-

ಮಾನವೀ ಜೀವನದಲ್ಲಿಯ ಸರ್ವ ಶ್ರೇಷ್ಠ ಪವಿತ್ರ ಭಾವನೆ! ಅದರ ಇದುರು ಪಶುತ್ವ ನಿಸ್ತೇಜವಾಗುತ್ತದೆ. ಪಾವಿತ್ರ್ಯಕ್ಕೆ ತೇಜವೇರುತ್ತದೆ. ನವ ನಿರ್ಮಿತಿಯು ಮಾನವೀ ಜೀವನದೊಳಗಿನ ಸರ್ವಶ್ರೇಷ್ಠ ಸುಖ. ತಾಯ್ತನದ ಈ ಪವಿತ್ರ ಭಾವನೆಯ ಇದುರಿಗೆ ಪಶುತ್ವದ ತಲೆ ಕೆಳಗೆ ಬಾಗುವದು ಎಂಬುದಕ್ಕೆ ಸಂದೇಹವೇ ಇಲ್ಲ. ಆದರೆ ಪ್ರತ್ಯಕ್ಷ ಪಾವಿತ್ರ್ಯವೂ ಈ ಭಾವನೆಗೆ ವಂದನೆ ಸಲ್ಲಿಸುವದು!

ಆದರೆ ಭಾರತಿಗೆ ಲಭಿಸಲಿರುವ ತಾಯ್ತನದ ಜಾತಿ ಯಾವದು? ಕೌಮಾರ್ಯಾವಸ್ಥೆಯಲ್ಲಿ ಲಭಿಸುವ ತಾಯ್ತನ ಪವಿತ್ರವೆಂದು ಪರಿಗಣಿಸಲು ಬರುವದೇ? ಹೇಗೂ ಯಾರಿಗೂ ಸಿಗುವ ತಾಯ್ತನ ಪವಿತ್ರವೆಂದು ಹೇಳಬಹುದೆ?

ಅವಳಿಗೆ ಹಾಗೆ ಅನಿಸಲಿಲ್ಲ. ಯಾವದೇ ಸಮಾಜದ ಧಾರಣೆ ಮಾಡುವಾಗ, ಯಾವದೇ ಸಮಾಜದ ಸುಧಾರಣೆ ಮಾಡುವಾಗ ಆ ಸಮಾಜದ ಮೇಲೆ ಅಪರಿಹಾರ್ಯವಾಗಿ ಕೆಲವು ಲೌಕಿಕ ಬಂಧನಗಳನ್ನು ಹಾಕಬೇಕಾಗುತ್ತದೆ. ಅದರ ಹೊರತು ಸಮಾಜ ಎದ್ದು ನಿಲ್ಲಲಾರದು. ಲೌಕಿಕ ಬಂಧನಗಳಿಂದ ಕಟ್ಟಿ ಕೊಳ್ಳುವದು, ಇದೇ ಸಮಾಜದ ಧರ್ಮ. ಆ ಧರ್ಮದ ಕಕ್ಷೆಯಲ್ಲಿ ಕೌಮಾರ್ಯಾವಸ್ಥೆಯಲ್ಲಿ ಒದಗುವ ಈ ತನ್ನ ಮಾತೃತ್ವವು ಹೊಂದಿಕೆ ಆಗುವದಿಲ್ಲವೆಂದು ಅವಳಿಗೆ ಅನಿಸುತ್ತಿತ್ತು. ಅವಳ ಮನಸ್ಸಿನ ಮೇಲೆ ಇದ್ದ ಸಂಸ್ಕಾರಗಳು ಭಾರತದವು! ಬಂಧನರಹಿತ ಸಮಾಜದ ಕಲ್ಪನೆ ಅವಳ ದೇಶಕ್ಕೆ ಮಾನ್ಯವಿದ್ದಿಲ್ಲ. ಮತ್ತು ಯಾವ ದೇಶದ ರಕ್ತ ಅವಳ ಮೈಯಲ್ಲಿ ಚಿಮ್ಮಿ ಹರಿಯುತ್ತಿತ್ತೋ ಅವಳ ಆ ರಕ್ತದಲ್ಲಿ ಈ ಕಲ್ಪನೆ ಮಾನ್ಯವಿದ್ದಿಲ್ಲ.

ಆದರೂ ಕೌಮಾರ್ಯದ ಅವಸ್ಥೆಯಲ್ಲಿ ಮಾತೃತ್ವ ಅವಳ ಮಾತೃಭೂಮಿಗೆ ಗೊತ್ತಿಲ್ಲದ ಸಂಗತಿಯೋ? ಭಾರತೀಯ ಸಂಸ್ಕೃತಿಗೆ ಈ ಕಲ್ಪನೆ ಒಗ್ಗುವಂತೆ ದಕ್ಕುವಂತೆ ಇದ್ದಿಲ್ಲವೋ? ಕುಂತಿಯ ಚರಿತ್ರೆಯನ್ನು ಅವಳು ಓದಿದ್ದಳು. ಶಕುಂತಲೆ ಅವಳಿಗೆ ಗೊತ್ತು ಉಷಾ-ಅನಿರುದ್ಧರ, ನಳ ದಮಯಂತಿಯರ ಪ್ರೇಮ ಅವಳು ಬಲ್ಲಳು. ಪಾಶ್ಚಾತ್ಯರಿಗೆ ಪ್ರಿಯಳೂ ಪವಿತ್ರಳೂ ಅನಿಸುವ ಕುಮಾರಿ ಮಾತೆ ಮೇರಿಯೂ ಅವಳಿಗೆ ಗೊತ್ತು.

ನಿಜವಾದ ಪ್ರೇಮದ ಆಧಾರವುಳ್ಳ ಮಾತೃತ್ವವನ್ನು ಒಟ್ಟಾರೆ ಪವಿತ್ರವೆಂದೇ ಮನ್ನಿಸಬೇಕು, ಎಂಬ ಆಧಾರವೇ ಅವಳಿಗೆ ಪುರಾಣ ಗ್ರಂಥಗಳಿಂದ ಸಿಗುತ್ತಿತ್ತು. ಸಾಹಿತ್ಯ ಗ್ರಂಥಗಳಿಂದ ಸಿಗುತ್ತಿತ್ತು. ಆದರೆ ಪುರಾಣದೊಳಗಿನ ಬದನೆ ಕಾಯಿ ಕೊನೆಗೂ ಪುರಾಣದಲ್ಲಿಯೇ ಉಳಿಯುವುವೆಂಬುದೂ ಅವಳು ಅರಿತಿದ್ದಳು. ಇದ್ದ ವಿಚಿತ್ರ ಪರಿಸ್ಥಿತಿಯೊಳಗಿಂದ ಅವಳು ದಾರಿ ಮಾಡಿಕೊಳ್ಳಬೇಕಾಗಿತ್ತು.

ಆದರೆ ಅವಳ ಸುದೈವವಿಷ್ಟೇ, ಆಲ್ಬರ್ಟ ಅವಳ ಬೆನ್ನಿಗೆ ನಿರ್ಧಾರವಾಗಿ ನಿಂತಿದ್ದನು. ಆತನ ಒಬ್ಬ ಮಿತ್ರನಿಗೆ ವರ್ಗವಾಗಿತ್ತು. ಅವನ ಫ್ಲ್ಯಾಟ ಖಾಲಿಯಾಗಿತ್ತು. ಆ ಫ್ಲ್ಯಾಟಿನಲ್ಲಿ ಆತನು ಭಾರತಿಯೇ ಎಲ್ಲ ವ್ಯವಸ್ಥೆಯನ್ನು ಮಾಡಿಕೊಟ್ಟನು. ದಿನಾಲು ಆವಳ ಭೆಟ್ಟಿಗೆ ಹೋಗಿ ಅವನು ಅವಳಿಗೆ ಧೈರ್ಯ ಕೊಡುತ್ತಿದ್ದನು. ನಡುನಡುವೆ ಅವರಿಬ್ಬರ ಊಟಗಳೂ ಜತೆಗೇ ಆಗುತ್ತಿದ್ದವು. ಆತ ಅವಳಿಗೆ ದಿನಾಲು ಹೇಳುತ್ತಿದ್ದ, "ನೀನು ಯಾವದೂ ಚಿಂತೆ ಮಾಡಬೇಡ. ಏನೇ ಆದರೂ ನಾನು ನಿನ್ನನ್ನು ಮದುವೆಯಾಗುವವನೇ. ನನ್ನ ತಾಯಿಯ ದುಃಖವಿನ್ನೂ ಹಸಿಯಿದೆ. ಕೆಲವು ದಿನ ಕಳೆಯಲಿ, ನಾವು ಲಗ್ನವಾಗೋಣ. ನೀನು ಮನಸ್ಸಿನಲ್ಲಿ ಯಾವ ಶಂಕೆಯನ್ನು ಇಟ್ಟು ಕೊಳ್ಳಬೇಡ".

ಇದಕ್ಕೆ ಆಕೆ ಅಂದಳು. "ಛೇ ಛೇ! ನನ್ನ ಮನದಲ್ಲಿ ಯಾವ ಶಂಕೆಯೂ ಇಲ್ಲಪ್ಪಾ!"

ಹೀಗೆಂದು ಅವಳು ಮೆಲ್ಲಗೆ ಅವನ ಬಗಲಲ್ಲಿ ಸರಿಯುವಳು. ಆಲ್ಬರ್ಟ ಅವಳನ್ನು ಎಳೆದು ಕೊಂಡು ಅವಳ ವಿಪುಲ ಕುರುಳು ಕೇಶ ಭಾರದ ಮೇಲಿಂದ ಕೈ ಆಡಿಸುವನು ಮತ್ತು ಅವಳ ಕಿವಿಯ ಹತ್ತಿರ ಬಾಯಿಯನ್ನು ಒಯ್ದು ಪಿಸುಗುಡುವನು, "ಇಂಥ ರತ್ನ ಕೈಗೆ ಸಿಕ್ಕಮೇಲೆ ಅದನ್ನು ಕಳೆದು ಕೊಳ್ಳುವಂಥ ಮೂರ್ಖತನ ಮಾಡುವರೇ?" ಇಂಥ ವೇಳೆಗೆ ತನ್ನ ತಾಯ್ತನದ ಕಲ್ಪನೆಯಿಂದ ಆಕೆ ನಿಮಿರುವಳು. ಅವಳ ಅಂಗಾಂಗಗಳಲ್ಲಿ ಸುಖದ ರೋಮಾಂಚಗಳು ನಿಲ್ಲುವವು.

ಭಾರತಿಯ ನಿಕಟ ಸಹವಾಸದಲ್ಲಿ ಈ ರೀತಿ ಅವನ ದಿನಗಳು ಸುಖದಲ್ಲಿ ಸಾಗಿದ್ದವು. ಅವನ ಆಲಿಂಗನದಿಂದ ದೂರ ಸರಿಯುವಾಗ ಭಾರತೀ ದಿನಾಲು ಹೇಳುವಳು. "ಯಾರದು ಹೇಳುವವರು–ಮಾನವೀ ಜೀವನ ದುಃಖಗಳಿಂದ ತುಂಬಿದೆ ಯೆಂದು? ಈ ಪ್ರಪಂಚದಲ್ಲಿ ನನಗಂತೂ ಸುಖದ ಹೊರತು ಬೇರೆ ಏನೂ ಕಾಣುವದೇ ಇಲ್ಲ!"

ಇದಕ್ಕೆ ಅವಳನ್ನು ಮತ್ತೆ ಹತ್ತಿರ ಎಳೆದುಕೊಂಡು ಆಲ್ಬರ್ಟ ಅನ್ನುತ್ತಿದ್ದ, "ನಿನಗೊಬ್ಬಳಿಗೆ ಈ ಸುಖ ಕಾಣುವದು, ಅಲ್ವೇ? ಲೇ ಹುಚ್ಚೀ, ಸುಖವು ಇಬ್ಬರ ರಾಜ್ಯ. ಇದು ನೋಡು ಸುಖ!" ಎಂದು ಅವಳ ಕೆನ್ನೆಯ ಮೇಲೆ ಚಟ್ಟನೆ ತುಟಿಗಳನ್ನು ಒತ್ತುವದಕ್ಕೆ ಆತ ಮೋರೆಯನ್ನು ಮುಂದೆ ಮಾಡುವನು. ಆಗ ಅವನ ಮೋರೆಯನ್ನು ದೂರ ಸರಿಸುವ ಹುಸಿ ಅಭಿನಯ ಮಾಡುತ್ತ ಅವಳು ಅನ್ನುವಳು. "ಹಾಂ ಹಾಂ! ಸಾಕು, ಗೊತ್ತಾಯಿತು, ಗೊತ್ತಾಯಿತು ಬಿಡಿ!"

* * *

ಒಂದು ದಿನ ಅವನು ಅವಳಿಗೆ ಒಂದು ವಾರ್ತೆ ಹೇಳಿದನು. ಅದನ್ನು ಕೇಳಿ ಅವಳು ಒಮ್ಮೆಲೇ ಉದಾಸೀನಳಾದಳು. ಸುಖದ ದೀರ್ಘಮಾರ್ಗದಲ್ಲಿ ಪ್ರಯಾಣ ಮಾಡುತ್ತಿರುವಾಗ ನಡುವೆಯೋ ದುಃಖವು ಭೆಟ್ಟಿಯಾದಂತೆ ಅನಿಸಿತು. ಆ ವಾರ್ತೆ ಕೇಳಿ ಅವಳಿಗೆ ಆನಂದವಾಗುವದೆಂದು ಆಲ್ಬರ್ಟ ಭಾವಿಸಿದ್ದ. ಆದರೆ ಅವನ ಕಲ್ಪನೆಯಂತೆ ಅವಳಿಗೆ ಏನೂ ಆನಂದ ಅನಿಸಿದ್ದು ಕಾಣಲಿಲ್ಲ. ಅಲ್ಲದೆ ಸುಖದಿಂದ ತುಂಬಿ ತುಳುಕುವ ಬಟ್ಟಲನ್ನು ಯಾರೊ ತನ್ನ ಇದುರಿನಿಂದ ಸೆಳೆದೊಯ್ದಂತೆ ಅವಳಿಗೆ ಭಾಸವಾಯಿತು.

ಒಂದು ದಿನ ಮಧ್ಯಾಹ್ನ ಆಲ್ಬರ್ಟ ತನ್ನ ಆಫೀಸಿನಿಂದ ನೇರವಾಗಿ ಅವಳ ಫ್ಲ್ಯಾಟಿಗೆ ಬಂದನು ಮತ್ತು ನಗುನಗುತ್ತ ಅವಳಿಗೆ ಒಂದು ವಾರ್ತೆಯನ್ನು ಹೇಳಿದನು. ಆತ ಅಂದ, "ನನಗೆ ಬಲು ದೊಡ್ಡ ಬಢತಿ ಆಗಿದೆ."

ಇದಕ್ಕೆ ಭಾರತಿ ಯೆಂದಳು. "ಮೊದಲು ಬಾಯಿ ಸವಿ ಮಾಡದೆ ಈ ಸುದ್ದಿ ಹೇಳುವಿಯಾ?"

ತನ್ನ ಬಾಯಿಯನ್ನು ಅವಳ ತುಟಿಗಳತ್ತ ಒಯ್ಯುತ್ತ ಆತ ಅಂದ., ಇಕೊ ನೋಡು, ನಿನ್ನ ಬಾಯಿ ಸವಿಮಾಡುತ್ತೇನೆ. "ಈಗಾದರೂ ಆಯಿತಲ್ಲ!"

ಅವಳು ಹಿಂದೆ ಸರಿದಳು. ಅವನ ತುಟಿ ಅವಳ ತುಟಿಯ ಮೇಲೆ ಪೂರ್ತಿ ತಂಗಿದ್ದೇ ಇಲ್ಲ, ಹಿಂದೆ ಸರಿಯುವಾಗ ಅವಳು ಅಂದಳು. "ಇದು ನಿನ್ನ ನಿತ್ಯದ ಅಧಿಕಪ್ರಸಂಗ. ಈಗ ನಿನಗೆ ಬಢತಿ ಆಯಿತು. ನೀನು ದೊಡ್ಡ ಮನುಷ್ಯನಾಗುವಿ. ಈಗಾದರೂ ತುಸು ಸಭ್ಯತೆಯಿಂದ ನಡೆಯಲು ಕಲಿ!"

"ಅಂದರೆ ಈ ವರೆಗೆ ನಾನು ಅಸಭ್ಯತೆಯಿಂದಲೇ ನಡೆದೆದ್ದೋ ? ಹೀಗೆ ನಡೆಯುವದರಲ್ಲಿ ಅಸಭ್ಯತೆ ಇದ್ದರೆ ನನಗೆ ಆ ದೊಡ್ಡಸ್ತಿಕೆಯೇ ಬೇಡ; ಆ ಸಭ್ಯತೆಯ ನಡತೆಯೂ ಬೇಡ."

ಅವನ ಈ ಮಾತಿಗೆ ಅವಳು ಅಂದಳು. "ಸರಿ ಸರಿ! ನನಗೆ ಎಲ್ಲವನ್ನೂ ಹೇಳು ಈಗ!"

ಅವನಂದ, "ಆದರೆ ಎಲ್ಲವನ್ನು ಹೇಳಿದ ನಂತರ ಸಭ್ಯತೆಯ ಬಂಧನವನ್ನು ಮಾತ್ರ ನನ್ನ ಮೇಲೆ ಹೇರಕೂಡದು!"

"ಇಲ್ಲ, ಹೇರುವದಿಲ್ಲ."

"ಹಾಗಾದರೆ ಹೇಳುತ್ತೇನೆ. ನಮ್ಮ ಕಂಪನಿಯ ಒಂದು ಹೊಸ ಶಾಖೆ ಭಾರತದಲ್ಲಿ ತೆರೆಯಲಿದೆ. ಯಾಕೆ ಗೊತ್ತೇ ? ಚಿತ್ರಪಟ ವ್ಯವಸಾಯಕ್ಕಾಗಿ! ಭಾರತದಲ್ಲಿಯ ಒಬ್ಬ ಭಾರಿ ದೊಡ್ಡ ಉದ್ದಿಮೆಗಾರರು ನಮ್ಮ ಕಂಪನಿಯ ಪಾಲುಗಾರರಾಗಲಿದ್ದಾರೆ. ಕಲಕತ್ತೆಯ ಹತ್ತಿರವೇ ಸ್ಥಳವನ್ನು ಕೊಳ್ಳುವ ವಿಚಾರ ನಡೆದಿದೆ. ನಮ್ಮ ಮೆನೇಜರ ಪ್ರಥಮ ಪರೀಕ್ಷಣಕ್ಕಾಗಿ ನನ್ನನ್ನು ಅಲ್ಲಿಗೆ ಕಳುಹಿಸಲು ನಿರ್ಧರಿಸಿದ್ದಾರೆ. ಭಾರತಕ್ಕೆ ಹೋಗಲು ಯಾರೂ ಸಿದ್ಧರಿಲ್ಲ ನಾನೆಂದೆ,– ನಾ ಹೋಗುತ್ತೇನೆಂದು. ಕೂಡಲೆ ಅವರು ನನ್ನನ್ನು ಆ ಕೆಲಸಕ್ಕೆ ನೇಮಿಸಿಯೇ ಬಿಟ್ಟರು. ಈಗ ನಮ್ಮ ಉಕ್ಕಿನ ಕ್ರುಪ್ ಕಂಪನಿಯ ರಜತ ಸಾಮ್ರಾಜ್ಯ ನಿಮ್ಮ ಭಾರತದಲ್ಲಿಯೂ ಕೈಕಾಲು ಚಾಚಲಿದೆ. ಆ ಸಾಮ್ರಾಜ್ಯದಲ್ಲಿ ನಾನೂ ಸೇರಲಿದ್ದೇನೆ. ಹೇಗೆ? ಇದೊಂದು ಮೋಜು ಹೌದೋ ಅಲ್ಲೋ? –ಬೆಳ್ಳಿಯ ತೆರೆಯ ಮೇಲಿನ ಮಾದಕ ಮೋಜು!."

ಇದನ್ನು ಕೇಳುವಾಗ ಭಾರತಿಯ ಮುಖದ ಮೇಲಿನ ಆನಂದ ಒಮ್ಮೆಲೆ ಇಳಿದು ಹೋಯಿತು. ಆದರೆ ಇದನ್ನೆಲ್ಲ ಹೇಳುವಾಗ ಅಲ್ಬರ್ಟನು ಮಾತ್ರ ರಂಗಿನಲ್ಲಿ ಬಂದಿದ್ದ.

ಅವನ ಲಕ್ಷ್ಯ ಅವಳ ಕಡೆಗೆ ಇದ್ದೇ ಇಲ್ಲ. ಅಷ್ಟು ಆತ ಆ ಕಲ್ಪನಾ ರಾಜ್ಯದಲ್ಲಿ ತನ್ಮಯನಾಗಿ ಬಿಟ್ಟಿದ್ದ.

ತನ್ನ ವೃತ್ತಾಂತವನ್ನು ಹೇಳುತ್ತ ಆತ ಮುಂದರಿದ, "ನಿಮ್ಮ ದೇಶಕ್ಕೆ ಹೋಗಲು ಯಾರೂ ಸಿದ್ಧರಿದ್ದಿಲ್ಲ. ಅದೇ ಸಂಗತಿಯ ಲಾಭ ನಾನು ಪಡೆದೆನು. ನಿನ್ನ ಭೆಟ್ಟಿ ಆಯಿತೆಂದು ಅಲ್ಲ; ಆದರೆ ನನಗೆ ನಿಮ್ಮ ದೇಶವನ್ನು ಒಮ್ಮೆ ಕಣ್ಣು ತುಂಬ ನೋಡಬೇಕೆಂದಿದೆ. ಆ ದೇಶದಲ್ಲಿ ಏನು ಆಕರ್ಷಣ ವಿದೆಯೋ ಕಾಣಬೇಕೆಂದಿದೆ. ನನ್ನ ಅಜ್ಜಯ್ಯ, ನನ್ನ ತಂದೆ, ಆ ದೇಶದ ಮಹಿಮೆ ಹೊಗಳುತ್ತ ಹಾಡುತ್ತ ಗಂಗೆಯನ್ನೇ ಸೇರಿದರು. ಅದೆಂಥ ಜಾದು ಗಂಗೆಯಲ್ಲಿ-ಎಂಬುದನ್ನು ಒಮ್ಮೆ ಹತ್ತಿರದಿಂದ ನೋಡಬೇಕೆಂದಿದೆ. ನಿಜ ವಾಗಿಯೂ ನನ್ನ ಈ ಮನಸ್ಸು ನಿಮ್ಮ ಆ ಗಂಗೆಯಲ್ಲಿ ಸೇರಿದೆ. ಗಂಗಾ ನನ್ನ ಮತಿ ಮನಸ್ಸಿನಲ್ಲಿ ಹೋಗಿ ವ್ಯಾಪಿಸಿದೆ. ಅಂದಾಗ ಈ ನಡೆದು ಬಂದ ಸಂಧಿಯನ್ನೂ ಯಾರು ಬಿಡುವವರು?

ಕೊನೆಯ ವಾಕ್ಯವನ್ನು ಆಡುವಾಗ ಅಲ್ಬರ್ಟ ಅವಳ ಕಡೆಗೆ ನೋಡು ತ್ತಿದ್ದನು.

ಅವನು ಆಶ್ಚರ್ಯದಿಂದ ಕೇಳಿದ, "ಇದೇನು? ಈ ವಾರ್ತೆ ಕೇಳಿ ನಿನಗೆ ಆನಂದವಾಗಲಿಲ್ಲವೇ? ನಿನ್ನ ಅಲ್ಬರ್ಟ ನಿನ್ನ ದೇಶಕ್ಕೆ ಹೋಗುತ್ತಾನೆ. ಈ ಸುದ್ದಿ ಕೇಳಿ ಒಳ್ಳೆ ಸುಮ್ಮನೇ ಕೂತು ಬಿಟ್ಟೆಯಲ್ಲ! ಇಷ್ಟರಲ್ಲಿಯೇ ನೀನು ಆನಂದದಿಂದ ಕುಣಿಯಲು ಸುರು ಮಾಡಬೇಕಿತ್ತು. ನನ್ನ ಬೆನ್ನು ಚಪ್ಪರಿಸ ಬೇಕಿತ್ತು. ನಿತ್ಯದಂತೆಯೇ ನನ್ನ ಕೂದಲು ಹಿಡಿದು ಗದಗದ ಅಲುಗಾಡಿಸ ಬೇಕಿತ್ತು. ಆನಂದದಿಂದ ಸ್ಮೈಮರೆಯಬೇಕಿತ್ತು. ಲೇ "ನಾ ನಿನ್ನ ನಾಡಿಗೆ ಹೊರಟೆ! "

"ಅದು ಶಕ್ಯವಿಲ್ಲ, ಅಲ್ಬರ್ಟ, ಅದು ಶಕ್ಯವಿಲ್ಲ!"

ಅವಳ ಆ ಮಾತಿಗೆ ಆತ ಅಂದ, "ಶಕ್ತವಿರದಿರಲು ಏನಾಯಿತು? ಅದು ನಿನ್ನ ತಾಯಿಗೆ ಕೇಳು !"

ಭಾರತಿಯ ಈ ಮಾತಿಗೆ ಆತನೂ ವಿಚಾರಮಗ್ನನಾದನು. ಕೆಲ ಹೊತ್ತಿನ ಮೇಲೆ ತನ್ನಷ್ಟಕ್ಕೆ ಮಾತಾಡುವಂತೆ ಅಂದನು, "ನಿಜವಾಗಿಯೂ ಅಮ್ಮ ನನಗೆ ಈ ವಿಷಯದಲ್ಲಿಯಾದರೂ ವಿರೋಧ ಮಾಡಬಾರದು. ನಿನಗೆ ಅನಿಸುವದಿಲ್ಲವೇ ಹಾಗೆ? "

"ನನ್ನ ಅನಿಸಿಕೆಯ ಮೇಲೆ ಏನು ಅವಲಂಬಿಸಿದೆ ಆಲ್ಬರ್ಟ? ಆದರೆ ನೀ ಮಾತ್ರ ಚೆನ್ನಾಗಿ ನೆನಪಿಟ್ಟುಕೊ, ನೀನು ನಿನ್ನ ಈ ಹೊಸ ಕೆಲಸಕ್ಕೆ ಹೊಗಲು ಸಾಧ್ಯವಿಲ್ಲ."

ಮತ್ತು ಅವಳ ಊಹೆ ನಿಜವಾಯಿತು.

ಮನೆಗೆ ಹೋಗಿ ಅವನು ಏನ್ನಾಳಿಗೆ ಅಂದನು. "ನನಗೆ ಬಹಳ ದೊಡ್ಡ ಬಢತಿ ಸಿಕ್ಕಿದೆ. "

" ನಿಜವೇ? "

"ಹೌದು, ಆದರೆ ನೌಕರಿಗಾಗಿ ನಾನು ಪರದೇಶಕ್ಕೆ ಹೋಗಬೇಕಾಗುತ್ತದೆ.''

ಏನ್ನಾ ಕೂಡಲೆ ಅಂದಳು. "ಭಾರತವನ್ನು ಬಿಟ್ಟು ಎಲ್ಲಿ ಬೇಕೊ ಅಲ್ಲಿ ಹೋಗು."

"ನಾನು ಭಾರತಕ್ಕೇ ಹೋಗಬೇಕಾಗಿದೆ."

ಇಷ್ಟು ಹೇಳಲಿಕ್ಕೂ ಆಲ್ಬರ್ಟನಿಗೆ ಬಹಳ ಪರಿಶ್ರಮ ಬಿತ್ತು. ತನ್ನ ಈ ಮಾತಿಗೆ ಏನ್ನಾ ಏನು ಉತ್ತರ ಕೊಡುವಳು ಎಂಬ ಕಡೆಗೆ ಅವನ ಲಕ್ಷ್ಯ ನಟ್ಟಿತು. ಭಾರತದ ಹೆಸರು ಹೊರಟೊಡನೆಯೇ ನಿತ್ಯದ ನಿಯಮದಂತೆ ಅವಳು ಬೇಸರ ಪಟ್ಟುಕೊಳ್ಳುವಳು. ಭಾರತದ ಬಗೆಗೆ ಬಾಯಿಗೆ ಬಂದಂತೆ ಬಡಬಡಿಸುವಳು ಮತ್ತು ಕೊನೆಗೆ ವಿಪರೀತ ಸಂತಾಪದಿಂದ ಥರಥರ ನಡುಗ ಹತ್ತುವಳು. ಆಗ ಅವಳ ಬಾಯಿಂದ ಒಂದು ಶಬ್ದವೂ ಹೊರಬೀಳಲಿಕ್ಕಿಲ್ಲ. ಹೀಗೆ ಆತ ಕಲ್ಪನೆ ಮಾಡಿದ್ದನು.

ಆದರೆ ಅವಳು ಅದರಲ್ಲಿ ಯಾವದನ್ನೂ ಮಾಡಲಿಲ್ಲ. ಕೆಳ ದನಿಯಲ್ಲಿ ಅವಳು ಇಷ್ಟೇ ಅಂದಳು. "ನಾನು ಸತ್ತಮೇಲೆ ನೀನು ಭಾರತಕ್ಕೆ ಹೋಗು."

ಮತ್ತು ತನ್ನ ಇಷ್ಟು ಮಾತು ಸಾಕಾಗಲಿಕ್ಕಿಲ್ಲವೆಂದು ಅನಿಸಿ ಅವಳು ಮುಂದರಿದಳು. "ಇನ್ನು ನೀನು ಭಾರತಕ್ಕೆ ಹೊದ ಮೇಲೆ ನಾನು ಜೀವಂತ ಉಳಿಯುವದು ಅಷ್ಟೇ ಇದೆ!"

ಅದಕ್ಕೆ ಆಲ್ಬರ್ಟ ಏನು ಅನ್ನಬಹುದಿತ್ತು? ಅವನು ಏರ್ನಾಳನ್ನು ಕೇಳಿದ, "ನಾನು ಚಾಕರಿಗಾಗಿ ಭಾರತಕ್ಕೆ ಹೊಗಬಾರದೆಂದು ನಿನ್ನ ಹೇಳಿಕೆಯೋ?"

ಏರ್ನಾ ಅಂದಳು. "ನಾನು ಅದನ್ನೇ ಮತ್ತೆ ಮತ್ತೆ ಅಡಿ ದಣಿದು ಹೋಗಿದ್ದೇನೋ! ಬೇಕಾದ್ದು ಮಾಡು. ಯಾರ ದೈವಕ್ಕೂ ನಾನು ಒಬ್ಬಳೇ ಏನು ಕೈಭಾರ ಕೊಡಬಲ್ಲೆ? ಅವರವರ ದೈವ ಅವರವರದು. ಹೊಗು, ದಾರಿ ಒಡೆದತ್ತ ಹೊಗು. ನಿಮಗೀಗ ರೆಕ್ಕೆಯೊಡೆದಿವೆ. ನಿಮ್ಮನ್ನು ತಡೆದಿರು ವದು ಸಾಧ್ಯವೆ? ಮತ್ತೆ ತಡೆದು ಇಟ್ಟಾದರೂ ಏನು ಪ್ರಯೋಜನ?"

ಏರ್ನಾಳ ಈ ಮಾತಿಗೆ ಆತ ತಟ್ಟನೆ ಅಂದ. "ಸರಿ, ನಾನು ಭಾರತಕ್ಕೆ ಹೊಗುವದರಿಂದ ನಿನಗೆ ದುಃಖವಾಗುವದಾದರೆ ನನಗೆ ಈ ಹೆಚ್ಚಿನ ಹುದ್ದೆಯು ಅಥವಾ ಸಂಬಳದ ಪರಿವೆ ಇಲ್ಲ. ನಾನು ನನ್ನ ಹೋಗುವ ಯೋಜನೆಯನ್ನು ರದ್ದು ಮಾಡುತ್ತೇನೆ."

ಮತ್ತು ಮರುದಿನವೇ ಅವನು ತನ್ನ ವರಿಷ್ಠರಿಗೆ ಹಾಗೆ ತಿಳಿಸಿಯೂ ಬಿಟ್ಟನು. ಅವರಿಗೆ ಸ್ವಲ್ಪದರಲ್ಲಿ ತನ್ನ ತಾಯಿಯ ಅಂಬೋಣವನ್ನು ತಿಳಿಸಿದನು ಭಾರತಕ್ಕೆ ಹೊಗುವೆನೆಂದು ಮೊದಲಿಗೆ ಆಶ್ವಾಸನವಿತ್ತು ಅದನ್ನು ಹಿಂದೆಗೆದು ಕೊಂಡ ಬಗ್ಗೆ ಆತ ವ್ಯಸನವನ್ನು ವ್ಯಕ್ತಮಾಡಿದನು.

ಹೈಡೆಲ್‌ಬರ್ಗ ದಲ್ಲಿಯ ಕ್ರುಪ್ ಕಂಪನಿಯ ಮುಖ್ಯಸ್ಥ ಹರಬರ್ಟ ಹ್ಯಾನ ಅವನ ಮಾತಿಗೆ ಮನಸಾರೆ ನಕ್ಕನು ಮತ್ತು ಅಂದನು, "ನಿನ್ನ ತೊಡಕು ನಾವು ಅರ್ಥ ಮಾಡಿಕೊಳ್ಳಬಲ್ಲೆವು. ತಾಯಿಯ ಮಾತಿಗಾಗಿ ನೀನು ಇಷ್ಟು ದೊಡ್ಡ ಬಢತಿಗೆ ಬೆನ್ನು ತಿರುಗಿಸುವಿ, ಇದಕ್ಕಾಗಿ ನಮಗೆ ಮಹಾ ಅಭಿಮಾನವೆನಿಸುತ್ತದೆ."

ಮಾತಾಡುವಾಗ ಅವನು ತಡೆದನು. ಯಾವದೇ ಸಂಗತಿಯನ್ನು ಹೇಳುವಾಗ ಒಮ್ಮೆಲೇ ಹೇಳದೆ, ಕಂತು ಕಂತಿನಿಂದ ಹೇಳುವದು ಅವನ ಪದ್ಧತಿ, ಆಲ್ಬರ್ಟನಿಗೆ ಈಗ ಗೊತ್ತಾಗಿತ್ತು. ಮಾತಾಡುವಾಗ ಅವನು ನಡುವೆಯೇ ತಡೆಯುತ್ತಿದ್ದನು ಮತ್ತು ಬಲಗೈಯ ತೋರುಬೆರಳನ್ನು ತನ್ನ ದಪ್ಪ ಬಲು ಕೆಂಪು ಮೂಗಿನ ಮೇಲೆ ಇಟ್ಟು ಅವನು ಮಾತು ಮುಂದರಿಸುತ್ತಿದ್ದನು. ಆಗ ಅವನ ಆ ಕೆಂಪು ದಪ್ಪ ಮೂಗು ಆಲ್ಬರ್ಟನ ವಿಶೇಷವಾಗಿ ಕಣ್ಣು ತುಂಬುತ್ತಿತ್ತು. ಪಾಡಿಕೆಗಿಂತ ದೊಡ್ಡದಿದ್ದ ತನ್ನ ಮೂಗಿನ ಕುರಿತು ಇತರರಂತೆ ಹರಬರ್ಟ ಹ್ಯಾನನಿಗೂ ಪೂರ್ತಿ ಅರಿವು ಇತ್ತು. ಮಂದಿ ಅವನನ್ನು ಉದ್ದ ಮೂಗಣ್ಣನೆಂದು ಗೇಲಿ ಮಾಡುತ್ತಿದ್ದರು. ಅದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅದರಿಂದಲೇ ಏನೋ ಇತರರೊಂದಿಗೆ ಮಾತಾಡುವಾಗ ಆತ ತನ್ನ ಬೆರಳನ್ನು ಮೂಗಿನ ಮೇಲೆ ತಪ್ಪದೆ ಇಡುತ್ತಿದ್ದನು. "ನೀವು ನನಗೆ ಉದ್ದ ಮೂಗಣ್ಣನೆಂದು ಕರೆಯುವಿರಷ್ಟೇ? ಇದೇ ಆ ನನ್ನ ಉದ್ದ ಮೂಗು"! ಎಂದು ಆತ ಹೀಗೆ ಇತರರಿಗೆ ತೋರಿಸುತ್ತಿರಬೇಕು.

ಈಗಲೂ ತನ್ನ ಮೂಗಿನ ಮೇಲೆ ಬೆರಳಿಟ್ಟುಕೊಂಡು ಅವನು ಆಲ್ಬರ್ಟನಿಗೆ ಅಂದನು. "ನಾವು ಇಂಥ ತರುಣರನ್ನು ಎಂದೂ ಅಪೇಕ್ಷಿಸುವದಿಲ್ಲ. ಭಾರತಕ್ಕೆ ಹೋಗಬಾರದು–, ಇಷ್ಟೇ ನಿನ್ನ ತಾಯಿಯ ಅಂಬೋಣ ತಾನೆ? ಮಧ್ಯ ಪೂರ್ವದಲ್ಲಿ ತೆಹೆರಾನದಲ್ಲಿ ನಮ್ಮ ಕಂಪನಿಯು ಸ್ವಲ್ಪ ಕೆಲಸವಿದೆ. ತೆಹೆರಾನದ ಪರಿಸರದಲ್ಲಿ ಎಣ್ಣೆಯ ಕಣಿಗಳಿರುತ್ತವೆ. ನೀ ಕೇಳಬಹುದು, ಈ ಎಣ್ಣೆಗಣಿಗಳಿಗೂ ನಮ್ಮ ಕಂಪನಿಗೂ ಸಂಬಂಧವೇನು?"

ಹರಬರ್ಟ ಹ್ಯಾನ ಮತ್ತೆ ಕೆಲಹೊತ್ತು ತಡೆದನು. ಮತ್ತೆ ತನ್ನ ಕೆಂಪು ದಪ್ಪ ಮೂಗಿನ ಮೇಲೆ ಬೆರಳಾಡಿಸಿದನು. ಮತ್ತು ಮಾತು ಮುಂದರಿಸಿದನು. "ನಿಜವಾಗಿ ನೋಡಿದರೆ ಎಣ್ಣೆಗಣಿಗಳಿಗೂ ನಮ್ಮ ವ್ಯವಸಾಯಕ್ಕೂ ಅಂಥ ಸಂಬಂಧವಿಲ್ಲ. ಆದರೆ ಅದು ನಿನಗೇನು ಡಾವ ಬೇಕಾಗಿದೆ ? ಕಂಪನಿಯ ಮೂಲಕ ಮಂಡಳಿ ಅದನ್ನು ನೋಡಿಕೊಳ್ಳುವರು.

ಮತ್ತೆ ತುಸು ತಡೆದು ತನ್ನ ತರ್ಜನಿಯ ಬೆರಳನ್ನು ಮೂಗಿನ ಮೇಲೆ ಇಟ್ಟು ಹರಬರ್ಟ ಹ್ಯಾನ ಮುಂದೆ ಹೇಳ ತೊಡಗಿದನು. "ಸಂಬಂಧವಿರಲಿ

ವಿಲ್ಲದಿರಲಿ ನಮ್ಮ ಕಂಪನಿ ಈ ಭಾಗದ ವೀಕ್ಷಣೆ ಮಾಡಬೇಕಾಗಿದೆ. ಈ ವೀಕ್ಷಣೆಗಾಗಿ ಕೇವಲ ಎರಡು ತಿಂಗಳ ಸಲುವಾಗಿ ನೀನು ಹೋಗಬೇಕಾದೀತು. ನೀನು ಅಲ್ಲಿಗೆ ಹೋಗಿ ತಿರುಗಿ ಬಾ. ಆಮೇಲೆ ಆಫ್ರಿಕೆಯ ಕೆನಿಯಾ ಭಾಗದಲ್ಲಿ ನಮ್ಮ ಕಂಪನಿಯ ಕೆಲಸ ಸುರುವಾಗುವದು. ನಿನ್ನನ್ನು ಅಲ್ಲಿಗೆ ಕಳುಹಿಸಿ ಬಿಟ್ಟರೆ ಸರಿ. ಭಾರತವೇ ಏಕೆ ಬೇಕು?"

ಮತ್ತು ಆ ಮೇಲೆ ಚಿಕ್ಕ ಹುಡುಗನಿಗೆ ಒಂದು ಚುರುಕಾದ ಚಪ್ಪರಿಕೆ ಕೊಟ್ಟು ಅವನ ಮೋಜು ನೋಡುವ ಅವಿರ್ಭಾವದಿಂದ ಆಲ್ಬರ್ಟನ ಬಲ ಸೆಗಲ ಮೇಲೆ ಒಂದು ಹಗುರಾದ ಪೆಟ್ಟು ಕೊಟ್ಟು ಆತ ಅಂದನು. "ಏ ಮಗು, ನಿನಗೆ ಬಢತಿ ಕೊಡುವ ನನ್ನ ಮಾತು ಕಾಯಂ ಇದೆ. ಅದಕ್ಕೆ ಚ್ಯುತಿ ಇಲ್ಲ. ತಿಳಿಯಿತೆ? ಭಾರತಕ್ಕೆ ಹೊಗಲಿಲ್ಲವಾದರೆ ಏನಾಯಿತು? ತೆಹರಾನಿಗೆ ಹೊಗು, ವಿಮಾನದಲ್ಲಿ ಹೋಗಿ ವಿಮಾನದಲ್ಲಿ ತಿರುಗಿ ಬಾ. ಮಜಾ ಹೊಡಿ ನೀನು, ತಿರುಗಿ ಬರುವ ತನಕ ಇಲ್ಲಿಯ ನಮ್ಮ ಹಂಗಾಮಿ ಕಚೇರಿ ಕೀಳುವದು. ಆಗಲೂ ನಿನಗೆ ಮನೆಯಲ್ಲಿ ಉಳಿಯು ವದು ಶಕ್ಯವಿಲ್ಲ, ಆಗ ಕೆನಿಯಾಕ್ಕೆ ಹೊಗು. ಈದರೆ ಆಗ ತೆಹರಾನಿಗೆ ಹೊಗುವಿಯಷ್ಟೇ?"

ಆದಕ್ಕೆ ಆಲ್ಬರ್ಟ ಅಹುದೆಂದು ತಲೆದೂಗಿದನು. ಹರಬರ್ಟ ಹ್ಯಾನ ಮನಃಪೂರ್ವಕವಾಗಿ ಅವನ ಆಭಾರ ಮನ್ನಿಸಿದನು, ಮತ್ತು ಆತ ನೇರವಾಗಿ ಮನೆಗೆ ಹೊದನು.

ತೆಹೆರಾನಿಗೆ ಹೊಗಲಿಕ್ಕೆ ಮಾತ್ರ ಏರ್ನಾ ಕೂಡಲೆ ಒಪ್ಪಿಗೆಯಿತ್ತಳು. ಭಾರತಕ್ಕೆ ಹೋಗಬೇಕೆಂಬ ಅವನ ಮೊದಲನೆಯ ಸಂಕಲ್ಪವನ್ನು ಆತ ಕೇವಲ ತನಗಾಗಿ ಬಿಟ್ಟುಕೊಟ್ಟನು. ಈ ಮಾತಿನಿಂದ ಅವಳಿಗೆ ಸಮಾಧಾನವಾಯಿತು ಮಾತ್ರವಲ್ಲ, ಆತ ಇನ್ನು ತೆಹರಾನಿಗೆ ಹೊಗುವನು. ಅವನಿಗೂ ಭಾರತಿಗೂ ಕೆಲವು ಕಾಲ ಅಂತರ ಉಂಟಾಗುವದು, ಅಕಸ್ಮಾತ್ ಅವರಿಬ್ಬರ ಮನಸ್ಸುಗಳೂ ಆ ಮೂಲಕ ಒಬ್ಬರಿಂದ ಒಬ್ಬರು ದೂರ ಸರಿಯಲೂ ಬಹುದು, ಎಂಬ ಲೆಕ್ಕವನ್ನೂ ಅವಳ ಮನಸ್ಸು ಹಾಕಿತು. ಭಾರತಿ ಅವರ ಮನೆಯಿಂದ ಹೊರಟು ಹೋಗಿದ್ದಳು.

ಆದರೂ ಅವಳ ಮತ್ತು ಆಲ್ಬರ್ಟನ ಗಂಟು-ಭೆಟ್ಟಿ ಖಚಿತವಾಗಿಯೂ ಆಗುತ್ತಿರಬೇಕು, ಈ ಕುರಿತು ಏರ್ನಾಳಿಗೆ ಯಾವ ಸಂಶಯವು ಇದ್ದಿಲ್ಲ. ಆಲ್ಬರ್ಟ ತೆಹೆರಾನಿಗೆ ಹೋದರೆ ಇಂಥ ಗುಪ್ತ ಭೆಟ್ಟಿಗಳ ಸಮಸ್ಯೆ ತಾನಾಗಿಯೇ ಬಗೆಹರಿಯುವದು. ಆದ್ದರಿಂದ ಏರ್ನಾ ಆನಂದದಿಂದಲೇ ಆಲ್ಬರ್ಟನಿಗೆ ಸಮ್ಮತಿಕೊಟ್ಟಳು.

ಅವನನ್ನು ಬೀಳ್ಕೊಡುವಾಗ ಭಾರತಿಗೆ ಇಂಥ ಒಂದು ಆನಂದ ವೆನಿಸುವದು ಶಕ್ಯವಿದ್ದಿಲ್ಲ. ಅವಳ ಕೋಣೆಗೆ ಹೊಗಿ ತಾನು ತೆಹೆರಾನಿಗೆ ಹೊಗುವ ಕಾರ್ಯಕ್ರಮ ಗೊತ್ತಾಯಿತೆಂಬುದನ್ನು ಆತ ಭಾರತಿಗೆ ಹೇಳಿದನು. ಅದನ್ನು ಕೇಳಿ ಅವಳಿಗೆ ಅನಿಸಿತು, ಈಗ ಆಗುತ್ತಿರುವದು ಏನೂ ಒಳಿತಲ್ಲ. ಇನ್ನು ತನಗೆ ಉಳಿಗಾಲವಿಲ್ಲ. ಎಂದು ಅವಳಿಗೆ ಒಂದೇ ಸವನೆ ಅನಿಸಹತ್ತಿತ್ತು.

ಹೈಡೆಲಬರ್ಗ ಬಿಡುವ ಮುಂಚಿನ ದಿನ ಮಧ್ಯಾಹ್ನ 'ರೆಸ್ಟೋರಾಂ ರಿಸೇನ್‌ಹಾಪ್' ಎಂಬ ಕೆಫೆಯಲ್ಲಿ ಅವರಿಬ್ಬರೂ ಊಟ ಮುಗಿಸಿ ಆ ಓಕ ವೃಕ್ಷದಡಿಯ ಪ್ರಚಂಡ ಶಿಲಾಖಂಡದ ಮೇಲೆ ಇಬ್ಬರೂ ಹೋಗಿ ಕೂತರು. ಆಗಲೂ ಭಾರತೀ ತನ್ನ ಮನದಲ್ಲಿಯೇ ಒಂದೇಸವನ ಅಂದುಕೊಳ್ಳುತ್ತಿದ್ದಳು. ಈಗ ನಡೆಯುತ್ತಿರುವದು ಏನೂ ನೆಟ್ಟಗಲ್ಲ. ಬೇಗನೆ ಒದಗಲಿರುವ ವಿಯೋಗದ ಕಳವಳವು ಅವರಿಬ್ಬರ ಮನಸ್ಸಿನಲ್ಲಿಯೂ ಬಿಗಿದು ಬಂದಿತ್ತು. ಮಾತಾಡಲು ಏನೂ ಉಳಿದಿದ್ದಿಲ್ಲ. ಅವಳ ಮೇಲ್ತುಟಿಯ ಮೇಲಿನ ಎಳ್ಳನ್ನು ತನ್ನ ತುಟಿಯಿಂದ ಮುಚ್ಚುವ ಮೋಹವು ಮಾತ್ರ ಅವನಿಗೆ ಇಂದು ಆಗಲೇ ಇಲ್ಲ. ಅವನ ಮನಸ್ಸು ಮೋಹದ ಆಚೆಗೆ ಹೋಗಿತ್ತು. ಅವನಿಗೆ ಲಭಿಸಬೇಕಾದದ್ದೂ ಲಭಿಸಿ ಹೋಗಿತ್ತು. ಅವನ ಮನಸ್ಸು ತೃಪ್ತವಾಗಿತ್ತು. ಅವನು ಶಾಂತವಾಗಿ ಅವಳತ್ತ ಬರೆ ನೋಡುತ್ತಲಿದ್ದು ಮತ್ತು ಮನಸ್ಸಿನಲ್ಲಿಯೇ ಅನ್ನುತ್ತಿದ್ದ, 'ಎಷ್ಟು ಚೆಂದ ಇದ್ದಾಳೆ ಈ ಹುಡುಗಿ! ಎಷ್ಟು ನಿಷ್ಪಾಪ ! ಆದರೆ ಇವಳು ಪ್ರತ್ಯಕ್ಷವಾಗಿ ನನ್ನವಳಾಗುವದು ಯಾವಾಗ ?'

ಭಾರತಿ ಮನಸ್ಸಿನಲ್ಲಿ ಅಂದಳು. "ಈ ನನ್ನ ಗೆಳೆಯ ದೂರದೇಶಕ್ಕೆ ಹೊರಟ. ಇನ್ನು ನನ್ನದು ಹೇಗೆ ನಡೆದೀತು? ಇವನು ಮರಳಿ ಬರುವದು ಯಾವಾಗ? ಮತ್ತು ಸರ್ವಸ್ವಿಯಾಗಿ ನನ್ನವನಾಗುವದು ಯಾವಾಗ?"

ಅವಳ ಮುದ್ರೆ ವಿಚಾರಮಗ್ನವಿತ್ತು. ಅವಳ ಕಡೆಗೆ ನೋಡುತ್ತ ಆಲ್ಬರ್ಟ ಕೇಳಿದ. "ಏನು ಅಂಥ ಗಹನ ವಿಚಾರ ನಡೆದಿದೆ?"

ತನ್ನ ನೋಟವನ್ನು ನೆಲದಲ್ಲಿ ನಟ್ಟು ಅವಳೆಂದಳು. "ವಿಚಾರ ಮಾಡದೆ ಮತ್ತೇನು ಮಾಡಲಿ? ನಿನಗೆ ನನ್ನ ಅವಸ್ಥೆ ಗೊತ್ತಿದೆಯಷ್ಟೇ? ನೀನು ಮರಳುವದು ಯಾವಾಗ? ಆ ತನಕ ನನ್ನದು ಹೇಗೆ ನಡೆದೀತು?"

ಆಲ್ಬರ್ಟ ಅಂದನು, "ಅರೇ ಹುಚ್ಚಿ! ನಾನೇನು ಶಾಶ್ವತವಾಗಿ ಹೊರಟೆದ್ದು ಹೋಗುವೆನೋ? ಎರಡು ತಿಂಗಳಲ್ಲಿ ನಾನು ಮರಳಿ ಬರತಕ್ಕವನೇ, ಮತ್ತು....ಆದರೆ ಇದೇನು? ನೀನು ಅಳಲಿಕ್ಕೆ ಏನಾಯಿತು? ನಾ ತಿರುಗಿ ಬಂದ ಮೇಲೆ ಸರ್ವಸ್ವೀ ನಿನ್ನವನೇ! ಅಮ್ಮ ನನ್ನನ್ನು ಪ್ರತ್ಯಕ್ಷ್ಯ ಹೊಡೆದು ಬಡಿದು ಹಾಕಿದರೂ, ನಾನು ಅವಳ ಮಾತು ಕೇಳುವವನಲ್ಲ. ತಿರುಗಿ ಬಂದೊಡನೆಯೇ ನಿನ್ನೊಂದಿಗೆ ಮದುವೆ. ಹುಚ್ಚೀ! ಇನ್ನು ಒರೆಸಿಕೋ ಈ ಕಣ್ಣು!"

ಅವಳ ಕಣ್ಣೀರು ಅವಳಿಗೆ ತಡೆಯಲು ಆಗಲಿಲ್ಲ. ಅಳುವ ದನಿಯಲ್ಲಿ ಅವಳೆಂದಳು. "ನನಗೆ ಇಂದು ವಿಪರೀತ ಅಳಲಿಕ್ಕೆ ಬಿಡು. ನನ್ನ ಕಣ್ಣಿನಿಂದ ದಳದಳ ಕಂಬನಿಗಳನ್ನು ಹರಿಯಗೊಡು. ನನ್ನನ್ನು ಹತ್ತಿರ ಎಳೆದುಕೊಂಡು ನನ್ನ ಕಣ್ಣೀರು ನೀನು ಒರಿಸು, ಹೌದು! ನಿಜವಾಗಿಯೂ ನೀನು ನನ್ನನ್ನು ಹತ್ತಿರಕ್ಕೆ ಸೆಳೆದುಕೊ, ಎಲ್ಲ ನಾಚಿಕೆ ಬಿಟ್ಟು ಹೇಳುತ್ತಿದ್ದೇನೆ. ಮತ್ತೆ ಎಂದೂ ಹೇಳಲಾರೆ. ಬರೆ ಇಂದೇ,....ಹೌದು!....ಇಂದೇ."

ಆಗ ಆಲ್ಬರ್ಟ ಭಾರತಿಯನ್ನು ನಿಜವಾಗಿಯೂ ಎಳೆದುಕೊಂಡನು. ಅವಳ ಹೆಗಲ ಮೇಲಿಂದ, ಬೆನ್ನಮೇಲಿಂದ ಆತ ಕೈ ಎಳೆದನು. ಅವಳ ಕೆನ್ನೆಯ, ತುಟಿಯ, ಕಣ್ಣಿನ ಆ ಮೇಲೆ ಎಲ್ಲಿಬೇಕೆನಿಸಿತೋ ಆ ಎಲ್ಲ ಸ್ಥಳಗಳ ಚುಂಬನಗಳನ್ನೂ ಆತ ಭರಭರನೆ ತೆಗೆದುಕೊಳ್ಳ ತೊಡಗಿದ. ಇಂದು ಆ ಚುಂಬನಗಳಲ್ಲಿ ಯೌವನದ ಉದ್ದಾಮತೆ ಇದ್ದಿಲ್ಲ, ವಿಕಾರವಶತೆ ಇದ್ದಿಲ್ಲ.

ಆದರೆ ಚಿರ ವಿಯೋಗದ ಕಲ್ಪನೆಯಿಂದ ಹುಟ್ಟಿದ ಆತುರತೆ ಇತ್ತು. ಅದಕ್ಕೂ ಹೆಚ್ಚಾಗಿ ಪಾವಿತ್ರ್ಯವಿತ್ತು. ವಾತ್ಸಲ್ಯವಿತ್ತು ಮತ್ತು ಎಷ್ಟು ಸವಿದರೂ ಸಾಕಾಗಿ ಮತ್ತೆ ಉಳಿಯುವಂಥ ಪವಿತ್ರ ಅಂತಃಕರಣದ ಸವಿಯಿತ್ತು. ಸೃಷ್ಟಿಯ ಆದಿಯಲ್ಲಿ ಪ್ರಥಮದಲ್ಲಿಯೇ ಉಂಟಾದ ಅಮೃತದ ಸವಿಯೇ ಅವಳ ತುಟಿಗಳಲ್ಲಿ ನಿರ್ಮಾಣವಾಗಿತ್ತು.

ಭಾರತಿಯನ್ನು ಹತ್ತಿರ ಎಳೆದುಕೊಂಡಾಗ ಹೊಸದಾಗಿ ಉಂಟಾದ ಅವಳ ಶಾರೀರಿಕ ಅವಸ್ಥೆ ಲಕ್ಷ್ಯದಲ್ಲಿ ಬರಲಿಕ್ಕೆ ಅವನಿಗೆ ಏನೂ ವೇಳೆ ಹತ್ತ ಲಿಲ್ಲಿ. ಅಲ್ಲಿಂದ ತಿರುಗುವ ವೇಳೆ ಆದಾಗ ಆತ ಅವಳಿಗೆ ಇಷ್ಟೇ ಅಂದನು. "ನನ್ನನ್ನು ನಂಬು. ನಿನ್ನ ಈ ಪವಿತ್ರ ಹೊಟ್ಟೆಯ ಆಣೆ ಹೊರುತ್ತೇನೆ."

ಹೀಗೆಂದು ಆತ ಅವಳ ಹೊಟ್ಟೆಯ ಮೇಲೆ ಕೈಯಿಡುವ ಅವಿರ್ಭಾವ ಮಾಡಿದನು. ಅವಳ ಮೈಯೆಲ್ಲ ಜುಮ್ಮನೆ ಕಂಪಿಸಿತು. ಕಾಲಗತಿಯೇ ಕುಂಠಿತವಾಗಿ ಈ ಪವಿತ್ರ ಮಂಗಲ ಕ್ಷಣವು ಇಲ್ಲಿಗೇ ತಡೆಯಬೇಕೆಂದು ಅವ ಳಿಗೆ ಅನಿಸಿತು.

* * *

ಆದರೆ ಯೋಗಾಯೋಗವೇ ಬೇರೆಯಿತ್ತು. ಆಲಫ್ರೆಡ್ ಕ್ರುಪ್‌ನ ಅಗತ್ಯದ ಪತ್ರ ಬಂದಿತು. ಆಲಫ್ರೆಡ್ ಕ್ರುಪ್ ಆಲ್ಬರ್ಟನನ್ನು ಬರ್ಲಿನ್ನಿಗೆ ಕರೆಯಿಸಿಕೊಂಡನು. ಪ್ರವಾಸದ ಎಲ್ಲ ಸಿದ್ಧತೆ ಮಾಡಿಯೇ ಆತ ಬರ್ಲಿನ್ನಿಗೆ ಬರಬೇಕೆಂದು ಆ ಪತ್ರದಲ್ಲಿ ಬರೆದಿತ್ತು.

ಮೊದಲು ಬರ್ಲಿನ್ನಿಗೆ ಹೋಗಿ ಆಮೇಲೆ ತಾನು ಮುಂದಿನ ಕೆಲಸಕ್ಕೆ ಅಲ್ಲಿಂದಲೇ ಹೋಗಬೇಕಾಗುವದೆಂದು ಆಲ್ಬರ್ಟ ಅರಿತಿದ್ದನು. ಆತ ಏರ್ನಾಳ ಒಪ್ಪಿಗೆ ತೆಗೆದುಕೊಂಡನು. ಅವನಿಗೆ ಒಪ್ಪಿಗೆ ಕೊಡುವಾಗ ಏರ್ನಾ ಇಷ್ಟೇ ಹೇಳಿದಳು. "ಎಲ್ಲಾ ಕಡೆಗೂ ಹೋಗು ಆದರೆ ಭಾರತಕ್ಕೆ ಮಾತ್ರ ಹೋಗ ಬೇಡ !"

ಆಮೇಲೆ ಅವಳು ತನ್ನಷ್ಟಕ್ಕೇ ಎಂಬಂತೆ ಅಂದಳು. "ಆದರೂ ರೆಕ್ಕೆ ಒಡೆದ ಹಕ್ಕಿಗೆ ಮತ್ತೇನು ಹೇಳಲಿ ?"

ಈ ಮಾತಿನಲ್ಲಿ ಅವಳ ವ್ಯಥೆಯು ವ್ಯಕ್ತವಾಗುತ್ತಿತ್ತು. ಅವಳ ಈ ಮಾತಿಗೆ ಆಲ್ಬರ್ಟ ಇಷ್ಟೇ ಹೇಳಿದನು, "ನಿನಗೆ ಆದಷ್ಟು ಮಾಡಿ ನಾನು ನೋಯಿಸಲಾರೆ. ನೀನು ಬಹಳ ದುಃಖ ಸಹಿಸಿದಿ ಈ ವರೆಗೆ!"

ಆದರೆ ಮನಸ್ಸಿನೊಳಗಿನ ಎಲ್ಲ ಸಂಗತಿಗಳನ್ನು ಪೂರ್ತಿ ಮಾಡುವದು ಮನುಷ್ಯನ ಕೈಯಲ್ಲಿ ಇರುವದೇ ಕಡಿಮೆ!

* * *

ಭಾರತೀಯನ್ನು ಸಂಗಡ ಕರೆದುಕೊಂಡು ಆತ ಬರ್ಲಿನ್ನಿಗೆ ಹೋದನು. ಪ್ರವಾಸದಲ್ಲಿ ಭಾರತೀ ಅವನಿಗೆ ಮತ್ತೆಮತ್ತೆ ಹೇಳುತ್ತಿದ್ದಳು. "ನೀನು ನಿನ್ನ ತಾಯಿಯ ಮಾತು ಕೇಳಲೇ ಬೇಕು! "ಪಾಪ ಆ ಬಡವಿ ಬಹಳಷ್ಟು ಸಹನ ಮಾಡಿದ್ದಾಳೆ. ಅವಳ ಮಾತನ್ನು ನೀನು ಮರೆಯಬಾರದು. ನಿಜವಾಗಿಯೂ ನೀನು ಅವಳ ಮಾತು ಕೇಳಬೇಕು."

ಸ್ವಪ್ನದಲ್ಲಿ ಉನ್ನತ ಅಂತರಾಳದಲ್ಲಿ ಹಾರಿ ಒಮ್ಮೆಲೇ ಭೂಮಿಗೆ ಕುಪ್ಪಳಿಸಿದರೆ ಮನುಷ್ಯ ಹೇಗೆ ಆಘಾತ ಬಿದ್ದು ಎಚ್ಚರಾಗುವನೋ ಅಂಥ ಒಂದು ಆಘಾತವಿತ್ತಂತೆ ಆಲ್ಬರ್ಟ ಎಚ್ಚರಾದನು. ವಿಮಾನವು ಕೆಳಗೆ ಇಳಿಯ ಹತ್ತಿತ್ತು. ಏಂಟು ಗಂಟೆಯ ಸಮಯ. ಹೊರಗೆ ಕತ್ತಲೆಯಲ್ಲದೆ ಇನ್ನೇನೂ ಕಾಣುತ್ತಿದ್ದಿಲ್ಲ. ವಿಮಾನ ಸುಂದರಿಯು ಘೋಷಣೆ ಮಾಡಿದಳು. ಬರ್ಲಿನ ವಿಮಾನ ನಿಲ್ದಾಣದಲ್ಲಿ ವಿಮಾನ ಇಳಿಯತೊಡಗಿದೆ, ಎಲ್ಲ ಪ್ರಯಾಣಿಕರೂ ಪಟ್ಟೆ ಕಟ್ಟಿಕೊಳ್ಳಬೇಕು ಎಂದು ಆಕೆ ಸೂಚನೆ ಇತ್ತಳು. ಘೋಷಣೆಯ ಕೊನೆಗೆ ಅವಳು 'ಥಂಕೆ' ಅಂದಳು. ಸ್ಪೀಕರ ಬಂದು ಮಾಡುವ ಖಟಕ್ ಎಂಬ ಸದ್ದು ಆಯಿತು.

ಆಲ್ಬರ್ಟ ಹೊರಗೆ ನೋಡಿದನು. ನೆಲದ ಮೇಲೆ ವಿವಿಧ ಬಣ್ಣದ ತಾರೆಗಳ ರತ್ನಗಂಬಳಿಯ್ ಹಾಸಿದ್ದು ಕಂಡು ಬಂತು. ಬರ್ಲಿನ ವಿಮಾನ ನಿಲ್ದಾಣದಲ್ಲಿ ಅವರ ವಿಮಾನ ಮೆಲ್ಲ ಮೆಲ್ಲಗೆ ಇಳಿಯುತ್ತಿತ್ತು.

ಆಲ್ಬರ್ಟ ಪಟ್ಟೆ ಕಟ್ಟಿಕೊಂಡನು. ಪಟ್ಟೆ ಕಟ್ಟಿಕೊಳ್ಳಲಿಕ್ಕೆ ಆತ ಭಾರತಿಗೆ ಸಹಾಯ ಮಾಡಿದನು.

ಆಮೇಲೆ ಅವಳ ಹೆಗಲಮೇಲೆ ಕೈಹಾಕಿ ಆತ ಅವಳ ಹತ್ತಿರಕ್ಕೆ ಸರಿದು ಮೆಲ್ಲಗೆ ಅಂದನು. "ನಾ ಅಮ್ಮನ ಮಾತು ಕೇಳಬೇಕು—ಏನ್ನುವಿ. ಎಲ್ಲ ವಿಷಯಗಳಲ್ಲಿಯೂ ಅವಳ ಮಾತನ್ನು ಕೇಳಬೇಕೋ ?"

ಒಮ್ಮೆಲೇ ಅವಳ ಕಣ್ಣಲ್ಲಿ ನೀರೂರಿದವು. ಅವಳೆಂದಳು, "ಹಾಗೆ ಹೇಗೆ ನಾನಂದೇನು ?"

ಮತ್ತು ಒಮ್ಮೆಲೇ ಅವಳ ದೃಷ್ಟಿ ಅಭಾವಿತವಾಗಿಯೇ ತನ್ನ ಹೊಟ್ಟೆಯ ಕಡೆಗೆ ಹೋಯಿತು. ಆಲ್ಬರ್ಟನೂ ಅದೇ ವೇಳೆಗೆ ಅವಳ ಹೊಟ್ಟೆಯ ಕಡೆಗೆ ನೋಡಿದನು. ಹೊಟ್ಟೆಯ ಪಟ್ಟಿಯ ಕೆಳಗಿನ ಭಾಗವನ್ನು ಕಂಡು ಅವನ ಮೈ ನಿಮಿರೆದ್ದಿತು. ಅವನಿಗೆ ತನ್ನ ಆಣೆಯ ನೆನಪಾಯಿತು.

ಅವಳ ಕಡೆಗೆ ನೋಡುತ್ತ ಆತ ಕಳವಳದಿಂದ ಅಂದನು, "ಪ್ರಾಣ ಹೋದರೂ ನಾನು ಈ ವಿಷಯದಲ್ಲಿ ಅಮ್ಮನ ಮಾತು ಕೇಳಲಾರೆ. ನೀನು ನಿರ್ಭಯಳಾಗಿರು."

ಅವನ ಮಾತಿನ ಮನೋಗತ ಅವಳ ಗಮನಕ್ಕೆ ಬಂದಿತು. ಅವಳು ಮಂದವಾಗಿ ನಕ್ಕಳು ಮತ್ತು ಅಂದಳು, "ಭಾರತಕ್ಕೆ ಮಾತ್ರ ಹೋಗಬೇಡ, ಇಷ್ಟುವರೂ ಅಮ್ಮನ ಮಾತು ಕೇಳು. ಭಾರತಕ್ಕೆ ಹೊಗಬೇಡ...."

ಅವಳ ಮಾತು ಅರ್ಧಕ್ಕೇ ಉಳಿಯಿತು. ವಿಮಾನದ ಚಕ್ರಗಳು ನೆಲವನ್ನು ಮುಟ್ಟಿದಾಗ ಆಘಾತವೆನಿಸಿತು. ಅದಕ್ಕೆ ಗಾಬರಿಯಾಗಿ ಆಕೆ ಆಲ್ಬರ್ಟನನ್ನು ಅವಚಿಕೊಂಡಳು. ಅವಳ ಮಾತು ಅಷ್ಟಕ್ಕೇ ನಿಂತಿತು.

* * * *

"ಹಾಟೇಲ ಎವರ್ ರ್ಶೊ" ದಲ್ಲಿ ಕೃಪ್ ಸಾಹೇಬರ ಫೋನು ಬಂತು. ಆಗ ಊಟ ಮುಗಿಸಿ ಆಲ್ಬರ್ಟ ಮತ್ತು ಭಾರತೀ ಟೆಲಿವಿಜನ್ ನೋಡುತ್ತ ಕುಳಿತಿದ್ದರು. ಭಾರತಿಯ ಕಣ್ಣು ಮುಚ್ಚಲು ಬಂದಿದ್ದವು. ನಡುವೆಯೇ ಅವಳು ಇದುರಿಗೆ ಕಾಣುವ ಅಂಗಡಿಗಳ ಮೇಲಿನ 'ನೆಳಲು ಬೆಳಕಿನ' ಜಾಹಿರಾತುಗಳತ್ತ ನೋಡುತ್ತಿದ್ದಳು. ಆ ಜಾಹಿರಾತುಗಳ ಒಂದೊಂದು ಅಕ್ಷರವು ಕತ್ತಲೆಯಲ್ಲ ಮಾಯವಾಗಿ ಮತ್ತೆ ಬೆಳಕಿನಲ್ಲಿ ತೊಳಗೆದ್ದು ಮೆರೆಯುತ್ತಿತ್ತು.

ಅವಳ ಮನಸ್ಸಿನಲ್ಲಿ ಸ್ವಾಭಾವಿಕವಾಗಿಯೇ ವಿಚಾರ ಬಂದಿತು. ಮಾನವನ ಜನ್ಮ ಮರಣಕ್ಕೆ ಇದು ಒಂದು ಪ್ರತೀಕ. ಮಾನವನ ಒಂದು ಜನ್ಮ ಬೆಳಕಿನಲ್ಲಿ ಬರುವದು, ಮತ್ತೆ ಅದು ಅಜ್ಞಾತದ ಕತ್ತಲಲ್ಲಿ ವಿಲೀನವಾಗುವದು. 'ಪುನರಪಿ ಜನನಂ, ಪುನರಾಪಿ ಮರಣಂ' ಈ ಚಕ್ರವು ಹೀಗೆ ಇರಬೇಕು."

ಅಷ್ಟರಲ್ಲಿ ಕೋಣೆಯಲ್ಲಿ ಫೋನ ಖಣಖಣಿಸಿತು. ಕ್ರಪ್‌ನ ಕಾರ್ಯದರ್ಶಿ ಆಲ್ಬರ್ಟನೊಂದಿಗೆ ಮಾತಾಡುತ್ತಿದ್ದ. ಬರ್ಲಿನ ಗೋಡೆಯ ಹತ್ತಿರ ಪತ್ರಿಕೊದ್ಯಮಿ ಗುಂಪಿನ 'ಸ್ಪ್ರಿಂಗಲರ ಗ್ರುಪ್'ದ ಕಟ್ಟಡವಿದೆ. ಆ ಕಚೇರಿಯಲ್ಲಿ ಕ್ರಪ್‌ಸಾಹೇಬರಿಗೆ ಮುಂಜಾನೆ ಬಂದು ಕಾಣಬೇಕು ಎಂದು ಆಲ್ಬರ್ಟನಿಗೆ ಸಂದೇಶ ತಿಳಿಸಲಾಯಿತು

ಆಲ್ಬರ್ಟ ಕ್ರಪ್ ಸಾಹೇಬರಿಗೆ ಭಾರತಿಯ ಪರಿಚಯ ಮಾಡಿಕೊಟ್ಟ ಮೇಲೆ ಅವರು ಅವಳ ಕಡೆಗೆ ನೋಡುತ್ತ ನಗುತ್ತ ಅಂದರು. "ವ್ಹಾ! ಈಗ ಪ್ರಶ್ನೆಯೇ ಉಳಿಯಲಿಲ್ಲ. ಈ ಭಾರತೀಯ ಎಳೆಯ ಆಧಾರವಿರುವಾಗ ಭಾರತಕ್ಕೆ ಹೋಗಲು ನಿನಗೇನು ಅಡ್ಡಿ"?

ಹೀಗೆಂದು ಕ್ರಪ್ ಸಾಹೇಬ ನಕ್ಕು ನಕ್ಕು ಬಿದ್ದ. ಮಾತಿನ ಬೆನ್ನಿಗೆ ಹೀಗೆ ನಕ್ಕು ನಕ್ಕು ಬೀಳುವ ಅವನ ಈ ರೀತಿ ಕಂಡು ಭಾರತಿಗೆ ಬಲು ಮೋಜು ಅನಿಸಿತು. ಅವನ ನಗೆ ಮುಗಿಯುವನಕ ಅವಳು ತಡೆಯಲೇ ಬೇಕಾಯಿತು.

ಅವನ ನಗೆ ಕಡಿಮೆ ಆದನಂತರ ಅವಳೆಂದಳು, "ಭಾರತಕ್ಕೆ ಹೋಗಲು ಅವನ ಅಡ್ಡಿ ಎಂದೂ ಇರಲಿಲ್ಲ. ಅಡ್ಡಿ ಇರುವದು ಅವನ ತಾಯಿಯಿಂದ"!

ಕ್ರಪ್‌ಸಾಹೇಬ ಅವಳನ್ನು ಪ್ರಶ್ನಾರ್ಥಕ ಮುದ್ರೆಯಿಂದ ನೋಡಿದನು. ಆಗ ಭಾರತಿ ಅವನಿಗೆ ಎಲ್ಲ ವೃತ್ತಾಂತವನ್ನು ಸಾದ್ಯಂತವಾಗಿ ಹೇಳಿದಳು. ಆಗ ಅವನು ಮತ್ತೆ ಬಿದ್ದು ಬಿದ್ದು ನಕ್ಕನು. ಅವನ ಈ ನಗುವಿನ ಅರ್ಥ ಯಾರಿಗೂ ತಿಳಿಯಲಿಲ್ಲ. ನಗು ಇಳಿದ ಮೇಲೆ ಆತ ಏನೆನ್ನುತ್ತಾನೆಂಬ ಕಡೆಗೆ ಎಲ್ಲರ ಗಮನವಿತ್ತು.

ತನ್ನ ನಗುವನ್ನೂ ಹತೋಟಿಗೆ ತಂದುಕೊಂಡು ಆಲ್ಫ್ರೆಡ್ ಕ್ರಪ್ ಅಂದನು. "ಅಂದರೆ! ಇದೊಂದು ತಮಾಷೆಯೇ ಆಯಿತು! ಅಪರಾಧ ಯಾರದು ಮತ್ತು ಅದರ ದಂಡ ಯಾರಿಗೆ!"

ಮತ್ತೆ ಅವನ ನಗು ಆರಂಭವಾಯಿತು. ಆದರೆ ಅದು ಬೇಗ ತಡೆ ಯಿತು. ಆಮೇಲೆ ಸ್ಪ್ರಿಂಗಲರ ಗ್ರುಪಿನ ಡಾಯರೆಕ್ಟರ್ ಡಾ. ಬ್ರಾಉನರ ಕಡೆಗೆ ನೋಡುತ್ತ ಅವನೆಂದನು. "ನಿಮಗೆ ಗೊತ್ತೇ ಇದೆ, ಡಾಕ್ಟರ ಸಾಹೇಬರೇ, ಹಿಟ್ಲರನ ಕಾರಭಾರದ ಕಾಲದಲ್ಲಿ ನನ್ನ ತಂದೆ ತಮ್ಮ ಕಾರಖಾನೆ ಯಿಂದ ಶಸ್ತ್ರಾಸ್ತ್ರಗಳನ್ನು ಪೂರೈಸಿದರು. ಯುದ್ಧ ಮುಗಿಯಿತು, ನನ್ನ ತಂದೆಯ ಮೇಲೆ ಖಟ್ಲೆ ನಡೆಯಿತು. ಅವರ ಎಲ್ಲ ಸೊತ್ತು-ಪತ್ತು ಜಪ್ತಿ ಆಯಿತು. ಅವರಿಗೆ ಹನ್ನೆರಡು ವರ್ಷದ ಶಿಕ್ಷೆ ಆಯಿತು. ಆದರೆ ಅವರು ಬಹಳ ಮುದುಕರಾಗಿದ್ದರಿಂದ ಅವರ ಶಿಕ್ಷೆ ನಾನು ಭೋಗಿಸ ಬೇಕಾಯಿತು. ಹೇಗಿದೆ ಈ ನ್ಯಾಯ? ತಂದೆಯವರ ಅಪರಾಧದ ಶಿಕ್ಷೆ ಮಗನ ಹಣೆಯಲ್ಲಿ".

ಕ್ರುಪ್ ನಗುತ್ತಿರಬೇಕಾದರೆ ಭಾರತಿಗೂ ಅವನ ಮಾತಿನಿಂದ ನಗು ಬರುತ್ತಿತ್ತು. ಎಲ್ಲಿಯ ಉದಾಹರಣೆ ಅವರು ಎಲ್ಲಿ ಕೊಟ್ಟರು!

ನಗು ಕಡಿಮೆ ಆದೊಡನೆ ಕ್ರುಪ್‌ಸಾಹೇಬರು ಗಂಭೀರರಾದರು. ಆಲ್ಬರ್ಟನ ಕಡೆಗೆ ನೋಡುತ್ತ ಅವರು ಅಂದರು, "ಎಲಾ ಹುಡುಗಾ, ನಿನಗೆ ಕಲ್ಪನೆ ಇಲ್ಲ; ನಾನು ಈ ನಮ್ಮ ದೇಶದಲ್ಲಿ ಎಷ್ಟು ಯಾತನೆ ಭೋಗಿಸಿ ದ್ದೇನೆಂದು. ಯಾತನೆ ಭೋಗಿಸಲಿಕ್ಕೆ, ದುಃಖ ಭೋಗಿಸಲಿಕ್ಕೆ ಭಾರತಕ್ಕೇ ಯಾಕೆ ಹೋಗಬೇಕು."

ಆಮೇಲೆ ಬರ್ಲಿನ್ ಗೋಡೆಯ ಆಚೆಯ ಪರಿಸರದತ್ತ ಕಣ್ಣು ನಟ್ಟು ಯಾವದೋ ಕೆಟ್ಟ ಕನಸಿನಲ್ಲಿ ಮಗ್ನರಾದಂತೆ ಮಾತಾಡಹತ್ತಿದರು. "ನನಗೆ ಆ ಕಟ್ಟಡ ಇನ್ನೂ ಕಾಣುತ್ತದೆ.-ಆ ದೀಪೋತ್ಸವ! ಇಂದು ಆ ಸ್ಥಳದಲ್ಲಿ ಬರೆ ಮಣ್ಣು ಕಾಣುತ್ತಿದೆ. ಮಣ್ಣು ಪಾಲಾಗಿದೆ ಆ ಕಟ್ಟಡ! ಆದರೆ ಒಂದು ಕಾಲದಲ್ಲಿ ಇಡಿಯ ಪ್ರಪಂಚವನ್ನೇ ಮಣ್ಣು ಗೂಡಿಸಲು ಆ ಕಟ್ಟಡವು ಸಜ್ಜಾಗಿತ್ತು. ಮಂದಿಯನ್ನು ಕೊಲ್ಲುವ ಕಾರಖಾನೆಗಳು ಅಲ್ಲಿಂದಲೇ ಎದ್ದು ನಿಂತವು. ಮಾನವ ಮರಣದ ಶಸ್ತ್ರಾಸ್ತ್ರಗಳು ಆ ಕಾರಖಾನೆಗಳೊಳಗಿಂದಲೇ ಹೊರಬಿದ್ದವು. ನನಗೆ ಅದು ಇಂದು ನಾಚಿಕೆಯ ಸಂಗತಿಯೆನಿಸುತ್ತದೆ. ಈ ಮಾನವೀ ಸಂಹಾರದ ಕಾರಖಾನೆಗಳನ್ನು ನಮ್ಮ ಕ್ರುಪ್ ಕುಟುಂಬವೇ ನಿಲ್ಲಿಸಿದ್ದು! ನನ್ನ ತಂದೆ ಹಿಟ್ಲರನ ಜೀವದ ಗೆಳೆಯ! ಅದೇ ದೀಪೋಜ್ವಲ

ಕಟ್ಟಡದಲ್ಲಿ ಹಗಲಿರುಳೂ ಅವರ ಆಪ್ತಾಲೋಚನೆ, ಗುಪ್ತಾಲೋಚನೆ ನಡೆಯು ತ್ತಿದ್ದವು.–ಮುಂದಿಯನ್ನು ಆದಷ್ಟು ವೇಗದಿಂದ ಹೇಗೆ ಕೊಲ್ಲಬೇಕು–ಎಂಬು ದರ ಕುರಿತು ! ನೀ ಅನ್ನಬಹುದು ಇದೇನು ನಾನು ಆಡುತ್ತಿದ್ದೇನೆ ! ಆದರೆ ಇದನ್ನೆ ಚೆನ್ನಾಗಿ ಕೇಳಿ ಕೋ .... ನನ್ನ ಮನಸ್ಸಿನ ವ್ಯಥೆ ಚೆನ್ನಾಗಿ ತಿಳಿದು ಕೋ .... ನೀನು ಭಾರತಕ್ಕೆ ಹೋಗಲೇ ಬೇಕು ! ಏಕೆ ? ಹೇಳು ತ್ತೇನೆ."

ಆಲ್ಫ್ರೆಡ ಕ್ರುಪ್ ತುಸು ಹೊತ್ತು ತಡೆದರು ಮತ್ತು ಅಂದರು, "ನನಗೆ ಚೆನ್ನಾಗಿ ನೆನಪಿದೆ. ಆಗ ನಾನು ಚಿಕ್ಕವನಿದ್ದಿಲ್ಲ. ಮಹಾಯುದ್ಧ ಸುರುವಾಗಿತ್ತು. ನಮ್ಮ ಶಸ್ತ್ರಾಸ್ತ್ರಗಳ ಕಾರಖಾನೆಗಳು ಹಗಲೂ ಇರುಳೂ ದಣದಣ ದುಡಿಯುತ್ತಿದ್ದವು. ನನ್ನ ತಂದೆ ಹಿಟ್ಲರನ ಪಕ್ಕದಲ್ಲಿ ಯಾವಾ ಗಲೂ ಕೂತಿರುತ್ತಿದ್ದರು. ಅದು 'ರಾಯಿಶ'ದ ಸೌಧವಿದ್ದಿಲ್ಲ. ಆದಾಗ್ಯೂ ಆ ದೃಶ್ಯ ನನಗೆ ಸ್ಪಷ್ಟ ಕಾಣುತ್ತಿತ್ತು. ಆ ದಿನ ಮಧ್ಯಾಹ್ನ ನನ್ನ ತಂದೆ ಹಿಟ್ಲರನೊಂದಿಗೆ ಏನೋ ಮಾತಾಡುತ್ತ ಕುಳಿತಿದ್ದರು. ನಾನು ನೆರೆಯಲ್ಲಿಯೇ ಇದ್ದೆ. ಅಷ್ಟರಲ್ಲಿ ಟಪಾಲಿನಿಂದ ಒಂದು ಪತ್ರ ಬಂತು. ಹಿಟ್ಲರ ಆ ಪತ್ರವನ್ನು ಒಡೆದನು. ಮತ್ತು ಹುಚ್ಚನಂತೆ ಬಿದ್ದು ಬಿದ್ದು ನಗ ಹತ್ತಿ ದನು. ಆ ಪತ್ರ ಯಾರದು ಗೊತ್ತೋ! ಅದು ಗಾಂಧೀಜಿಯವರ ಪತ್ರ ವಿತ್ತು. ಭಾರತದ ಆ ಸತ್ಪುತ್ರನು ಯುದ್ಧ ನಿಲ್ಲಿಸಲು ಮತ್ತು ಎಲ್ಲ ಪ್ರಶ್ನೆ ಗಳನ್ನು ಅಹಿಂಸೆಯಿಂದ ಬಗೆಹರಿಸಲು ಆವ್ಹಾನವಿತ್ತಿದ್ದನು. ಆ ಹೊತ್ತಿಗೆ ಹಿಟ್ಲರ ವಿಜಯೋನ್ಮಾದದಲ್ಲಿ ಇದ್ದನು. ಅವನಿಗೆ ಶಾಂತತೆಯು, ಅಹಿಂಸೆಯ ಆವ್ಹಾನ ಹೇಗೆ ರುಚಿಸೀತು ? ಹಿಂಸೆಯ ಇದುರು ಅಹಿಂಸೆ ಎಂದಾದರೂ ನಿಲ್ಲಬಲ್ಲದೇ ? ....ಹಿಟ್ಲರನು ಗಾಂಧೀಜಿಯ ಪತ್ರ ಮುದುಡಿ ಮುದ್ದೆ ಮಾಡಿ ಕಸದ ಬುಟ್ಟಿಗೆ ಒಗೆದನು ಮತ್ತು ಆ ಪತ್ರದ ಮಜಕೂರನ್ನು ನನ್ನ ತಂದೆಯ ವರಿಗೆ ಹೇಳಿ ಆತ ಬಿದ್ದು ಬಿದ್ದು ನಕ್ಕ.....

ಕ್ರುಪ್ ತಡೆದರು. ಬೀರಿನ ಒಂದು ಗುಟುಕು ನುಂಗಿದರು. ಮತ್ತೆ ಅವರ ಈ ನೋಟ ಗತ ಕಾಲದಲ್ಲಿ ನಟ್ಟಿತು. ಅವರೆಂದರು, "ಇಂದು ಆ ಸ್ಥಳದಲ್ಲಿ ಇದೆಯೋ ಏನಾದರೂ ? ಆದರೆ ನನಗೆ ಇಂದಿಗೂ ಗಾಂಧೀಜಿಯ ಆ ಪತ್ರ ಕಾಣುತ್ತದೆ. ಮತ್ತು ಮನಸ್ಸಿನಲ್ಲಿ ವಿಚಾರ ಮೂಡುತ್ತದೆ.

ಗಾಂಧೀಜಿಯ ಪತ್ರದಂತೆಯೇ ಇಂದು ಸಕಲ ಮಾನವ ಜಾತಿಯು ಮುದುಡಿ ಮುಷ್ಟಿಯಾಗಿದೆ.... ನೀನು ನನಗೆ ಹುಚ್ಚನೆನ್ನಬಹುದು. ಹೇಳು! ಮುಜು ಗನೇ ಹೇಳು ! ಆದರೆ ಅನಂತರ ನಡೆದ ಎಲ್ಲ ಸಂಹಾರವನ್ನು ಕಂಡು ನನಗೆ ಒಂದೇ ಸವನೆ ಅನಿಸಿತು, ಆ ಗಾಂಧೀಜಿಯ ಆ ಪತ್ರದ ಶಾಪವು ಎಲ್ಲರನ್ನೂ ಕಾಡಿದೆ.... ಇದೇ ನೋಡು ! ನಮ್ಮ ದೇಶದಲ್ಲಿ ಈ ಬರ್ಲಿನ್-ಗೋಡೆಯು ಎದ್ದು ನಿಂತಿದೆ. ಈ ಗೋಡೆಯಡಿಗೆ ಮಾನವತೆಯೇ ಹೂಳಿ ಹೋಯಿ ತಲ್ಲವೇ ? ಅಣ್ಣ ತಂಗಿಯನ್ನು, ತಮ್ಮ ಅಕ್ಕನನ್ನು ಭೆಟ್ಟಿಯಾಗಲಾರ, ಪ್ರಿಯತಮ ಪ್ರೇಯಸಿಯನ್ನೂ ಭೆಟ್ಟಿಯಾಗಲಾರ. ಅರೇ! ಇಷ್ಟಕ್ಕೇ ಮುಗಿಯ ಲಿಲ್ಲ, ಕೂಸು ತನ್ನ ತಾಯಿಯನ್ನು ಭೆಟ್ಟಿಯಾಗಲಾರದು; ಅವರ ಪ್ರೇಮದ ನಡುವೆ ಈ ಅಡ್ಡ ಗೋಡೆ ನಿಂತಿದೆಯಲ್ಲ ! – ಅನೈಸರ್ಗಿಕ, ಅನಾ ಹುತವಾಗಿ ! ಯಾರಿಗೆ ಬೇಕಿತ್ತು ಈ ವಿಭಜನೆ ? ಮನುಷ್ಯನ ದೇಹದ, ಮನುಷ್ಯನ ಮನಸ್ಸಿನ ಇಂಥ ವಿಭಜನೆಯನ್ನು ಮಾಡುವದುಂಟೇ, ಎಲ್ಲಿ ಯಾದರೂ ? ಆದರೆ ಪ್ರೇಮಕ್ಕೆ ಹೀಗೆ ಸುರಂಗ ಹಚ್ಚಲಾಯಿತು. ಪ್ರೇಮ ವನ್ನು ಪರಚಾಡಲು ಕ್ರೂರ ಶ್ವಾಪದಗಳು ನಿಂತಿವೆ. ಮಾನವೀಯತೆಯೇ ಹರಿದು ಹೋಯಿತು. ಆಂದಾಗ ಉಳಿದದ್ದೇನು ? ಜೀವ ತತ್ತರಿಸುತ್ತದೆ. ಈ ವಯಸ್ಸಿನಲ್ಲಿ ಇದು ಸಹನವಾಗುವದಿಲ್ಲ. ಎಲ್ಲ ಮುಗಿಸಿ ಬಿಡಬೇಕೆಂದೆನಿ ಸುತ್ತದೆ. .... ಆದರೆ ನಮ್ಮ ಮೇಲೆ ಒಂದು ಋಣವಿದೆ ಎಂದೆನಿಸುತ್ತದೆ. ಹೇಳಲೋ ಆ ಋಣ ಯಾವದೆಂದು ?"

ಈಗ ಮಾತ್ರ ಕ್ರಪ್‌ಸಾಹೇಬರು ಬಹಳ ಹೊತ್ತು ತಡೆದರು. ಅಲ್ಬರ್ಟ ಮತ್ತು ಭಾರತೀ ಅವರ ಕಡೆಗೇ ದಿಟ್ಟಿಸಿ ನೋಡುತ್ತಿದ್ದರು.

ಮೆಲ್ಲ ಮೆಲ್ಲಗೆ ಕ್ರಪ್ ಸಾಹೇಬರು ಮಾತಾಡ ಹತ್ತಿದರು. "ಹೌದು ಹೌದು, ಅದು ಋಣವೇ ! ನಾವು ಗಾಂಧೀಜಿಯ ಮಾರ್ಗದಿಂದ ಹೋಗ ಬೇಕಿತ್ತು. ಅದು ಶಾಂತಿಯ ಮಾರ್ಗ .... ಅಹಿಂಸೆಯ ಮಾರ್ಗ ! ಆ ವೇಳೆಗೆ ನಾವು ಆ ಮಾರ್ಗದ ಕುಚೇಷ್ಟೆ ಮಾಡಿದೆವು. ಆದರೆ ಈಗ ನಮಗೆ ಗೊತ್ತಾಗುತ್ತದೆ–ಅದೇ ಮಾರ್ಗ ನಿಜವಾಗಿತ್ತು, ಸರಿಯಾಗಿತ್ತು. ನನ್ನ ಮಟ್ಟಿಗೆ ಗಾಂಧೀಜಿಯ ಆ ಋಣವನ್ನು ನಾನು ತೀರಿಸಲಿದ್ದೇನೆ ಅದಕ್ಕಾಗಿ ನೀನು ಭಾರತಕ್ಕೆ ಹೋಗಬೇಕಾಗಿದೆ".

ಆಲ್ಬರ್ಟ ಏನೂ ಅನ್ನಲಿಲ್ಲ.

ಕ್ರುಪ್‌ಸಾಹೇಬರು ಅಪ್ಪನಿಗೆಂದರು. “ಈ ಭಾರತ ದೇಶದ–ಗಾಂಧೀಜಿಯ ಈ ಪವಿತ್ರ ದೇಶದ ಸಂಸ್ಕೃತಿಯು ಬಲು ಹಿರಿದು, ಬಹಳ ಪುರಾತನ....ಬಹಳ ಪವಿತ್ರ—”

ಈ ಸ್ಥಳದಲ್ಲಿ ಈಗ ಏರ್ನಾ ಇದ್ದರೆ ಏನು ನಡೆಯಬಹುದಿತ್ತು ಎಂಬ ವಿಚಾರ ಭಾರತಿಯ ಮನಸ್ಸಿನಲ್ಲಿ ಬರುತ್ತಿತ್ತು. ಅದೇ ವೇಳೆಗೆ ಕ್ರುಪ್‌ಸಾಹೇಬರು ಮುಂದುವರಿದರು. “ಈ ಭಾರತೀಯ ಸಂಸ್ಕೃತಿಯ ಕುರಿತು ಒಂದು ಚಿತ್ರಪಟವನ್ನು ತೆಗೆಯಬೇಕೆಂದು ಇದ್ದೇನೆ. ಅತಿ ದೊಡ್ಡ ಅತಿ ಭವ್ಯ ಚಿತ್ರಪಟ! ಭಾರತೀಯ ಸಾಸ್ಕೃತಿಯಷ್ಟೇ ಭವ್ಯ! ಆ ಉತ್ತುಂಗ ಹಿಮಾಲಯ, ಆ ಪವಿತ್ರ ಗಂಗಾನದೀ, ಆ ಸರ್ವಶ್ರೇಷ್ಠ ಗೀತಾ ಗ್ರಂಥ. ಮತ್ತು ಭಾರತಕ್ಕೆ ಸದಾಕಾಲವೂ ಬೆಳಕು ನೀಡುವ ಆ ತೇಜಸ್ವೀ ಸೂರ್ಯ—ಇವೆಲ್ಲದರ ಪ್ರತಿಬಿಂಬ ಆ ಚಿತ್ರಪಟದಲ್ಲಿ ಒಡಮೂಡಿದ್ದು ಕಾಣಬೇಕು. ನಿನಗೆ ಗೊತ್ತಿರಬೇಕು ....ಪಂಡಿತ ನೆಹರೂ ಈ ಗಂಗೆಯ ಬಗೆಗೆ ಏನು ಬರೆದಿಟ್ಟಿರುವರೆಂದು?....ಭಾರತದ ಸನಾತನ ಸಂಸ್ಕೃತಿಯ ಅಖಂಡ ಪ್ರವಾಹವು ಈ ಪರಮ ಪವಿತ್ರ ಗಂಗಾನದಿಯಲ್ಲಿ ಹರಿಯುತ್ತಿದೆ.... ಭಾರತೀಯರ ಎಲ್ಲ ಆಶೆ–ಆಕಾಂಕ್ಷೆ–ಮಹತ್ವಾಕಾಂಕ್ಷೆಗಳು ಈ ಗಂಗಾತೀರದಲ್ಲಿ ಅರಳಿದವು.... ಭಾರತೀಯರು ತಮ್ಮ ಪರಾಕ್ರಮದ ಗೀತಗಳನ್ನು ಇಲ್ಲಿಯೇ ಹಾಡಿದರು.... ತಮ್ಮ ಪರಾಜಯಗಳ ದೂರನ್ನು ಅವರು ಇದೇ ಗಂಗಾಮಾತೆಗೆ ತೋಡಿಕೊಂಡರು.... ಬಿಕ್ಕಟ್ಟಿನ ಪ್ರಸಂಗದಲ್ಲಿ ಅವರು ಇದೇ ಗಂಗಾಮಾತೆಯ ಆಶ್ರಯವನ್ನು ಪಡೆದರು.... ಒಂದು ಬದಿಗೆ ಉತ್ತುಂಗ ಹಿಮಾಲಯದ ಹಿಮಾಚ್ಛಾದಿತ ಶಿಖರಗಳು ಇನ್ನೊಂದು ಬದಿಗೆ ಇದರ ಧವಲ ಧೂಸರ ಪ್ರಮತ್ತ ಪ್ರವಾಹ.... ಈ ಗಂಗೆಯ ವರ್ಣನೆ ಎಷ್ಟೆಂದು ಮಾಡಲಿ?.... ಆಲ್ಬರ್ಟ, ನನಗೆ ನನ್ನ ಚಿತ್ರಪಟದಲ್ಲಿ ಈ ಗಂಗಾಮಾತೆಯ ಈ ಚಿತ್ರವನ್ನು ಚಿತ್ರಿಸಬೇಕಾಗಿದೆ. ಮತ್ತು ಇದಕ್ಕಾಗಿಯೇ ನೀನು ಭಾರತಕ್ಕೆ ಹೋಗಬೇಕಾಗಿದೆ.... ಅದು ಕೂಡಲೆ! ಮತ್ತು....”

ಭಾರತಿಯು ನಡುವೆಯೇ ಅಂದಳು. “ನನಗೆ ಇದು ಕಠಿಣವೆನಿಸುತ್ತದೆ.”

ಕ್ರಪ್‌ಸಾಹೇಬರು ಅಂದರು. "ಇದರಲ್ಲಿ ಕಠಿಣವೇನು ಬಂತು? ನನಗೆಲ್ಲ ಗೊತ್ತು. ಹೆಚ್ಚೆಂದರೆ ನಾವು ಈ ನಿಮ್ಮ ತಾಯಿಗೆ ಹೇಳೋಣ.... ಇವನು ತೆಹರಾನಿಗೆ ಹೋಗಿದ್ದಾನೆಂದು. ಒಳ್ಳೆಯ ಸಂಗತಿಯಲ್ಲಿ ಸುಳ್ಳು ಆಡಲು ಏನು ಅಡ್ಡಿ? ನಿನಗೆ ಅನಿಸುವದೇ, ಏನಾದರೂ ಅಡ್ಡಿ ಇರುವ ದೆಂದು? "

ಕೊನೆಯ ಪ್ರಶ್ನೆಯನ್ನು ಅವರು ಆಲ್ಬರ್ಟನತ್ತ ನೋಡಿ ಕೇಳಿದರು.

ಆಲ್ಬರ್ಟ ಖಿನ್ನವಾಗಿ ನಕ್ಕು ಅಂದ. "ನನಗೇನೂ ಅಡ್ಡಿ ಕಾಣುವ ದಿಲ್ಲ. ನನಗೂ ಭಾರತಕ್ಕೆ ಹೋಗಬೇಕೆಂದು ಭಾರಿ ಇಚ್ಛೆ. ನನ್ನ ಅಜ್ಜ, ನನ್ನ ತಂದೆ ಅಲ್ಲಿಯೇ ಹೊದರು.... ಗಂಗೆಯನ್ನು ಸೇರಿದರು. ನನಗೂ ಆ ಗಂಗೆಯ ರೂಪವನ್ನು ನೋಡಬೇಕೆಂದಿದೆ..... ಪೂರ್ತಿ ಕಣ್ತುಂಬ!"

"ಆಯಿತಲ್ಲ ಹಾಗಾದರೆ!"

ಕ್ರಪ್ ಸಾಹೇಬರ ಈ ಮಾತಿಗೆ ಜಲ್ಬರ್ಟ ಅಂದನು. "ಆದರೆ ಅಮ್ಮ ನಿಗೆ ಈ ಸುದ್ದಿ ತಿಳಿಸಬೇಡಿರಿ ಅವಳ ಎದೆ ಒಡೆದು ಹೊದೀತು. ನನಗೂ ನಿಮ್ಮಂತೆಯೇ ಅನಿಸುತ್ತದೆ. ಒಳ್ಳೆಯ ಸಂಗತಿಯನ್ನು ಮಾಡುವಾಗ ಸ್ವಲ್ಪ-ಸುಳ್ಳು ಮಾತಾಡಲು ಅಡ್ಡಿ ಇಲ್ಲ."

ಕ್ರಪ್ ಸಾಹೇಬರು ಹೊಗಲು ಎದ್ದರು. ಆಗ ಆಲ್ಬರ್ಟ ನಗುತ್ತ ಅಂದ. "ತಮ್ಮ ಚಿತ್ರಪಟಕ್ಕೆ ಭಾರತೀಯ ಕಥೆಯೇ ಬೇಕಷ್ಟೇ? ನಮ್ಮ ಕುಟುಂಬ ತಮಗೆ ಒಳ್ಳೆಯ ಕಥೆಯನ್ನು ಕೊಡಬಹುದು ನಮ್ಮ ಮುತ್ಯಾರ ಕುಟುಂಬ ಗಂಗೆಗೆ ಸೇರಿತು ಅಂದರೆ ನಮ್ಮ ಬರ್ಲಿನ್ ಗಂಗೆಗೆ ಸೇರಿತು.... ಭಾರೀ ಒಳ್ಳೆ ಕಥೆ ಆದೀತು ಭವ್ಯೋತ್ಕಟ! ಕರುಣೋದಾತ್ತ!"

ಇದಕ್ಕೆ ಕ್ರಪ್‌ಸಾಹೇಬರು ತಮ್ಮ ನಿತ್ಯದ ಚಟದಂತೆ ನಗಲಿಲ್ಲ. ಸಲ ಸಮವಾದ 'ರಾಯಿಶ್' ಕಟ್ಟಡವಿದ್ದ ಸ್ಥಳದತ್ತ ಕೆಲಕಾಲ ನೊಡುತ್ತ ನಿಂತರು ಮತ್ತು ಲಿಫ್ಟನಲ್ಲಿ ಹೊಗಿ ನಿಂತರು.

* * *

ಫ್ರಾಂಕಫುರ್ಟ ವಿಮಾನ ನಿಲ್ದಾಣದಲ್ಲಿ ಆಲ್ಬರ್ಟನನ್ನು ಬೀಳ್ಕೊಳ್ಳು ವಾಗ ಭಾರತಿ ಇಷ್ಟೇ ಅಂದಳು, "ನಮ್ಮ ಆಣೆಯ ನೆನಪಿಟ್ಟುಕೊ."

ಇದಕ್ಕೆ ಆಲ್ಬರ್ಟನಿಗೆ ಮಾತಾಡಲೇ ಆಗಲಿಲ್ಲ. ಕೊರಳು ಬಿಗಿದು ಬಂದಿತು. ಬಲಗಡೆಯ ತಿರುಗುವ ನಿಚ್ಚಣಿಕೆಯತ್ತ ಉದಾಸೀನ ದೃಷ್ಟಿ ಯಿಂದ ನೋಡುತ್ತ ಆತ ಇಷ್ಟೇ ಅಂದನು. "ನಮ್ಮ ಆಣೆಯನ್ನು ನಾನು ವಿಶ್ವದಅಂತ್ಯದ ವರೆಗೂ ಮರೆಯುವುದಿಲ್ಲ...... ಅಮ್ಮನನ್ನು ಆಗಾಗ್ಗೆ ಕಾಣುತ್ತಿರು."

ಎದುರಿಗಿದ್ದ ಮಿಂಚಿನ ಫಲಕದ ಮೇಲೆಅವನ ವಿಮಾನದ ಉಡ್ಡಾಣದ (ಫ್ಲಾಯಿಟ್) ಕ್ರಮಾಂಕವು ತೀರ ಮೇಲಕ್ಕೆ ಬಂದಿತ್ತು. ಭಾರತಕ್ಕೆ ಹೋಗುವ ಪ್ರಯಾಣಿಕರು ಘಳಘಳನೆ ಎದ್ದರು. ಮತ್ತು ಒಲಬದಿಯ ಗೇಟಿನಿಂದ ವಿಮಾನದತ್ತ ಹೋಗಲು ಹೊರಟರು.

ಆಲ್ಬರ್ಟ ಭಾರತಿಯನ್ನು ಹತ್ತಿರಕ್ಕೆಳೆದುಕೊಂಡನು. ಆವಳ ಬೆನ್ನ ಮೇಲೆ ಕೈಯಾಡಿಸಿದನು, ಮತ್ತು ತುಂಬಿ ಬಂದ ಕಣ್ಣಿನಿಂದ ಅಂದನು. "ಬರುತ್ತೇನೆ, ಜೋಕೆ ! ನಿನ್ನನ್ನು ನೋಡಿಕೊಳ್ಳುತ್ತಿರು."

ಆತ ಕಣ್ಣತೆಕ್ಕೆಯಾಚೆಗೆ ಹಾದುಹೋಗುವತನಕ ಭಾರತಿ ಆ ನಿಟ್ಟಿನಲ್ಲಿ ಹುಚ್ಚಿ ಯಂತೆ ನೋಡುತ್ತ ನಿಂತಿದ್ದಳು. ಅವಳಿಗನಿಸಿತು, ತನ್ನ ಪ್ರಿಯ ಸತ್ವವನ್ನೇ ಯಾರೊ ಹೀರಿಕೊಳ್ಳುತ್ತಿದ್ದಾರೆ. ವಿಮಾನವು ಆಕಾಶದತ್ತ ನೆಗೆಯಿತು. ಆದರೂ ಆವಳು ನಿಂತ ಸ್ಥಳದಿಂದ ಸರಿದಿದ್ದಿಲ್ಲ.

* * *

ರಾತ್ರಿ ಸುಮಾರು ಹನ್ನೆರಡು ಗಂಟೆಗೆ ಹೊರಟ ವಿಮಾನ ಅರ್ಧ ತಾಸಿ ನಲ್ಲಿ ಝೂರಿಕ್ಕಿಗೆ ತಲುಪಿತು. ಒಂದೂವರೆಗೆ ಝೂರಿಕ್ಕಿನಿಂದ ವಿಮಾನ ಉಡ್ಡಾಣ ಮಾಡಿತು. ಆಗ ಚಂದ್ರಬಿಂಬ ಪೂರ್ವ ಕ್ಷಿತಿಜದ ಮೇಲೆ ಆಗ ತಾನೇ ಮೂಡಿತ್ತು. ಚಂದ್ರ ಮೂಡುವ ಮುಂಚೆ ಅಸಂಖ್ಯ ತಾರೆಗಳು ಮಿರಿ ಮಿರಿ ಮಿನುಗುತ್ತಿದ್ದವು. ಆಕಾಶಗಂಗೆಯೂ ಚೆಂದವಾಗಿ ಒಪ್ಪುತ್ತಿತ್ತು. ಒಂದು ತಾಸಿನಲ್ಲಿಯೇ ಸೂರ್ಯನು ಉದಿಸಿದನು. ಮತ್ತು ಸೂರ್ಯೋ ದಯವಾದೊಡನೆ ಚಂದ್ರನು ಲೋಪವಾದದ್ದು ಆಗಿಯೇ ಹೋಯಿತು ! ಒಬ್ಬನು ಮೂಡಬೇಕು ಮತ್ತು ಅವನ ಪ್ರಕಾಶದಲ್ಲಿ ಇನ್ನೊಬ್ಬನ ಪ್ರಕಾಶವು

ಲೋಪವಾಗಬೇಕು— ಈ ಸಂಗತಿ ಆಲ್ಬರ್ಟನಿಗೆ ಬಲು ಮೋಜಿನದೆನಿಸಿತು. ಫ್ರಾಂಕಫುರ್ಟದಿಂದ ಮಧ್ಯರಾತ್ರಿಗೆ ಅವನ ವಿಮಾನ ಹೊರಟಿತ್ತು. ಆಗ ಮಿನುಗುತ್ತಿರುವ ತಾರೆಗಳಿಂದ ಬಾನು ಕಿಕ್ಕಿರಿದಿತ್ತು. ಅವನ ವಿಮಾನವು ಪೂರ್ವ ದಿಕ್ಕಿಗೆ ಹೊರಟಿತ್ತು. ನೋಡನೋಡುತ್ತ ರಾತ್ರಿ ಸರಿದಿತ್ತು. ನಸುಕು ಹರಿದಿತ್ತು. ನಿಸರ್ಗದ ಈ ಚಮತ್ಕಾರ ಅವನಿಗೆ ಮೋಜೆನಿಸಿತು. ಬಾನಿನ ತಾರೆಗಳತ್ತ ನೋಡುತ್ತ ಅವನಿಗೆ ಮನಸ್ಸಿನಲ್ಲಿ ಭಾರತೀಯುದೇ ವಿಚಾರ. ಆ ತಾರೆಗಳ ನಡುವೆ ಅವನಿಗೆ ಭಾರತೀಯುದೇ ಆಕೃತಿ ಕಂಡಿತು. ಅವಳ ಚಿಂತನೆಯಲ್ಲಿಯೇ ಅತ ಮುಳುಗಿ ಹೋದನು.

ತೆಹೆರಾನದಲ್ಲಿ ವಿಮಾನ ಇಳಿಯು ಹತ್ತಿತು. ಆಗ ಮುಂಜಾವಿನ ಉಪಾಹಾರದ ವೇಳೆ. ಎಲ್ಲ ಪ್ರಯಾಣಿಕರು ಉಪಾಹಾರಕ್ಕಾಗಿ ಟ್ರೇ ಗಳನ್ನು ಹೊರತೆಗೆದಿದ್ದರು. ಉಪಾಹಾರದ ಒಂದೊಂದೇ ಪದಾರ್ಥ ಬರುತ್ತಿತ್ತು. ಆಲ್ಬರ್ಟನ ಲಕ್ಷ್ಯ ಯಾವುದರಲ್ಲಿಯೂ ಇದ್ದಿಲ್ಲ.

ತೆಹೆರಾನದ ವಿಮಾನ ನಿಲ್ದಾಣದಲ್ಲಿ ವಿಮಾನದ ಪರೀಕ್ಷಣೆ ನಡೆದಿತ್ತು. ವಿಮಾನವೀಗ ಮುಂದಿನ ಪ್ರವಾಸಕ್ಕೆ ಹೊರಡಲಿತ್ತು, ವೇಟಿಂಗ ರೂಮಿನಲ್ಲಿ ಎಲ್ಲ ಪ್ರಯಾಣಿಕರೂ ಕಿರಿದನಿಯಲ್ಲಿ ಮಾತುಕತೆ ನಡೆಯಿಸುತ್ತ ಕುಳಿತಿದ್ದರು. ಉಪಹಾರ ಮುಗಿದಿದ್ದರಿಂದ ಎಲ್ಲರೂ ಕಳೆಗೊಂಡಂತೆ ಇದ್ದರು. ಸೂರ್ಯ ಸಾಕಷ್ಟು ಮೇಲೆ ಬಂದಿದ್ದನು. ಮತ್ತು ತೆಹೆರಾನದ ಹಿಮಾಚ್ಛಾದಿತ ಗುಡ್ಡಗಳ ಮೇಲಿನ ಹಿಮ ಚಕಮಕ ಹೊಳೆಯು ಹತ್ತಿತ್ತು.

ಎಲ್ಲ ಪ್ರಯಾಣಿಕರೂ ಈಗ ವಿಮಾನದಲ್ಲಿ ಕೂಡ್ರಲು ಹೊರಡಲಿದ್ದರು. ಅಷ್ಟರಲ್ಲಿ ಇದುರಿನ ಕೋಣೆಯಿಂದ ಒಬ್ಬ ತರುಣಿ ಲಗುಬಗೆಯಿಂದ ಹೊರಗೆ ಬಂದಳು ಮತ್ತು ಆ ವೇಟಿಂಗ ರೂಮಿನಲ್ಲಿ ಕುಳಿತ ಪ್ರಯಾಣಿಕರ ಹತ್ತಿರ ಬಂದು ಕೇಳಿದಳು. "ದಿನೇಶ ಬಾಬೂ ಚಟ್ಟೋಪಾಧ್ಯಾಯರು ಯಾರು? ಅವರಿಗಾಗಿ ಒಂದು 'ಟೆಲೆಕ್ಸ ಮೆಸೇಜ' ಇದೆ."

ದಿನೇಶ ಬಾಬು ಗಡಿಬಿಡಿಯಿಂದ ಒಳಗೆದ್ದು ಹೋದರು ಮತ್ತು 'ಟೆಲೆಕ್ಸ ಮೆಸೇಜ' ಪಡೆದು ವಿಮಾನದ ಕಡೆಗೆ ಹೋಗಲು ಹೊಟರು.

ವಿಮಾನದಲ್ಲಿ ದಿನೇಶ ಬಾಬುಗಳ ಸ್ಥಳ ಆಲ್ಬರ್ಟನ ಹತ್ತಿರವೇ ಇತ್ತು. ಸ್ವಲ್ಪವೇ ಹೊತ್ತಿನಲ್ಲಿ ದಿನೇಶಬಾಬು ಮತ್ತು ಆಲ್ಬರ್ಟರ ಪರಿಚಯ ಚೆನ್ನಾಗಿ ಆಯಿತು. ಅವರ ಹೆಸರು ತಿಳಿದೊಡನೆ ಆಲ್ಬರ್ಟ ಕೇಳಿದ, "ನೀವು ಕಲಕತ್ತೆಯಲ್ಲಿ ಎಲ್ಲೋ ವಾಸಿಸುತ್ತೀರಿ ಅಲ್ಲವೇ?"

ಆಶ್ಚರ್ಯದಿಂದ ದಿನೇಶಬಾಬು ಉದ್ಗರಿಸಿದರು "ಬಾಂಕೀಪುರದಲ್ಲಿ"

"ಭಾರತೀ ನಿಮ್ಮ ಮಗಳು ಅಲ್ವೇ?"

ಇನ್ನಷ್ಟು ಆಶ್ಚರ್ಯದಿಂದ ದಿನೇಶಬಾಬು ಕೇಳಿದರು "ನಿಮಗೆ ಏನು ಗೊತ್ತು?"

ಆಗ ಆಲ್ಬರ್ಟ ಎಲ್ಲ ವೃತ್ತಾಂತವನ್ನು ತಿಳಿಸಿದನು ಹೌದು, ಅವರ ಪ್ರೇಮದಲ್ದೂ ಕೂಡ!

ಆ ವೃತ್ತಾಂತ ಕೇಳಿ ದಿನೇಶಬಾಬುಗಳಿಗೆ ಏನು ಅನಿಸಿತೋ ಅದರ ಅಂದಾಜು ಮಾಡಲು ಮಾತ್ರ ಅವನಿಗೆ ಆಗಲಿಲ್ಲ. ಅವನ ಮಾತಿಗೆ ದಿನೇಶಬಾಬೂ ಬರೇ ಇಷ್ಟೇ ಅಂದಿದ್ದರು. "ಅರೇ ವಾಃ! ಹೀಗೇನು?"

ನಡುವೆಯೇ ಅವರು ಫ್ರಾಂಜ ಮ್ಯುಲರರ ಬಗೆಗೆ ಕೇಳಿದರು. ಅವರು ದಿವಂಗತರಾದದ್ದು ಆಲ್ಬರ್ಟ ಹೇಳಿದನು. ಆಗ ದಿನೇಶಬಾಬೂ ತನ್ನ ಕತ್ತು ತುಸು ತಗ್ಗಿಸಿ ಅಂದರು. "ಅರೇರೇ! ಅವರಂಥ ಭಾವಿಕ ಮನುಷ್ಯನನ್ನ ನಾನು ನೋಡಿಲ್ಲ. ನಮ್ಮ ಭಾರತದ ಬಗೆಗೆ ಅವರಿಗೆ ಎಷ್ಟು ಪ್ರೇಮ!"

ಆಲ್ಬರ್ಟ ಅಂದ, "ನನಗೂ ನಿಮ್ಮ ಭಾರತದ ಬಗೆಗೆ ತೀರ ಜನ್ಮಜಾತ ಪ್ರೇಮವಿದೆ. ಆದರೆ...."

ದಿನೇಶಬಾಬು ಅವನ ಕಡೆಗೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು. ಆಗ ಅವನು ಎಲ್ಲ ಸಂಗತಿಯನ್ನು ಅವರ ಕಿವಿಗೆ ಹಾಕಿದನು. ಕೊನೆಗೆ ಅಂದನು, "ನನ್ನ ಅಜ್ಜ ಮತ್ತು ತಂದೆಯವರ ಅಸ್ಥಿ ಗಂಗೆಯಲ್ಲಿ ಸೇರಿದವು. ನನ್ನ ಅಜ್ಜಯ್ಯನವರಿಗಂತೂ ನಿಮ್ಮ ದೇಶದ ಭಾರಿ ಪ್ರೇಮ. ನನ್ನ ತಂದೆಯವರಂತೂ ಕೊನೆಗೆ ನಿಮ್ಮ ದೇಶದಲ್ಲಿಯೇ ಹೋಗಿ ಉಳಿದಿದ್ದರು. ಅಂದಾಗ ಆ ದೇಶ ಇರುವದಾದರೂ ಹೇಗೆ, ಈ ನಿಮ್ಮ

ಗಂಗಾ ನದಿಯಾದರೂ ಹೇಗಿದೆ ಎಂಬುದನ್ನು ನೋಡುವ ಇಚ್ಛೆ ನನ್ನಲ್ಲಿ ಬಲು ಬಲವಾಯಿತು. ನನ್ನ ಹಿರಿಯರ ಕೊನೆ ಎಲ್ಲಿ ಒದಗಿ ಬಂತೋ ಆ ಭೂಮಿಯನ್ನು ಒಮ್ಮೆ ಕಣ್ತುಂಬ ನೋಡಬೇಕೆಂದು ಸಹಜವಾಗಿಯೇ ನನಗೆ ಅನಿಸಿತು. ಮತ್ತು ಹಾಗೆ ಯೋಗವೂ ಕೂಡಿ ಬಂತು. ಈ ನಿಮ್ಮ ಭಾರತೀಯ ಸಂಸ್ಕೃತಿಯ ಕುರಿತು ನಮ್ಮ ಕ್ರಪ್‌ಸಾಹೇಬರು ಭವ್ಯವಾದ ಒಂದು ಚಿತ್ರಪಟವನ್ನು ತಯಾರಿಸಲಿದ್ದಾರೆ. ಅದಕ್ಕಾಗಿ ಅವರು ನನ್ನನ್ನು ನಿಮ್ಮ ದೇಶಕ್ಕೆ ಕಳುಹಿಸಿದ್ದಾರೆ. ನಿಮ್ಮ ಆ ಗಂಗಾ ನದಿ!....ನಿಮ್ಮ ದೇಶ ದಲ್ಲಿ ಸದಾಕಾಲವೂ ಪ್ರಕಾಶ ನೀಡುವ ಆ ತೇಜಸ್ವಿಯಾದ ಸೂರ್ಯ....”

ಇದನ್ನು ಮಾತಾಡುವಾಗ ಆಲ್ಬರ್ಟನ ಲಕ್ಷ ಕಿಟಕಿಯಿಂದ ಸಹಜವಾಗಿ ಹೊರಗೆ ಹೋಯಿತು. ಅವರ ವಿಮಾನ ಮೋಡಗಳಲ್ಲಿ ಹೊಕ್ಕಿತ್ತು. ಹೊರಗೆ ಏನೂ ಕಾಣುತ್ತಿದ್ದಿಲ್ಲ. ಆಕಾಶದಲ್ಲಿ ತಳತಳಿಸುವ ಸೂರ್ಯನು ಮೋಡಗಳಲ್ಲಿ ಮುಳುಗಿದ್ದನು.

ಆಲ್ಬರ್ಟ ಮುಂದೆ ಅಂದನು,“ ಭಾರತಕ್ಕೆ ಹೋಗಲು ನನ್ನ ತಾಯಿಯ ಅನುಮತಿ ಸಿಗಲಿಲ್ಲ. ಅವಳಿಗೆ ಸುಳ್ಳೇ ಹೇಳಿ ನಾನು ಭಾರತಕ್ಕೆ ಹೋಗಲು ಹೊರಟೆ ನನಗಂತೂ ಆ ನಿಮ್ಮ ದೇಶದತ್ತ ವಿಲಕ್ಷಣ ಸೆಳೆತ. ಆದರೆ ಭಾರ ತಕ್ಕೆ ಹೋಗಲು ನನ್ನಮ್ಮ ಎಂದಿಗೂ ಸಮ್ಮತಿ ಕೊಡುತ್ತಿದ್ದಿಲ್ಲ. ಭಾರತದ ಬಗಗೆ ಅವಳಿಗೆ ಭಾರೀ ದ್ವೇಷ. ಆ ನಿಮ್ಮ ದೇಶ ಮಾಟ ಮೋಡಿ ಮಾಡುವವರ ದೇಶ. ಭೂತ-ಪ್ರೇತಗಳ ದೇಶ, ಅದೇ ನಿಮ್ಮ ದೇಶ ನಮ್ಮ ಮ್ಯುಲರ ಕುಟುಂಬವನ್ನು ನುಂಗಿತು, ಎಂದು ನನ್ನಮ್ಮನ ಕಲ್ಪನೆ! ಎಂಥ ಮಳ್ಳು ಕಲ್ಪನೆ! ಆದರೆ ಮಾಡುವದೇನು? ”

ಆಲ್ಬರ್ಟನ ಈ ಮಾತಿಗೆ ದಿನೇಶಬಾಬು ಒಂದು ಉದ್ದ ನಿಟ್ಟುಸಿರು ಎಳೆ ದರು ಮತ್ತು ಅಂದರು. “ಆಲ್ಬ್ರೀ ! ಇಲ್ಲಿಂಡಲ್ಲಿಗೂ ಎಲ್ಲ ಹೆಂಗಸರೂ ಒಂದೇ ಸಮ. ನಮ್ಮ ಮನೆಯಲ್ಲಿಯೂ ಇದೇ ನಡೆದಿದೆ. ನನ್ನ ಹೆಂಡತಿ ಥೇಟು ನಿಮ್ಮ ತಾಯಿಯದೇ ನಮೂನೆ! ವಿಮಾನನಿಲ್ದಾಣದಲ್ಲಿ ನನಗೆ ‘ಟಿಲೆಕ್ಸ ಮೆಸೀಜ’ ಬಂದಿತ್ತಷ್ಟೇ ? ಅದು ಅವಳದೇ ಆಗಿತ್ತು. ಮೆಸೇಜ ಏನೆಂದು ಗೊತ್ತೇ ? ಅವಳು ನನಗೆ ತಿಳಿಸಿದ್ದಳು. ನಿಮ್ಮ ಮುಂದಿನ ಪ್ರವಾಸ ರದ್ದು ಮಾಡಿರಿ.

ಏಕೆಂದರೆ ನಿಮಗೆ ಇಂದು ಪ್ರವಾಸದಲ್ಲಿ ಅಪಾಯವಿದೆ. ಅಂದರೆ ಹೇಗೆ ? ತಿಳಿಯಿತಲ್ಲವೇ ?”

ದಿನೇಶಬಾಬು ತುಸು ಹೊತ್ತು ತಡೆದರು ಮತ್ತು ತನ್ನ ಮುಂದಿನ್ನ ಮಾತು ಸರಿಯಾಗಿ ಹೊಂದಿಸಿ ಹೇಳಿದರು. “ನನ್ನ ಹೆಂಡತಿ ಪ್ರತಿಯೊಂದನ್ನು ಒಬ್ಬ ಜ್ಯೋತಿಷಿಯ ಹೇಳಿಕೆಯ ಮೇಲೆ ಮಾಡುತ್ತಾಳೆ.—ಶೀರ ದಿನ ನಿತ್ಯದ ವ್ಯವಹಾರ ಕೂಡ. ದೇವರ ದರ್ಶನಕ್ಕೂ ನಮ್ಮ ಮನೆಯಲ್ಲಿ ಮುಹೂರ್ತ ಬೇಕಾಗುತ್ತದೆ. ಇಂಥ ಮಳ್ಳುತನಕ್ಕೆ ಏನೆನ್ನಬೇಕು? ನಾನು ಈಗ ಈ ನನ್ನ ವಿಮಾನ ಪ್ರವಾಸ ರದ್ದು ಮಾಡಿದ್ದರೆ ನನಗೆ ಹಾನಿಯೆಷ್ಟು ಗೊತ್ತೇ? ಇಪ್ಪತ್ತು ಇಪ್ಪತ್ತೈದು ಸಾವಿರ ರೂಪಾಯಿಯ ನಷ್ಟ ಸುಲಭವಾಗಿ ನನಗೆ ಆಗುತ್ತಿತ್ತು ! ಅವಳು ಹೇಳಲಿಕ್ಕೇನು–ಮುಂದಿನ ಪ್ರವಾಸಕ್ಕೆ ಮುಹೂರ್ತ ಚೆನ್ನಾಗಿಲ್ಲವೆಂದು ? ನನ್ನ ನಷ್ಟ ಅವಳ ಆ ಜ್ಯೋತಿಷಿ ತುಂಬಿಕೊಡುವನೇ? ನೀವೇ ಹೇಳಿ ! ಈ ತೆಹೆರಾನಿನಲ್ಲಿ ನಾನು ಒಂದು ಲಕ್ಷ ರೂಪಾಯಿಯ ರತ್ನಗಂಬಳಿ ಮತ್ತು ರೇಶಿಮೆಯ ಬಟ್ಟೆಯನ್ನು ಖರೀದಿ ಮಾಡಿದ್ದೇನೆ. ಇನ್ನೂ ಖರೀದಿ ಮಾಡುವದಿದೆ. ಅದಕ್ಕಾಗಿ ನಾನು ಕಲಕತ್ತೆಯ ವ್ಯಾಪಾರಿಗಳೊಂದಿಗೆ ಮಾತುಕತೆ ನಡೆಯಿಸಬೇಕು. ಅಂದಾಗ ವೇಳೆಗಳೆದರೆ ಹೇಗೆ ನಡೆದೀತು ? ವ್ಯಾಪಾರದಲ್ಲಿ ಇಂದಿದ್ದ ದರ ಧಾರಣೆ ನಾಳೆ ಇರುವವದಿಲ್ಲ. ಹೌದೋ ಅಲ್ಲ?

ಮತ್ತು ಆಮೇಲೆ ಯಾವದೊಂದು ವಿಷಯದ ತೀರ್ಮಾನ ಹೇಳುವಂತೆ ದಿನೇಶಬಾಬು ಕೊನೆಗೆ ಅಂದರು, “ಭಾರತಕ್ಕೆ ನೀವು ಹೋಗಬಾರದೆಂದು ಹೇಳುವ ನಿಮ್ಮ ತಾಯಿಯೇನು. ವಿಮಾನದಲ್ಲಿ ಮುಂದಿನ ಪ್ರವಾಸ ರದ್ದು ಮಾಡಿರೆಂದು ಹೇಳುವ ನನ್ನ ಹೆಂಡತಿ ಏನು—ಇಬ್ಬರೂ ಹೆಂಗಸರು ಒಂದೇ ರೀತಿ ಹುಚ್ಚರು, ಮೂರ್ಖರು. ಅದಷ್ಟು ಅವರ ಛಂದಕ್ಕೆ ಒಲಿಯಲೇ ಬಾರದು ಇದೇ ಲೇಸು ! ಇನ್ನು ನಮ್ಮ ಭಾರತ ದೇಶವೇನು ನಿಮ್ಮನ್ನು ತಿಂದು ಬಿಡುವದೋ ? ಅಥವಾ ಆ ಜ್ಯೋತಿಷಿ ಹೇಳುವಂತೆ ನಮ್ಮ ವಿಮಾನ ಕುಸಿದು ಬೀಳುವದೋ ! ಆಗುವದಾದರೂ ಏನಿದೆ! ಎಲ್ಲ ಹುಚ್ಚರ ಸಂತೆ !”

ಸ್ವಲ್ಪ ಹೊತ್ತು ಯಾರೂ ಏನೂ ಅನ್ನಲಿಲ್ಲ. ದಿನೇಶಬಾಬುಗಳಿಗೆ ಒಮ್ಮೆಲೇ ಭಾರತಿಯ ಉತ್ಕಟ, ಕಳವಳದ ನೆನಪು ಆಯಿತು. ಅವಳ ಕುರಿತು

ಮಾಹಿತಿ ಈಗ ಆಲ್ಬರ್ಟನಿಂದ ಕೇಳಬೇಕೆಂದು ಅವರಿದ್ದರು. ಆಲ್ಬರ್ಟ ಇದು ರಿಗೆ ನೋಡುತ್ತಿದ್ದ. ವಿಮಾನದ ಬಲ ಬದಿಗೆ ಬಣ್ಣದಲ್ಲಿ ಬರೆದ ಚಿತ್ರಗಳನ್ನು ನೋಡುವದರಲ್ಲಿ ಅವನು ಮಗ್ನನಾಗಿದ್ದ. ಆನೆ, ಒಂಟೆ, ಕುದುರೆ, ವಿಮಾನ ಮುಂತಾದ ಒಂದಕ್ಕಿಂತ ಒಂದು ಹೆಚ್ಚಿನ ಚಿತ್ರಗಳನ್ನು ಅಲ್ಲಿ ರೂಪಿಸಿದ್ದರು. ಪ್ರಗತಿ ಸಾಧಿಸಿ ಮಾನವನು ಅಂತರಿಕ್ಷದಲ್ಲಿ ವಿಜಯವನ್ನು ಗಳಿಸಿದ್ದಾನೆಂಬು ದಕ್ಕೆ ಆ ಚಿತ್ರ ಮಾಲೆ ನಿದರ್ಶಕ ವೆಂಬಂತೆ ಇತ್ತು.

ಅಷ್ಟರಲ್ಲಿ ಘೋಷಣೆ ಬಂದಿತು. "ಅತ್ಯಂತ ಕೆಟ್ಟ ಹವಾಮಾನದ ಮೂಲಕ ನಮ್ಮ ವಿಮಾನವನ್ನು ಅಬೆದಾನ ವಿಮಾನ ನಿಲ್ದಾಣಕ್ಕೆ ಒಯ್ಯಲಾಗು ತ್ತಿದೆ ಮತ್ತು...."

ಆಲ್ಬರ್ಟ ಹೊರಗೆ ನೋಡಿದ. ವಿವಿಧ ಬಣ್ಣದ ಮೋಡಗಳೆಂಬ ರಾಕ್ಷ ಸರು ವಿಮಾನದ ಮೇಲೆ ಏರಿ ಬರುತ್ತಿರುವದು ಕಂಡಿತು. ವಿಮಾನದ ರೆಕ್ಕೆ ಗಳು ಮುಚ್ಚಿ ಮುಸುಕಿ ಹೋಗಿದ್ದವು. ಮೋಡಗಳ ಹೊರತು ಇನ್ನೇನೂ ಕಾಣುತ್ತಿದ್ದಿಲ್ಲ.

ಅಬೇದಾನ ವಿಮಾನ ತಳದಲ್ಲಿ ವಿಮಾನ ಇಳಿಯತೊಡಗಿತು. ಆದರೂ ಮೋಡಗಳ ದಂಡು ಹಿಮ್ಮೆಟ್ಟಲಿಲ್ಲ ಎಲ್ಲ ಪ್ರಯಾಣಿಕರೂ ಕೈಮುಷ್ಟಿಯಲ್ಲಿ ಪ್ರಾಣ ಹಿಡಿದುಕೊಂಡಂತಿತ್ತು. "ನಮ್ಮ ವಿಮಾನ ಬೀಳುವದು ಅಷ್ಟರಲ್ಲಿಯೇ ಇದೆ!" ಎಂದು ದಿನೇಶಬಾಬು ಭಾರಿ ವಿಶ್ವಾಸದಿಂದ ಅಂದರು. ಆದರೆ ಅವರ ಮುಖ ಚರ್ಯೆಯು ಗಾಬರಿಗೆಟ್ಟಂತೆ ಇತ್ತು.

ಅಬೇದಾನ ವಿಮಾನ ನಿಲ್ದಾಣದ "ಓಡು ಪಟ್ಟಿ" ಕಾಣಹತ್ತಿತ್ತು. ಆಗ ಎಲ್ಲರಿಗೂ ಜೀವಕ್ಕೆ ಜೀವ ಬಂತು.

ಆದರೆ ನಿಷ್ಠುರ ನಿಯತಿಯು ಲೀಲೆ ಎಷ್ಟು ವಿಚಿತ್ರ ನೋಡಿರಿ! ವಿಮಾನ ನಿಲ್ದಾಣವು ಕಂಡಿತು. ಆದರೆ ವಿಮಾನದ ರೆಕ್ಕೆಗಳು ಕತ್ತರಿಸಿದಂತೆ ಆದವು. ವಿಮಾನದ ಗಾಲಿಗಳು ಅದರ ಹೊಟ್ಟೆಯೊಳಗಿಂದ ಹೊರಗೆ ಬೀಳಲೇ ಇಲ್ಲ–ಕೂರ್ಮವು ಹೆದರಿ ಕಂಗೆಟ್ಟು ತನ್ನ ಕಾಲುಗಳನ್ನು ಹೊಟ್ಟೆ ಯೊಳಗೇ ಮುದುಡಿ ಕೊಂಡಂತೆ! ವೈಮಾನಿಕನ ಪ್ರಯತ್ನ ನಡೆದೇ ಇತ್ತು. ಆದರೆ ರೆಕ್ಕೆ ಮುರಿದ ಹಕ್ಕಿಯ ಪ್ರಯತ್ನದಂತೆ ಅದು ಕನಿಕರಕ್ಕಾಗಿ ಕಂಡಿತು.

ಈ ಸುದ್ದಿ ತಿಳಿದೊಡನೆ ಪ್ರಯಾಣಿಕರ ಮೋರೆ ಕಂಗೆಟ್ಟಿತು. ಭಯದಿಂದ ಕಪ್ಪಿಟ್ಟಿತು. ಅವರಿಗೆ ತಮ್ಮ ಮೃತ್ಯು ಇದುರಿಗೆ ಕಂಡಂತೆ ಆಯಿತು. ಬದುಕು ಸಾವಿನ ಗೆರೆ ಅದೆಷ್ಟು ಹತ್ತಿರ ! ಸಾವಿನ ಹೊಸ್ತಿಲಲ್ಲಿ ದೊಡ್ಡ ದೊಡ್ಡವರ ಮಾತಿಗೂ ಮಂಕು ಬಡಿದಂತೆ ಆಗುವದೇ ನಿಜ.

ಆಲ್ಬರ್ಟನಿಗೆ ಭಾರತಿಯ ವಿಲಕ್ಷಣ ನೆನಪಾಯಿತು. ಅವಳಿಗಿತ್ತ ವಚನ ಆತ ಈಗ ಪಾಲಿಸುವದು ಅಶಕ್ಯ. ತನ್ನ ಸಾವು ಈಗ ತಪ್ಪದು ಎಂದು ತೀರ್ಮಾನವಾದಾಗ ಅವನ ಮನಸ್ಸಿನಲ್ಲಿ ಒಂದೇ ಒಂದು ಇಚ್ಛೆ ಜಾಗೃತ ವಾಯಿತು. ತನ್ನ ಅಜ್ಜಯ್ಯನಂತೆ, ತನ್ನ ತಂದೆಯಂತೆ ತನ್ನ ಆಸ್ಥಿಗಳು ಗಂಗೆಯನ್ನು ಸೇರಬೇಕು. ಆಗ ತನ್ನ ಜನ್ಮದ ಸಾರ್ಥಕವಾಗುವದು !

ಆದರೆ ಈಗ ಈ ಇಚ್ಛೆಯನ್ನು ಹೇಳುವದಾದರೂ ಯಾರಿಗೆ ?

ಕೂರ್ಮವು ಹೊಟ್ಟೆಯೊಳಗೆ ಎಳೆದು ಕೊಂಡ ಕಾಲನ್ನು ಹೊರಗೆ ತೆಗೆಯಲೇ ಇಲ್ಲ. ಆಲ್ಬರ್ಟನ ಮನಸ್ಸಿನ ಇಚ್ಛೆಯು ಯಾರಿಗೂ ತಿಳಿಯ ಲಿಲ್ಲ. ನಿಯತಿಯೇ ಆ ಇಚ್ಛೆಯ ಟಿಪ್ಪಣಿ ಮಾಡಿ ಕೊಂಡಿತೋ-ಯಾರಿಗೆ ಗೊತ್ತು ?

ರೆಕ್ಕೆ ಮುರಿದ ಹಕ್ಕಿಯಂತೆ ಆಲ್ಬರ್ಟನ ವಿಮಾನವು ಕೆಳಗೆ ಸಾವಿನ ಕಂದರದಲ್ಲಿ ಕುಸಿಯಿತು. ಎಲ್ಲ ಆಟ ಮುಗಿಯಿತು.

— 0 —

## ಆರಂಭದ ಕೊನೆ:

ಆ ವಿಮಾನದಲ್ಲಿ ಕೆಲವೇ ಆಯ್ದ ಪ್ರಯಾಣಿಕರಿದ್ದರು. ಅವರೆಲ್ಲರ ದೇಹಗಳು ಇದ್ದಲಿಯಂತೆ ಕಮರಿ ಹೋಗಿದ್ದವು, ಛಿನ್ನ ವಿಚ್ಛಿನ್ನವಾಗಿದ್ದವು. ಗುರುತು ಸಿಗುವದರ ಆಚೆಗೆ ಹೋಗಿದ್ದವು. ಏನೇ ಆದರೂ ವಿಮಾನ ಕಂಪನಿ ತನ್ನ ಕರ್ತವ್ಯವನ್ನು ಮಾಡಲೇ ಬೇಕು. ಪ್ರಯಾಣಿಕರ ಶರೀರಗಳ ಆ ಛಿನ್ನ ಭಿನ್ನ ಶಕಲಗಳನ್ನು ಅವರ ಆಪ್ತ ಸಂಬಂಧಿಕರಿಗೆ ಕಳಿಸಲಾಯಿತು.

ಬಿಳಿಯ ಶುಭ್ರ ಬಟ್ಟೆಯಲ್ಲಿ ಸುತ್ತಿದ ದಿನೇಶಬಾಬುಗಳ ಕಳೆಬರವನ್ನು ಕಂಡು ನಂದಿನೀದೇವಿ ಕಂಠ ಬಿರಿಯುವಂತೆ ಆಕ್ರಂದನ ಮಾಡಿದಳು. ಮುಂದಿನ ಪ್ರವಾಸ ಮಾಡಬೇಡಿರಿ, ಎಂದು ಸಂದೇಶ ಕೊಟ್ಟರೂ ಅವರು ಅವಳ ಮಾತು ಕೇಳಿದ್ದಿಲ್ಲ. ಮತ್ತು ಈಗ ಅವರು ಅಜ್ಞಾತದ ಪ್ರವಾಸಕ್ಕೆ ಶಾಶ್ವತವಾಗಿ ಹೊರಟು ಹೋಗಿದ್ದರು. ಅವರ ಕಳೆಬರವನ್ನು ಅಪ್ಪಿ ಕೊಂಡು ನಂದಿನೀದೇವಿ ಮಾಡಿದ ಶೋಕವನ್ನು ನೋಡಿ ಯಾರ ಕರಳಿಗೂ ಬರೆ ಬೀಳುವಂತಿತ್ತು. ದಿನೇಶಬಾಬುಗಳ ಅಸ್ಥಿ ಗಂಗೆಯನ್ನು ಸೇರಿದವು. ಆದರೂ ನಂದಿನೀ ದೇವಿಯ ಶೋಕ ತಡೆಯಲಿಲ್ಲ.

ಹೈಡೆಲ್‌ಬರ್ಗದಲ್ಲಿಯೂ ಅದೇ ಪ್ರಕಾರ ನಡೆಯಿತು. ಆಲ್ಬರ್ಟನ ಶವ ಪೆಟ್ಟಿಗೆ ತೆರೆದಾಗ ತನ್ನ ಏಕಮೇವ ಮುದ್ದಿನ ಮಗನ ದೇಹ ಕಂಡು ಏನ್ನಾಳ ದವಡೆಯ ಕೀಲ ಒಮ್ಮೆಲೇ ಕಳಚಿದಂತೆ ಆಯಿತು. ಅವಳು ತನ್ನನ್ನು ಸಾವರಿಸಿಕೊಂಡು ಮಗನ ಮೈಯ ಮೇಲಿಂದ ಕೈಯನ್ನಾಡಿಸಿದಳು. ಆ ಕಳೆಬರದ ಗುರುತು ಏನೂ ಸಿಗುವಂತಿದ್ದಿಲ್ಲ. ಆ ಮೇಲೆ ಆಕೆ ಒಮ್ಮೆಲೇ ತನ್ನ ಮುದ್ದು ಮಗನ ದೇಹವನ್ನು ತನ್ನ ಮೈಯಿಂದ ಮುಚ್ಚಿಕೊಂಡಳು ಮತ್ತು ಎಷ್ಟೋ ಹೊತ್ತು ಅಳುತ್ತ ಕುಳಿತಳು. ಆ ದೃಶ್ಯವೂ ತುಂಬ ಕುರುಣಾಮಯವಾಗಿತ್ತು.

ಅಳುತ್ತ ಅಳುತ್ತ ಅವಳು ಒಮ್ಮೆಲೇ ಬೆಚ್ಚಿ ಬದಿಗೆ ಸರಿದಳು. ಆ ಕಳೇ ಬರದ ಕೈಗೆ ಅವಳು ಗಡಿಯಾರವನ್ನು ಕಂಡಳು. ಅದನ್ನು ತೆಗೆಯುವದು

ತಪ್ಪಿ ಉಳಿದಿತ್ತು. ಆ ಗಡಿಯಾರದತ್ತ ಅವಳ ಗಮನ ಹರಿಯಿತು. ಆ ಗಡಿಯಾರ ಆಲ್ಬರ್ಟನದಿದ್ದಿಲ್ಲ. ಅರ್ಧ ಸುಟ್ಟು ಹೋದ ಆ ಗಡಿಯಾರವನ್ನು ತೆಗೆದು ಅವಳು ನೋಡಿದಳು. ಅದರ ಹಿಂಬದಿಗೆ ಅಕ್ಷರಗಳಿದ್ದವು-ದಿನೇಶ ಬಾಬು ಚಟ್ಟೋಪಾಧ್ಯಾಯ....ಆ ಅಕ್ಷರಗಳನ್ನು ಕಂಡು ಅವಳು ಒಮ್ಮೆಲೇ ದಿಗಿಲು ಬಿದ್ದಳು.

ಆ ದೇಹ ಅಲ್ಬರ್ಟನದಿದ್ದಿಲ್ಲ, ಹಾಗಾದರೆ!....

ಆ ಮೇಲೆ ಮುಂದಿನ ಕ್ರಮಗಳೆಲ್ಲ ನಡೆದವು. ವಿಮಾನ ಕಂಪನಿಗೆ ಹಾಗೆ ತಿಳಿಸಲಾಯಿತು. ಅವರ ಕಡೆಯಿಂದ ಬಂದ ಉತ್ತರ ತುಂಬ ಚಮತ್ಕಾರಿಕವಿತ್ತು. ವಿಮಾನ ಕಂಪನಿ ತನ್ನ ಉತ್ತರದಲ್ಲಿ ವಿಷಾದ ವ್ಯಕ್ತ ಮಾಡುತ್ತ ಬರೆದಿತ್ತು, "ಎಲ್ಲ ಶವಗಳೂ ಗುರುತು ಹಿಡಿಯುವ ಸ್ಥಿತಿಯ ಆಚೆಗೆ ಹೋಗಿದ್ದವು. ಆದ್ದರಿಂದ ಅವು ಅದಲು ಬದಲಾಗಿರಬೇಕು. ನಾವು ಬಾಂಕೀಪುರದಲ್ಲಿ ಕೂಡಲೆ ಚೌಕಶಿ ಮಾಡಿದೆವು. ತಮ್ಮ ಮೃತ ಪುತ್ರನ ಶವಕ್ಕೆ ಅವರ ಪದ್ಧತಿಯಂತೆ ದಹನ ವಿಧಿ ಮುಗಿದು ಗಂಗೆಯಲ್ಲಿ ಯಥಾ ಪ್ರಕಾರ ಅದರ ಅಸ್ಥಿ ವಿಸರ್ಜನೆಯೂ ಆಯಿತು. ಕ್ಷಮಿಸಿರಿ ಈಗ ತಮ್ಮ ಕಡೆಗೆ ಕಳುಹಿಸಿದ ಪ್ರೇತದ ವ್ಯವಸ್ಥೆಯನ್ನು ತಾವು ಪದ್ಧತಿಯಂತೆ ಮಾಡಿಮುಗಿಸಿರಿ."

"ಡಾಯವೆಲ್ಟ" ಈ ಪತ್ರಿಕೆಯಲ್ಲಿ ಅಪಘಾತದ ವೃತ್ತವನ್ನು ಓದಿ ಭಾರತೀ ಏರ್ನಾಳ ಮನೆಗೆ ಬಂದಳು. ಆಗ ಅವಳಿಗೆ ಇದೆಲ್ಲ ಪ್ರಕಾರ ಗೊತ್ತಾಯಿತು, ತನ್ನ ತಂದೆಯ ಶವ ಹೈಡೆಲ ಬರ್ಗದಂಥ ಪರದೇಶಕ್ಕೆ ಬರಬೇಕು. ಮತ್ತು ತನ್ನ ಪ್ರಿಯಕರನ ದೇಹ ಬಾಂಕೀಪುರಕ್ಕೆ ಹೋಗಬೇಕು- ಈ ವಿಚಿತ್ರ ಯೋಗಾಯೋಗದ ಹೊಂದಾಣಿಕೆ ಅವಳಿಗೆ ಹೇಗೆ ಮಾಡಿದರೂ ಆಗಲಿಲ್ಲ. ಕಲ್ಪನೆ ಮೀರಿದ ಘಟನೆಗಳು ಪ್ರತ್ಯಕ್ಷವಾಗಿ ಒದಗಿ ಬರುತ್ತಿದ್ದವು. ಇಂಥ ಸಂಗತಿ ಪ್ರತ್ಯಕ್ಷ್ಯ ಘಟಿಸಿತೆಂದು ಹೇಳಿದರೆ ಯಾರಿಗೂ ನಿಜವೆನಿಸುತ್ತಿದ್ದಿಲ್ಲ- ಹಾಗೆ ಅನಿಸುವಂತೆಯೂ ಇದ್ದಿಲ್ಲ. ಆದರೆ ಅವೆಲ್ಲ ಸಂಗತಿ ಘಟಿಸಿದ್ದವು, ಇದು ಮಾತ್ರ ನಿಜ. ಏರ್ನಾಳಿಗೂ ಭಾರತಿಗೂ ಆದ ಅಪಾರ ದುಃಖ ಮಾತ್ರ ನಿಜವಾಗಿತ್ತು.

* * * *

ಕಾಲಾಂತರದಿಂದ ದುಃಖ ತುಸು ಹಗುರಾದ ಮೇಲೆ ಭಾರತಿ ಏರ್ನಾಳಿಗೆ ಅಂದಳು. "ನಾನು ಇನ್ನು ನನ್ನ ಈ ಮನೆಯಲ್ಲಿ ಉಳಿಯಲು ಬರುತ್ತೇನೆ."

"ಸಂತೋಷದಿಂದ ಬಾ, ನನ್ನ ಅತಿಥಿಯೆಂದು ಇಲ್ಲಿ ಉಳಿ."

ಇದಕ್ಕೆ ನಕಾರಾರ್ಥವಾಗಿ ತನ್ನ ತಲೆ ಅಲ್ಲಾಡಿಸಿ ಭಾರತಿ, "ಛೇ ಛೇ! ಅತಿಥಿಯೆಂದಲ್ಲ. ನಿಮ್ಮ ಸೊಸೆಯೆಂದು! ನಿಮ್ಮ ಮಗನ ಹೆಂಡತಿಯೆಂದು!" ಅಂದಳು. ಏರ್ನಾಳ ಕಣ್ಣು ಒಮ್ಮೆಲೇ ನೀರೂರಿತು. ಅವಳು ಅಂದಳು. "ಅವನೀಗ ಹೋದ. ಈಗ ಅವನ ಹೆಂಡತಿಯೆಂದು ಉಳಿಯುವದರಲ್ಲಿ ಏನು ಅರ್ಥವಿದೆ?"

ಭಾರತೀ ಅಂದಳು. "ಅರ್ಥವೀಗಲೇ ಇದೆ. ನಾವು ಭಾರತೀಯ ಸ್ತ್ರೀಯರು ಸ್ವಾರ್ಥಿಗಳಿರುವದಿಲ್ಲ. ನಿಮ್ಮ ಮಗನೊಂದಿಗೆ ನನ್ನ ಮದುವೆ ಪ್ರತ್ಯಕ್ಷ ಆಗಿದ್ದಿಲ್ಲ. ಆದರೆ ನಾವಿಬ್ಬರೂ ಮನಸ್ಸಿನಿಂದ ಮತ್ತು ದೇಹದಿಂದಲೂ ವಿವಾಹಬದ್ಧರಾಗಿದ್ದೆವು. ಈಗ ನಾನು ಆ ಲಗ್ನಬಂಧವನ್ನು ಮುರಿಯಲಾರೆ ಲಗ್ನ ಮಾಡಿಕೊಂಡು ಗಂಡ ಹೋದನೆಂದರೆ, ನಾವು ಭಾರತೀಯ ಸ್ತ್ರೀಯರು ವಿಧವೆಯರೆಂದು ಅವನ ಹೆಸರಿನಿಂದ ಇಡಿಯ ಜನ್ಮ ಕಳೆಯುತ್ತೇವೆ. ಈ ಮನೆಯಲ್ಲಿ ನಿಮ್ಮ ಮಗನ ವಿಧವೆಯೆಂದು ನನಗೆ ಇರಲು ಕೊಡಿ. ಇಷ್ಟು ಭಿಕ್ಷೆ ನನಗೆ ಹಾಕಿರಿ!"

ಏರ್ನಾ ಗದ್ಗದಳಾಗಿ ಅಂದಳು. "ಭಿಕ್ಷೆ? ಹಾಗನ್ನ ಬೇಡ, ಸಂತೋಷದಿಂದ ಇಲ್ಲಿ ಉಳಿ."

ಮತ್ತು ಕಳವಳಗೊಂಡು ಏರ್ನಾ ಮುಂದರಿದಳು. "ಅಲ್ಲವೇ, ನನ್ನ ಇಡಿಯ ಮನೆ ನಿನ್ನ ಆ ಗಂಗೆಗೆ ಸೇರಿತು. ಈಗ ನಾ ನಿನಗೆ ಯಾವ ಬಾಯಿಯಿಂದ ಬೇಡವೆನ್ನಲಿ? ಬಾ. ಸಂತೋಷದಿಂದ ಬಂದು ಇಲ್ಲಿ ಉಳಿ. ಕೆಡುಕೆನಿಸುವದು ಇಷ್ಟೇ—ನನ್ನ ಮಗ ಈ ಮನೆಯಿಂದ ಶಾಶ್ವತವಾಗಿ ಹೊರಬಿದ್ದು ಹೋದ ಮತ್ತು ಅವನ ಹೆಂಡತಿ ಇಲ್ಲಿ ಶಾಶ್ವತವಾಗಿ ಉಳಿಯಲು ಬಂದಳು. ಇನ್ನೂ ಒಂದು ದುಃಖವಿತ್ತು. ನಮ್ಮ ಮ್ಯುಲರ ಮನೆತನದ ಎಲ್ಲ....ಎಲ್ಲ ವಂಶ ಕಡಿದುಹೋಯಿತೇ ಽಽ!....ಬೇರುಗೂಡಿ ಕಿತ್ತು ಹೋಯಿತು!

ಇದಕ್ಕೆ ಭಾರತೀ ತಲೆತಗ್ಗಿಸಿ ಅಂದಳು. "ಹಾಗನ್ನಬೇಡಿ! ನಿಮ್ಮ ಮ್ಯುಲರ ವಂಶ ನನ್ನ ಹೊಟ್ಟೆಯಲ್ಲಿ ಬೆಳೆಯುತ್ತಿದೆ. ಆ ವಂಶ ದೀಪವನ್ನು ಸಂಗಡ ತೆಗೆದುಕೊಂಡೇ ನಾನು ಈ ಮನೆಗೆ ಬಂದಿದ್ದೇನೆ....ಶಾಶ್ವತವಾಗಿ ಉಳಿಯಲಿಕ್ಕೆ!"

ಏರ್ನಾ ಅವಳ ಶಬ್ದಗಳನ್ನು ಕೇಳಿದಳು. ಅವಳ ಮೈಮೇಲೆ ರೋಮಾಂಚಗಳೆದ್ದು ನಿಂತವು. ಆಮೇಲೆ ಅವಳ ವೃತ್ತಿ ಮೆಲ್ಲಮೆಲ್ಲಗೆ ಬಧಿರವಾಯಿತು. ಎಂದೂ ಕಂಡಿರದ ಗಂಗಾತೀರ ಅವಳಿಗೆ ಕಾಣಿಸಿತು. ದಿನೇಶ ಬಾಬುಗಳ ಅಸ್ಥಿಗಳೊಂದಿಗೆ ಅವುಗಳನ್ನು ಗಂಗೆಯಲ್ಲಿ ವಿಸರ್ಜಿಸಲಿಕ್ಕೆ ತಾನು ಭಾರತಿಯ ಸಂಗಡ ಭಾರತಕ್ಕೆ ಹೊರಟಿದ್ದೇನೆ—ಎಂಬ ಭಾಸವಾಯಿತು. ಆಮೇಲೆ ಗಂಗೆಯ ತಡಿಯಲ್ಲಿ ಆಲ್ಬರ್ಟನ ಹುಡುಗ,—ತನ್ನ ಮೊಮ್ಮಗ ಆಡುತ್ತಿರುವದನ್ನು ಅವಳು ಕಂಡಳು. ಗಂಗೆಯ ಕಡೆಗೆ ಹೊರಟ ಮ್ಯುಲರ ಕುಟುಂಬದ ನಾಲ್ಕನೆಯ ತಲೆಮಾರು ಇದು!—ಇಡಿ ಇಡಿಯ ಮ್ಯುಲರ ಕುಟುಂಬವು ಗಂಗೆಯಲ್ಲಿ ಸೇರಿತು. ಎರಡೂ ಸಂಸ್ಕೃತಿಗಳ ಸಂಗಮವಾಗುತ್ತಿತ್ತು. ಬರ್ಲಿನ್ ಸಂಸ್ಕೃತಿ ಕೊನೆಗೆ ಗಂಗೆಗೆ ಕೂಡುತ್ತಿದ್ದುದು ಅವಳಿಗೆ ಸ್ಪಷ್ಟವಾಗಿ ಕಂಡಿತು.

——

## ನಮ್ಮ ಮುಂಬರುವ ಪ್ರಕಟನೆಗಳು

೧) ದಲಿತೋದ್ಧಾರಕ ಡಾ. ಅಂಬೇಡಕರ

ಲೇ. ಶಂ. ವಾ. ಜಠಾರ

೨) ಭೇಟಿ

ಲೇ : ಶ್ರೀ ಜ. ಶ್ರೀ. ಟಿಳಕ, ಎಂ. ಪಿ.
ಸಂಪಾದಕರು 'ಕೇಸರಿ,' ಪುಣೆ

೩) ಮಹಮದೀಯ ಹಬ್ಬಗಳ ಪರಿಚಯ

೪) ಧಾರವಾಡ ಜಿಲ್ಹಾ ಕೈಪಿಡಿ

೫) Dharwar District Directory

೬) Hubli-Dharwar Guide.

೭) ಹುಬ್ಬಳ್ಳಿ—ಧಾರವಾಡ ಮಹಾನಗರ ಕೈಪಿಡಿ

೮) ಅಮೃತ ಪುತ್ರ ಲೇ: ಭಾ. ದ. ಖೇರ.

ದಿವಂಗತ ಲಾಲ ಬಹಾದ್ದೂರ ಶಾಸ್ತ್ರಿ ಅವರ (ಸಮರ್ಪಿತ ಜೀವನದ ಬಗ್ಗೆ) ಚರಿತ್ರಾತ್ಮಕ ಕಾದಂಬರಿ.

ಸುಬೋಧ ಸಾಹಿತ್ಯ, ಧಾರವಾಡ.